XIV
K. G. Bhat.

# ಕಾಲಚಕ್ರ

( ಸಾಮಾಜಿಕ ಕಾದಂಬರಿ )

ಅ. ನ. ಕೃಷ್ಣರಾಯ

ಆನಂದ್ ಬ್ರದರ್ಸ್
ಬೆಂಗಳೂರು - ೨

# ಮುನ್ನುಡಿ

ಪ್ರಾಚೀನಭಾರತದ ಕೆಲವು ಸಂಪ್ರದಾಯಗಳನ್ನು ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದರೆ ಅವುಗಳಲ್ಲಿದ್ದ ಅಸ್ತಿತ್ವ ಕಂಡುಬರುತ್ತದೆ. ಪ್ರಾಚೀನ ಭಾರತದ್ದು ಎಂದಕೂಡಲೆ ಎಲ್ಲವೂ 'ಗೊಡ್ಡು' ಎಂದು ಅಲ್ಲೆಗಳೆಯುವುದೂ, ಪ್ರಾಗತಿಕವಾದುದೆಲ್ಲಾ ರಷ್ಯಾ, ಫ್ರಾನ್ಸ್, ಅಮೇರಿಕಾ, ಇಂಗ್ಲೆಂಡುಗಳಿಂದಲೇ ಬರಬೇಕೆಂದು ಬಯಸುವುದೂ ನಮ್ಮ ಭಾವಬಂಧನದ ಸಂಕೇತ.

ಸಾಮಾಜಿಕ ವ್ಯವಸ್ಥೆಗೆ ಪ್ರಾಚೀನ ಭಾರತ ವಿಶೇಷ ಲಕ್ಷ್ಯಕೊಟ್ಟದು ಕಂಡುಬರುತ್ತದೆ. ಗೃಹವ್ಯವಸ್ಥೆಯೇ ಸಮಾಜದ ವ್ಯವಸ್ಥೆಗೆ ಅಸ್ತಿಭಾರ; ಸಮಾಜ ವ್ಯವಸ್ಥೆಯೇ ರಾಷ್ಟ್ರದ ವ್ಯವಸ್ಥೆಗೆ ಅಸ್ತಿಭಾರ ಎಂದು ಪ್ರಾಚೀನ ಭಾರತೀಯರು ಬಗೆದ ಹಾಗೆ ಕಾಣುತ್ತದೆ. ರಾಜಕೀಯ ಪರಿವರ್ತನ, ನೂತನ ಸಂಸ್ಕೃತಿಗಳ ಆಘಾತ, ವೈಯಕ್ತಿಕ ಪ್ರತಿಷ್ಠೆಯ ಬೆಳವಳಿಗೆಯಿಂದ ನಮ್ಮ ಗೃಹಗಳ ಹಾಗೂ ಸಮಾಜದ ವ್ಯವಸ್ಥೆ ಶಿಥಿಲವಾಯಿತು. ಶಿಥಿಲ ಸಮಾಜ ರಾಷ್ಟ್ರದ ಭದ್ರತೆಗೆ ಬಲವಾದ ಕೊಡಲಿ ಪೆಟ್ಟು ಹಾಕಿತು.

ಹಿಂದುಗಳಲ್ಲಿ ವ್ಯಕ್ತಿವಾದವೇ (individualism) ಪ್ರಧಾನವಾಗಿ ಅವರಲ್ಲಿ ಸಮಾಜವಾದ, ರಾಷ್ಟ್ರವಾದ ಬೆಳೆಯಲಿಲ್ಲವೆಂಬ ತಪ್ಪುಭಾವನೆಯನ್ನು ಐರೋಪ್ಯ ಇತಿಹಾಸಕಾರರು ಪ್ರಚಾರಮಾಡಿದರು. ಹಿಂದುಗಳು ವ್ಯಕ್ತಿವಾದಕ್ಕೆ ಕೊಟ್ಟಿರುವ ಅರ್ಥವೇ ಅವರ ರಾಷ್ಟ್ರೀಯತೆಯ ದ್ಯೋತಕವಾಗಿದೆ. ಹಿಂದುಗಳು 'ಉದ್ಧರೇದಾತ್ಮನಾತ್ಮನಂ' ಎಂದು ಹೇಳಿದಾಗ 'ಮಮಾತ್ಮಾ ಸರ್ವಭೂತಾತ್ಮಾ' ಎಂಬ ತತ್ತ್ವವನ್ನು ಚೆನ್ನಾಗಿ ನೆನಪಿನಲ್ಲಿಟ್ಟಿದ್ದರು. ಪ್ರತಿಯೊಬ್ಬನೂ ತನ್ನ ಕುಂದುಕೊರತೆಗಳನ್ನು, ಓರೆಕೋರೆಗಳನ್ನು ತಿದ್ದಿಕೊಂಡು ಋಜು ಮಾರ್ಗದಲ್ಲಿ ನಡೆದರೆ, ಸತ್ಯಾರ್ಥಿಯಾದರೆ ಅವನಿಂದ ಸಮಾಜ, ರಾಷ್ಟ್ರ ಉದ್ಧಾರವಾಗುತ್ತದೆ ಎನ್ನುವುದೇ ಹಿಂದುಗಳ ವಿಶ್ವಾಸವಾಗಿತ್ತು. ವ್ಯಕ್ತಿಶಕ್ತಿಗಿಂತಲೂ ರಾಷ್ಟ್ರಶಕ್ತಿ ಹಿರಿದೆಂದು ಹಿಂದುಗಳು ತಿಳಿಯದಿರಲಿಲ್ಲ. ಆದರೆ ದುರ್ಬಲ ವ್ಯಕ್ತಿಗಳಿಂದ ಕೂಡಿದ ಸಮಾಜ—ರಾಷ್ಟ್ರ ಸಶಕ್ತವಾಗಿರುವುದೇ ?—ಸುದೃಢವಾಗಿರುವುದೇ ? ಐರೋಪ್ಯ ಜಗತ್ತು ವ್ಯಕ್ತಿವಾದವನ್ನು ಅದರ ಕೇವಲ ಸ್ವರೂಪ (absolute form)

ದಲ್ಲಿ ನೋಡಿತು; ಭಾರತ ವ್ಯಕ್ತಿವಾದವನ್ನು ಅದರ ಸಾಪೇಕ್ಷಸ್ವರೂಪ (relative form) ದಲ್ಲಿ ನೋಡಿತು.

'ಕಾಲಚಕ್ರ' ಕಾದಂಬರಿಯಲ್ಲಿ ನಾನು ವ್ಯಕ್ತಿವಾದ ಮತ್ತು ಅದರ ಅನುವರ್ತಿಯಾದ ಗೃಹವ್ಯವಸ್ಥೆಯನ್ನು ಸಾಪೇಕ್ಷ ಸ್ವರೂಪದಲ್ಲಿ ನೋಡಲು ಪ್ರಯತ್ನಿಸಿದ್ದೇನೆ. ನಾಗೇಂದ್ರ, ರಂಗನಾಯಕಿಯರ ವಿಲೋಭಪೂರಿತ ವ್ಯಕ್ತಿವಾದ ಮಹಾಬಲರಾಯನ ಸಂಸಾರದ ಪತನಕ್ಕೆ ಕಾರಣವಾದುದಲ್ಲದೆ, ಅದಕ್ಕೆ ಸಂಬಂಧಪಟ್ಟ ನಾಲ್ಕಾರುಮನೆಗಳ ಅಪಯುಶಸ್ಸಿಗೂ ಕಾರಣವಾಯಿತೆಂದು ತೋರಿಸಲು ಯತ್ನಿಸಿದ್ದೇನೆ. ನಾಗೇಂದ್ರ, ರಂಗನಾಯಕಿಯರ ನಡತೆ ನೀತಿಗೆ ಸಂಬಂಧಿಸಿದಂತೆ ಸಮಾಜದ ಸುವ್ಯವಸ್ಥೆಗೂ ಸಂಬಂಧಪಟ್ಟುದಾಗಿದೆ. ಅವರ ದುರಂತ ಜೀವನವನ್ನು ನಾವು ಕೇವಲ ವ್ಯಕ್ತಿ ಪತನವೆಂದು ಭಾವಿಸುವುದಿಲ್ಲ; ಸಾಮಾಜಿಕ ಶೈಥಿಲ್ಯದ ಸಂಕೇತವೆಂದೂ ಭಾವಿಸುತ್ತೇವೆ.

ನೈಸರ್ಗಿಕ ಚಿತ್ರಗಳನ್ನು ಕೊಡುವ ಕಲಾವಿದನನ್ನು ಓದುಗರು ಕೆಲವು ಪ್ರಶ್ನೆ ಕೇಳುತ್ತಾರೆ: ದುರಂತ, ಪತನ, ವಿಲೋಭನೆಗಳನ್ನೇ ವಸ್ತುಮಾಡಿಕೊಳ್ಳಬೇಕೇಕೆ? ಸುಕುಮಾರ ವಸ್ತುಗಳನ್ನಾಯ್ದುಕೊಂಡು, ಉನ್ನತ ಜೀವನದ ಚಿತ್ರಗಳನ್ನೇಕೆ ಕೊಡಬಾರದು? ಕಲಾವಿದ ಕೊಡಬಯಸುವುದು ನೈಸರ್ಗಿಕ ಚಿತ್ರಗಳನ್ನು—ಓದುಗರು ಬಯಸುವುದು ಆದರ್ಶ ಚಿತ್ರಗಳನ್ನು. ಕಲಾವಿದನ ಚೌಕಟ್ಟಿನಲ್ಲಿ ಅಡಕವಾದ ಚಿತ್ರ ಅವನ ಆಕಾಂಕ್ಷೆಯನ್ನು ಈಡೇರಿಸಿದೆಯೇ!—ಅವನು ತನ್ನಮುಂದೆ ನಿರ್ದಿಷ್ಟವಾಗಿಟ್ಟುಕೊಂಡ ಗುರಿಯನ್ನು ಸಾಧಿಸಿದ್ದಾನೆಯೇ? ಎಂದು ಓದುಗರು ವಿಚಾರಮಾಡಬೇಕಲ್ಲದೆ ತಮ್ಮ ಮನಸ್ಸಿನ ಪ್ರತೀಕಗಳು ಕಲಾವಿದನ ಕೃತಿಯಲ್ಲಿ ಮೂಡಿಲ್ಲವೆಂದು ಅಸಮಾಧಾನಗೊಳ್ಳಬಾರದು. ಈ ಕಾದಂಬರಿಕಾರ ದುರಂತ ಜೀವನವನ್ನು ಪರಿಗಣನೆಗೆ ತೆಗೆದುಕೊಂಡಿರುವಂತೆ ಸೌಕುಮಾರ್ಯವನ್ನೂ ಲಕ್ಷಿಸಿದ್ದಾನೆಂಬುದನ್ನು ಓದುಗರು ಮರೆಯಬಾರದು. 'ಕಾಲಚಕ್ರ' ಕಾದಂಬರಿಯಲ್ಲೇ ಗುಂಡಪ್ಪನವರು, ನಾಣಿ, ಸುಬ್ಬುಕೃಷ್ಣ, ಅಂಬುಜಮ್ಮನವರು, ನರಸೂ, ಪುಟ್ಟತಾಯಮ್ಮ ಮೊದಲಾದ ಶುದ್ಧಜೀವಿಗಳೂ ಬಂದಿದ್ದಾರೆ.

ಸುಕುಮಾರವಸ್ತುಗಳನ್ನೇ ಆಯ್ದುಕೊಂಡು, ಉನ್ನತ ಜೀವನದ ಚಿತ್ರಗಳನ್ನೇ ಕೊಡಬೇಕೆಂದು ಯಾವ ಕಲಾವಿದ ಬಯಸುವುದಿಲ್ಲ. ಆದರೆ

ಕಲಾವಿದ ಪಲಾಯನಸೂತ್ರವಾದಿ (escapist) ಯಲ್ಲ—ಅವನು ಸತ್ಯ ದೃಷ್ಟ. ಕಣ್ಣಿಗೆ ಕಾಣುವ ಕೊಳಚೆಯನ್ನವನು ಎತ್ತಿ ತೋರುತ್ತಾನೆ—ಅದು ಉಳಿಯಬೇಕೆಂದಲ್ಲ, ಅಳಿಯಬೇಕೆಂದು. ಸತ್ಯಸೂರ್ಯನನ್ನು ಅಡ್ಡಗಿಸಿರುವ ಮೋಡವನ್ನು ನಿವಾರಿಸದಿದ್ದರೆ ಅವನ ಬೆಳಕು ಬಿತ್ತರಿಸುವುದು ಹೇಗೆ? ಇಂದಿನ ನಮ್ಮ ಜೀವನದ ರುದ್ರ, ಸುಕುಮಾರತೆಗಳ ಪ್ರಮಾಣವೆಷ್ಟು? ನಮ್ಮ ಜೀವನದ ಗುರಿಯೇನು—ನೀತಿಯ ನೆಲಗಟ್ಟು ಯಾವುದು-ವ್ಯಷ್ಟಿ ಸಮಷ್ಟಿಗಳ ಸಂಬಂಧವೇನಾಗಿದೆ—ನಮ್ಮ ಜೀವನ ಇಳಿಮುಖವಾಗಲು ಕಾರಣ ಯಾವುದು ಮೊದಲಾದ ಸಮಸ್ಯೆಗಳನ್ನು ವಿವೇಚಿಸಬೇಡವೇ? ಪ್ರಗತಿಶೀಲ ಮನೋಭಾವವುಳ್ಳ ಕಾದಂಬರಿಕಾರ ಸತ್ತ ನಿಸರ್ಗವನ್ನೋ, ಬದುಕದಿರುವ ಆದರ್ಶವನ್ನೋ ವರ್ಣಿಸುತ್ತ ಓದುಗರಿಗೆ 'ಕಚಕುಳಿ' ಇಡುವುದಿಲ್ಲ. ಇದ್ದುದನ್ನು ಇದ್ದಂತೆ ಹೇಳಿದಾಗ ಅವನು ನಿಸರ್ಗವನ್ನಾಗಲಿ, ಆದರ್ಶವನ್ನಾಗಲಿ ಪ್ರತಿಬಿಂಬಿಸದಿರಬಹುದು. ಆದರೆ ಅವನ ಗುರಿ-ಆದರ್ಶ 'ಪುಸ್ತಕದ ಬದನೆಕಾಯಿ' ಆಗದೆ ಜೀವಂತ ಸತ್ಯವಾಗಬೇಕು. ಅದರ ಚೇತೋಹಾರಿತ್ವ ಪ್ರತಿಯೊಬ್ಬ ವ್ಯಕ್ತಿಯ ನರನಾಡಿಗಳಲ್ಲಿ ಹರಿಯಬೇಕು ಎಂಬುದೇ ಆಗಿರುತ್ತದೆ.

'ಕಾಲಚಕ್ರ' ಕಥೆಯನ್ನು ನಾನು ನಿರೂಪಿಸಿದಾಗ ಕೇಳಿ ಸಂತೋಷಪಟ್ಟು, ಇದನ್ನು ಬರೆಯಲೇಬೇಕೆಂದು ಒತ್ತಾಯಪಡಿಸಿದವರು ಆತ್ಮೀಯ ಎಂ. ಸುಬ್ರಹ್ಮಣ್ಯರಾಜ ಅರಸಿನವರು (ಚದುರಂಗರು). ಇದನ್ನು ಧಾರಾವಾಹಿನಿಯಾಗಿ ತಮ್ಮ 'ಶಕ್ತಿ' ಮಾಸಪತ್ರಿಯಲ್ಲಿ ಪ್ರಕಟಿಸಿದವರು ಅದರ ಸಂಪಾದಕಿಯರು. ಈಗ ಈ ಗ್ರಂಥರೂಪವಾಗಿ ಪ್ರಕಟಿಸಿರುವವರು ಮೆಸರ್ಸ್ ಆನಂದ್ ಬ್ರದರ್ಸ್ ಕಂಪೆನಿಯವರು. ಇವರೆಲ್ಲರಿಗೂ ನನ್ನ ನೆನಕೆ ಸಲ್ಲುತ್ತದೆ.

'ಅನ್ನಪೂರ್ಣ' ವಿಶ್ವೇಶ್ವರಪುರಂ
ಬೆಂಗಳೂರು - ೨
೧೨—೧೦—೧೯೫೧

ಅ. ನ. ಕೃಷ್ಣರಾಯ

# ಕಾಲಚಕ್ರ

## ೧

ಚೇಳೂರು ಜಹಗೀರದಾರರೆಂದರೆ ಅವರ ಪರಿಚಯ ಕೆಲವರಿಗಾಗು ತ್ತಿತ್ತು. ಗಿರಿಜಾಮೀಸೆ ಚೌಡಪ್ಪನವರು ಎಂದರೆ ಅವರ ಪರಿಚಯ ಎಲ್ಲರಿಗೂ ಆಗುತ್ತಿತ್ತು. ಚೌಡಪ್ಪನವರ ಜಹಗೀರದಾರಿಕೆಗಿಂತ ಅವರ ಗಿರಿಜಾಮೀಸೆ ಹೆಚ್ಚು ಪ್ರಸಿದ್ಧಿಪಡೆದಿತ್ತು. ಆ ಮೀಸೆಗೆ ಅವರು ಮಾಡುತ್ತಿದ್ದ ಆರೈಕೆ ಲೋಕವಿದಿತವಾಗಿತ್ತು. ಅದಕ್ಕೆ ಕೊಬ್ಬರಿಎಣ್ಣೆ ಬಳಿದು, ಬಾಚಿ, ತೀಡಿ ಒಂದು ವಿಚಿತ್ರ ಮಾದರಿಯಲ್ಲಿ ಕೂಡಿಸುತ್ತಿದ್ದರು. ಚೌಡಪ್ಪನವರ ಮುಖಲಕ್ಷಣ ಅಷ್ಟು ಅದ್ಭುತವಾದ ಮೀಸೆ ಹೊರಲು ಸಮರ್ಥವಾಗಿರಲಿಲ್ಲ. ತೆಳ್ಳನೆಯ ಕೋಲುಮುಖ, ಎಣ್ಣೆಗೆಂಪುಬಣ್ಣ, ತಲೆಯ ಮೇಲೆ ಸಣ್ಣ ಚಂಡಿಕೆ. ಮುಖದಷ್ಟೇ ನೀಳ ಅವರ ಮೈಕಟ್ಟು ಕೂಡ. ಚೇಣಿಕಬ್ಬು ಇದ್ದ ಹಾಗಿದ್ದಾರೆ ನಮ್ಮ ರಾಯರು ಎಂದು ಚೇಳೂರಿನ ಜನ ಅಭಿಮಾನದಿಂದ ಹೇಳುತ್ತಿದ್ದರು. ಆ ಎತ್ತರದ ದೇಹಕ್ಕೆ ಚೌಡಪ್ಪನವರು ಸ್ವಚ್ಛವಾದ ಮಲ್ ಪಂಚೆ, ಇಂಗ್ಲಿಷ್ ಟ್ವಿಲ್ಲಿನ ಷರಟು ತೊಡಿಸುತ್ತಿದ್ದರು. ಕೈಯಲ್ಲಿ ಬಣ್ಣ ಬಣ್ಣದ ಕರವಸ್ತ್ರ, ಬೆಳ್ಳಿಯ ನಶ್ಯದ ಡಬ್ಬಿ ಇದ್ದೇ ತೀರಬೇಕು.

ಚೌಡಪ್ಪನವರಿಗೆ ಜಹಗೀರನ್ನು ಯಾವ ರಾಜ ಮಹಾರಾಜರೂ ಕೊಟ್ಟಿರಲಿಲ್ಲ. ಹಳ್ಳಿಗಳ ಕಡೆ ಸ್ವಲ್ಪ ದೊಡ್ಡ ಜಮೀನುದಾರರನ್ನು ಜಹಗೀರ ದಾರರು ಎಂದು ಕರೆಯುವ ವಾಡಿಕೆ. ಚೌಡಪ್ಪನವರದು ಚೇಳೂರಿನಲ್ಲಿ ಹತ್ತು ಎಕರೆ ಗದ್ದೆ, ನಲವತ್ತು ಎಕರೆ ಹೊಲ, ಎಂಟು ಎಕರೆ ತೋಟವಿತ್ತು. ವಂಶಪಾರಂಪರ್ಯವಾಗಿ ಬಂದ ಆಸ್ತಿಯನ್ನು ರೂಢಿಸಿಕೊಂಡು ಸುಖಜೀವನ ಮಾಡುತ್ತ ಬಂದಿದ್ದರು. ಆಸ್ತಿಯನ್ನು ಬೆಳಸುವ ಪ್ರಯತ್ನವನ್ನು ಚೌಡಪ್ಪ ನವರು ಮಾಡಲಿಲ್ಲ, ಅದನ್ನು ಕಳೆಯುವ ಅವಿವೇಕವನ್ನೂ ತೋರಿಸಲಿಲ್ಲ.

ಚೌಡಪ್ಪನವರ ಮೈಕಟ್ಟಿನಿಂದ ಅವರ ವಯಸ್ಸು ಹೇಳುವುದು ಕಷ್ಟ ಸಾಧ್ಯವಾಗಿತ್ತು. ಹತ್ತಿಪ್ಪತ್ತು ವರ್ಷಗಳಿಂದ ಅವರನ್ನು ನೋಡುತ್ತಿದ್ದವರು ಅವರು ಮೊದಲಿನಿಂದ ಹೀಗೇ—ಒಂದೇ ಸಮನಾಗಿದ್ದಾರೆ ಎಂದು ಹೇಳು ತ್ತಿದ್ದರು. ಅವರಿಗೆ ಕಾಯಿಲೆ ಕಸಾಲೆ ಬಂದುದೇ ಅಪರೂಪ. 'ನನ್ನಂಥ

ವರನ್ನು ನಂಬಿಕೊಂಡರೆ ಡಾಕ್ಟರು, ಪಂಡಿತರು ಹೊಟ್ಟೆಯ ಮೇಲೆ ಒದ್ದೆ ಬಟ್ಟೆ ಹಾಕಿಕೊಳ್ಳಬೇಕಾಗುತ್ತೆ' ಎಂದು ಚೌಡಪ್ಪನವರು ಆಗಾಗ್ಗೆ ಜಂಭ ದಿಂದ ಹೇಳುತ್ತಿದ್ದರು.

ಚೌಡಪ್ಪನವರ ಕುಟುಂಬ ತೀರಿಕೊಂಡಾಗ ಅವರ ವಯಸ್ಸು ಐವತ್ತು ದಾಟಿರಬಹುದು. ಅವರ ಆಸ್ತಿಪಾಸ್ತಿ, ಜೀವನದ ಸೊಗಸು, ಆರೋಗ್ಯ ಭಾಗ್ಯ ಕಂಡು ಹೆಣ್ಣುಕೊಡಲು ಅನೇಕರು ಮುಂದುವರಿದರು. ಚೌಡಪ್ಪ ನವರು 'ಇನ್ನೇಕೆ ನನಗೆ ಮದುವೆ ಈ ವಯಸ್ಸಿನಲ್ಲಿ. ಆ ಸೌಭಾಗ್ಯವನ್ನೂ ಅನುಭವಿಸಿದ್ದಾಯಿತಲ್ಲಾ. ಇನ್ನು ಇರುವ ನಾಲ್ಕು ದಿನ ರಾಮಾ ಕೃಷ್ಣಾ ಎಂದುಕೊಂಡು ಹಾಯಾಗಿದ್ದರಾಯಿತು' ಎಂದು ನಿರ್ಧರಿಸಿದರು.

ಅವರ ಮನೆ ವಹಿವಾಟವೆಲ್ಲಾ ತಿಮ್ಮಮ್ಮನವರ ಕೈಯಲ್ಲಿ. ಚೌಡಪ್ಪ ನವರ ಹೆಂಡತಿ ಬದುಕಿದ್ದಾಗಲೂ ತಿಮ್ಮಮ್ಮನವರೇ ಎಲ್ಲಾ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು. ಮಗಳನ್ನೇ ಸರ್ವಸ್ವವೆಂದು ತಿಳಿದುಕೊಂಡು, ಅಳಿಯನನ್ನೇ ಮಗನೆಂದು ಭಾವಿಸಿಕೊಂಡು ತಿಮ್ಮಮ್ಮನವರು ಕಾಲ ತಳ್ಳುತ್ತಿದ್ದರು.

ಹಳ್ಳಿಯ ಜೀವನ ಚೌಡಪ್ಪನವರಿಗೂ ಸಾಕಾಗಿ ಹೋಗಿತ್ತು. ಹೆಂಡತಿ ತೀರಿಕೊಂಡ ಮೇಲಂತೂ ಚೇಳೂರು ಅವರಿಗೆ ತೀರ ನೀರಸವಾಯಿತು. ಊರಿನಲ್ಲಿ ಅವರಿಗಿದ್ದ ಸ್ಥಾನಮಾನಗಳಿಂದ ಹೊತ್ತುಗಳೆಯುವುದು ದೊಡ್ಡ ವಿಷಯವಾಗಿರಲಿಲ್ಲ. ಆದರೆ ಹಳ್ಳಿಯ ರಾಜಕಾರಣ ಚೌಡಪ್ಪನವರಿಗೆ ಮೊದಲಿನಿಂದಲೂ ಸೇರದು. ಜತೆಗೆ ತಾಯಿಯಿಲ್ಲದ ಒಬ್ಬನೇ ಮಗ ಮಹಾಬಲನ ಭವಿಷ್ಯದ ಜವಾಬ್ದಾರಿಯೊಂದು ಹೆಗಲ ಮೇಲೆ ಬಿದ್ದಿತ್ತು. ಮಗನ ನೆಪಮಾಡಿಕೊಂಡು ಹೊಲ, ಗದ್ದೆ, ತೋಟಗಳನ್ನು ಗುತ್ತಿಗೆಗೆ ಕೊಟ್ಟು ಬೆಂಗಳೂರಿಗೆ ಬಂದು ನೆಲಸಿದರು.

ಚೌಡಪ್ಪನವರು ಬೆಂಗಳೂರು ಸೇರುವುದಕ್ಕೆ ಮಹಾಬಲನ ವಿದ್ಯಾ ಭ್ಯಾಸವೇ ಮೂಲ ಕಾರಣವಾಗಿರಲಿಲ್ಲ. ಲಾಯರ್ ಗುಂಡಪ್ಪನವರೂ ಚೌಡಪ್ಪನವರೂ ಬಾಲ್ಯ ಸ್ನೇಹಿತರು. ಅವರೂ ಚೇಳೂರಿನವರೇ. ಚೌಡಪ್ಪನವರಿಗೆ ಜೀವನದಲ್ಲಿ ಯಾರಾದರೂ ಸ್ನೇಹಿತರಿದ್ದ ಪಕ್ಷಕ್ಕೆ ಗುಂಡಪ್ಪನವರನ್ನು ನಿರ್ದೇಶಿಸಬಹುದಾಗಿತ್ತು. ಗುಂಡಪ್ಪನವರು ಮಗನಿಗೆ

ತಮ್ಮ ಕಛೇರಿ ವಹಿಸಿ ಸುಖವಾಗಿದ್ದರು. ಇಬ್ಬರೂ ಸಂಧಿಸಿದಾಗ ಗುಂಡಪ್ಪನವರು

"ಹಾಳು ಆ ಹಳ್ಳಿಯಲ್ಲಿ ಏತಕ್ಕಯ್ಯ ಸಾಯುವೆ. ಇರುವವನು ನೀನೊಬ್ಬ. ಬೆಂಗಳೂರಿಗೆ ಬಂದು ಹಾಯಾಗಿ ಇದ್ದು ಬಿಡಬಾರದೇ? ಅಲ್ಲಿ ಹವಾ ಕೂಡ ನಿನಗೆ ಸರಿಯಾಗಿಲ್ಲ. ದೇಶವಿದೇಶಗಳಿಂದ ಜನ ಬಂದು ಬೆಂಗಳೂರಿನಲ್ಲಿ ನೆಲಸುತ್ತಾರೆ—ನೀನೇಕೆ ಬರಬಾರದು ? "

"ನಾನು ಅದೇ ಯೋಚನೆ ಮಾಡುತ್ತಿದ್ದೇನೆ ಗುಂಡೂ. ಆದರೆ ರೈತರ ಕೈಗೆ ಜಮೀನು ಕೊಟ್ಟು ಬಂದರೆ ಅದರ ಪಾಡು ಏನಾಗುತ್ತದೆಯೆಂಬುದನ್ನು ನೀನು ಬಲ್ಲೆ. ಕಾಲ ಮೊದಲಿನ ಹಾಗಿಲ್ಲ. ಧಣೀಗೆ ವಂಚನೆ ಮಾಡ ಬಾರದು ಎನ್ನುವ ಧರ್ಮಬುದ್ಧಿ ಈಗಿಲ್ಲ. ನಾನು ಎದುರಿಗಿದ್ದರೇ ಕಂಡ ಹಾಗೆ, ಕಾಣದ ಹಾಗೆ, ಕದಿಯುತ್ತಾರೆ. ನಾನು ಕಣ್ಮರೆಯಾದರೆ ಉತ್ಪನ್ನ ದಲ್ಲಿ ಒಂದು ಭಾಗ ಕೂಡ ನನ್ನ ಕೈಹತ್ತುವುದಿಲ್ಲ."

"ನಿನ್ನ ಮನೆಯ ಪೂರ್ತ ಅವರು ಕೊಟ್ಟರಾಯಿತೋ ಇಲ್ಲವೋ. ಬೆಳೆಯುವವರು ಅವರು-ದುಡಿಯುವವರು ಅವರು. ಅವರೇ ಒಂದು ಭಾಗ ಹೆಚ್ಚು ತಿನ್ನಲಿ ಬಿಡು. ನೀನೇ ಕೈಯೆತ್ತಿ ಕೊಟ್ಟರೆ ಕದಿಯುವುದಕ್ಕೆ ಅವ ಕಾಶವೇ ಇರುವದಿಲ್ಲ. ಉಭಯತ್ರರ ಸ್ನೇಹ ವಿಶ್ವಾಸವೂ ಚೆನ್ನಾಗಿರುತ್ತದೆ."

"ನೀನು ಹೇಳುವುದೂ ಸರಿಯೆನ್ನು. ಮಹಾಬಲನೂ ದೊಡ್ಡವನಾದ. ಇನ್ನಾದರೂ ಅವನ ವಿದ್ಯಾಭ್ಯಾಸದ ಕಡೆಗೆ ಗಮನ ಕೊಡದಿದ್ದರೆ ನೋಡಿ ದವರು ಛೀಯೆನ್ನುತ್ತಾರೆ."

"ಈಗವನು ಸ್ಕೂಲಿಗೇನಾದರೂ ಮಣ್ಣು ಹೊತ್ತಿದ್ದಾನೆಯೋ ?"

"ಹೊತ್ತಿದ್ದಾನೆ. ಚೇಳೂರಿನಲ್ಲಿಯೇ ಒಂದು ಲೋವರ್ ಸೆಕೆಂಡರಿ ಪಾಸೂ ಮಾಡಿಕೊಂಡ."

"ಮುಂದೆ ?"

"ಮುಂದೆ ಹೈಸ್ಕೂಲಿಗೆ ಕಳಿಸಬೇಕಾಗಿತ್ತು. ಮನೆಯ ತಾಪತ್ರಯ ನಿನಗೆ ಗೊತ್ತೇ ಇದೆಯಲ್ಲಾ. ಅವಳು ಕಾಯಿಲೆ ಬಿದ್ದು ಒಂದು ವರ್ಷ ನರಳಿದಳು. ಆಗ ಅವನ ವಿದ್ಯಾಭ್ಯಾಸ ನಿಂತು ಹೋಯಿತು. ಹೊಲ ಗದ್ದೆ ನೋಡಿಕೊಂಡು ಇದ್ದು ಬಿಟ್ಟಿದ್ದಾನೆ. ಅವನಿಗೆ ಓದುವ ಇಚ್ಛೆಯೂ ಇಲ್ಲ."

"ಹುಡುಗರಿಗೆ ಏನು ಗೊತ್ತಾಗುತ್ತೆ ಹೇಳು. ಇನ್ನೂ ನಾಲ್ಕೆಂಟು ವರ್ಷ ಅವನು ಓದಲಿ. ಬಿ.ಎ., ಎಂ.ಎ. ಮಾಡದಿದ್ದರೂ ಚಿಂತೆಯಿಲ್ಲ—ಲೋಕದ ವ್ಯವಹಾರ ತಿಳಿದುಕೊಳ್ಳುವಷ್ಟು ವಿದ್ಯಾಭ್ಯಾಸ ಬೇಡವೇ ?"

"ಬೇಡವೆಂದವರು ಯಾರು ? ನಾನು ಸ್ಕೂಲಿಗೆ ಕಳಿಸುವುದಕ್ಕೆ ಸಿದ್ಧವಾಗಿಲ್ಲವೇ ?—ಬೇಕಾದಷ್ಟು ಅವನಿಗಾಗಿ ಖರ್ಚುಮಾಡುವುದಕ್ಕೆ ಸಿದ್ಧವಾಗಿಲ್ಲವೇ ? ಆ ಕಡೆ ಅವನ ಲಕ್ಷ್ಯ ಬಂದ ಹೊರತೂ ಯಾರು ಏನು ಮಾಡುವುದಕ್ಕಾಗುತ್ತದೆ."

"ಬೆಂಗಳೂರಿಗೆ ನೀನು ಬಂದರೆ ಎಲ್ಲಾ ಸರಿಹೋಗತ್ತಪ್ಪಾ."

"ನೀನು ಹೇಳಿದ ಹಾಗೇ ಮಾಡುತ್ತೇನಯ್ಯಾ. ಎಂಟು ದಿವಸ ಪುರಸತ್ತು ಮಾಡಿಕೊಂಡು ನೀನು ಚೇಳೂರಿಗೆ ಬರಬೇಕು. ಹೊಲ, ಗದ್ದೆ, ಮನೆಯನ್ನೆಲ್ಲಾ ಒಂದು ವ್ಯವಸ್ಥೆಗೆ ತಂದು ನಾನು ಬಂದು ಬಿಡುತ್ತೇನೆ. ಇಲ್ಲಿ ನನಗೊಂದು ಬಾಡಿಗೆ ಮನೆ ಗೊತ್ತುಮಾಡು."

"ನಮ್ಮ ಮನೆ ಸಾಲಿನಲ್ಲೇ ಒಂದು ಮನೆಯಿದೆ. ಮುಂದಿನ ತಿಂಗಳು ಖಾಲಿಯಾಗತ್ತಂತೆ. ನೀನು ಖಚಿತವಾಗಿ ಹೇಳಿದರೆ ನಾನು ಅಡ್ವಾನ್ಸ್ ಕೊಟ್ಟು ಮನೆ ತೆಗೆದುಕೊಂಡು ಬಿಡುತ್ತೇನೆ."

"ಬಾಡಿಗೆ ಎಷ್ಟು."

"ಐವತ್ತು ರೂಪಾಯಿ."

"ಐವತ್ತು ರೂಪಾಯಿ ! ಅಷ್ಟು ದೊಡ್ಡ ಮನೆ ನನಗೇಕಯ್ಯ."

"ದೊಡ್ಡ ಜಹಗೀರದಾರ. ಗುಡಿಸಿನಲ್ಲಿ ವಾಸಮಾಡುವುದೇನಯ್ಯ ?"

"ದೂರಕ್ಕೆ ಬೆಟ್ಟ ನುಣ್ಣಗೆ ಗುಂಡೂ—ನನ್ನ ಕಷ್ಟ ನನಗೇ ಗೊತ್ತು."

"ಹೋಗಲಿ ! ಚೇಳೂರಿನ ನಿನ್ನ ಮನೆಗೆ ಎಷ್ಟು ಬಾಡಿಗೆ ಬರುವುದಪ್ಪಾ ?"

"ಊರಿಗೆ ಬರುವ ಅಮಲ್ದಾರರಿಗೆ ಸರಿಯಾದ ಮನೆಯಿಲ್ಲ. ನನ್ನ ಮನೆ ಬಾಡಿಗೆಗೆ ಕೊಟ್ಟರೆ ಮೂವತ್ತೋ ಮೂವತ್ತೈದೋ ಬರುತ್ತದೆ."

"ನಿನಗೇನು ನಷ್ಟವಾದುದ್ದು. ಕೈಯಿಂದ ಹದಿನೈದು ಇಪ್ಪತ್ತು, ರೂಪಾಯಿ ತಾನೆ ಖರ್ಚುಮಾಡುವುದು. ಇಂಥ ಸೊಗಸಾದ ಮನೆ ಎಲ್ಲಿ ಸಿಕ್ಕಬೇಕು ಹೇಳು. ಮುಂದೆ ಹೂದೋಟವಿದೆ, ಭಾವಿಯಿದೆ; ನಲ್ಲಿ, ದೀಪ,

ನಾಲ್ಕು ರೂಮು, ತೊಟ್ಟಿ ಒಳಗೆ ಅಂಗಳ. ಬಾಡಿಗೆ ಮುಖ ನೋಡಬೇಡ ಚೌಡಪ್ಪ, ಈ ಮನೆ ತೆಗೆದುಕೊಂಡು ಬಿಡು."

"ನಿನ್ನ ಮಾತಿಗೆ ಪ್ರತಿ ಉಂಟೇನಯ್ಯ. ನೀನು ಹೇಳಿದ ಮೇಲೆ ಆಗಿ ಹೋಯ್ತು."

ಎಂದು ಹೇಳಿದರು.

ಗುಂಡಪ್ಪನವರು, ಎದ್ದು ಹೋಗೋ ಮಾತು ಬಿದ್ದು ಹೋಗಲಿ ಎನ್ನುವ ಸ್ವಭಾವದವರಲ್ಲ. ಆಳೂ ತೂಕ, ಅವರ ಮಾತೂ ತೂಕ. ಒಂದು, ವಿಷಯ ನಿರ್ಧರಿಸಿಬಿಟ್ಟರೆ ಮುಕ್ಕಣ್ಣ ಬಂದರೂ ತಮ್ಮ ನಿರ್ಧಾರ ಬದಲಾಯಿಸುವವರಲ್ಲ. ಮಾತಿನಲ್ಲಿ ಎಷ್ಟು ಖಂಡಿತವೋ ನಡತೆಯಲ್ಲಿಯೂ ಅಷ್ಟೇ ಖಂಡಿತ. ಮೂವತ್ತು ವರ್ಷಕಾಲ ಸತತವಾಗಿ ಲಾಯರ ವೃತ್ತಿ ಮಾಡಿದ್ದರೂ ಗುಂಡಪ್ಪನವರಿಗೆ ಸುಳ್ಳು ಹೇಳುವುದಕ್ಕೆ ಬರುತ್ತಿರಲಿಲ್ಲ. ಸುಳ್ಳು ಅವರಿಗೆ ಸಹನೆಯೂ ಆಗುತ್ತಿರಲಿಲ್ಲ. ಖಡಾಖಂಡಿತವಾದ ಸ್ವಭಾವದವರಾದ ಗುಂಡಪ್ಪನವರು ಸ್ನೇಹಿತರ, ಬಂಧುಗಳ ದೊಡ್ಡಬಳಗ ಕಟ್ಟಿಕೊಳ್ಳುವುದು ಸಾಧ್ಯವಾಗಿರಲಿಲ್ಲ. ಅವರಿಗೆ ಅಂಥ ಬಳಗ ಬೇಕೂ ಇರಲಿಲ್ಲ. ಆತ್ಮೀಯರಾದ ಯಾರಾದರೊಬ್ಬ ಗೆಳೆಯರೊಂದಿಗೆ ಸಂಜೆ ಲಾಲ್‌ಬಾಗಿನ ಕಡೆಯೋ, ದೊಡ್ಡ ಬಸವಣ್ಣನ ಗುಡಿಯ ಕಡೆಗೋ ವಾಕಿಂಗ್ ಹೊರಟು, ಒಂದೆರಡು ಗಂಟೆ ಹರಟೆ ಕೊಚ್ಚಿ, ಸ್ವಲ್ಪ ಹೊತ್ತು ಅಲ್ಲೇ ವಿಶ್ರಮಿಸಿಕೊಂಡು ಮನೆಗೆ ಬಂದರೆ ಅವರಿಗೆ ಪರಮಾನಂದವಾಗುತ್ತಿತ್ತು. ಮನೆಯಲ್ಲಿಯೂ ಒಂದುಗಳಿಗೆ ವೃಥಾ ಕಳೆಯುವ ಜಾಯಮಾನವಲ್ಲ. ಗೀತೋಪನಿಷತ್ತುಗಳನ್ನು, ರಾಮಾಯಣ, ಭಾರತ, ಭಾಗವತಗಳನ್ನೋದುತ್ತಿರಬೇಕು, ಓದಿದ್ದು ಬೇಸರವಾದರೆ ಸ್ವಲ್ಪ ಹೊತ್ತು ಮನೆಯತೋಟದ ಕೆಲಸಮಾಡಬೇಕು. ಮಧ್ಯೆ ಮಗ ಬಂದು ಯಾವುದಾದರೂ ಕೇಸಿನ ಸಂಬಂಧ ಏನಾದರೂ ಕೇಳಿದರೆ ಅವನಿಗೆ ಅದರ ವಿಸ್ತೃತ ಪರಿಚಯಮಾಡಿಕೊಡಬೇಕು. ಅವರ ಜೀವನ ಒಂದು ಕ್ರಮದಲ್ಲಿ, ಚಾಚೂ ತಪ್ಪದಂತೆ ನಿರ್ಮಲವಾಗಿ ಸಾಗುತ್ತಿತ್ತು.

೨

ಬೆಂಗಳೂರಿಗೆ ಬಂದು ಗುಂಡಪ್ಪನವರ ಜತೆ ತಮ್ಮ ಜೀವನಸಂಧ್ಯೆ

ಕಳೆಯಬೇಕೆಂಬ ಆಸೆ ಚೌಡಪ್ಪನವರಿಗೆಷ್ಟಿತ್ತೋ ಅಷ್ಟೇ ಆಸೆ ಗುಂಡಪ್ಪನವರಿಗೂ ಇತ್ತು. ಚೌಡಪ್ಪನವರೆದುರು ಅವರು ಹೃದಯಬಿಚ್ಚಿ ಮಾತನಾಡಲು ಸಾಧ್ಯವಾಗುತ್ತಿದ್ದಂತೆ ಬೇರೆ ಯಾರ ಜತೆಯಲ್ಲಿಯೂ ಮಾತನಾಡಲು ಸಾಧ್ಯವಾಗುತ್ತಿರಲಿಲ್ಲ.

ಗುಂಡಪ್ಪನವರು ಎಂಟು ದಿನ ಪುರಸತ್ತು ಮಾಡಿಕೊಂಡು ಚೇಳೂರಿಗೆ ಪ್ರಯಾಣ ಬೆಳಸಿದರು.

ಚೌಡಪ್ಪನವರ ಆನಂದಕ್ಕೆ ಪಾರವೇ ಇಲ್ಲ. ಗೆಳೆಯನಿಗೆ ರಾಜಾತಿಥ್ಯವಾಯಿತು.

ಚೌಡಪ್ಪನವರ ಒಕ್ಕಲಿನವರು, ರೈತರನ್ನು ಕರೆಸಿ ಗುಂಡಪ್ಪನವರು ಮಾತನಾಡಿ ಗುತ್ತಿಗೆಯ ಕಾಗದ ಮಾಡಿಸಿದರು. ಅಮಲ್ದಾರರ ಸಂಗಡ ಮಾತನಾಡಿ ಮನೆಯನ್ನು ಬಾಡಿಗೆಗೆ ನಿಷ್ಕರ್ಷೆಮಾಡಿದ್ದೂ ಆಯಿತು. ಚೌಡಪ್ಪ ತಮ್ಮ ಸಂಗಡಲೇ ಬೆಂಗಳೂರಿಗೆ ಹೊರಡಲಿ ಎಂದು ಗುಂಡಪ್ಪನವರ ಆಕಾಂಕ್ಷೆ. ಉಳಿದಿದ್ದ ಚಿಲ್ಲರೆ ಕೆಲಸಗಳನ್ನು ಮುಗಿಸಿಕೊಂಡು ತಾವು ಎರಡು ಮೂರು ದಿವಸಗಳಲ್ಲಿ ಬರುವುದಾಗಿ ಹೇಳಿ ಗೆಳೆಯನನ್ನು ಚೌಡಪ್ಪ ಬೆಂಗಳೂರಿಗೆ ಕಳಿಸಿಕೊಟ್ಟರು.

ಚೌಡಪ್ಪನವರು ಬಂದು ಬೆಂಗಳೂರಿನಲ್ಲಿ ನೆಲಸಿದ್ದು ಆಯಿತು. ಮನೆ ಅವರ ಆವಶ್ಯಕತೆಗಿಂತ ಅಧಿಕವಾಗಿತ್ತು. ಒಂದು ಸಾಲು ಕೋಣೆಗಳನ್ನು ಮಗನಿಗೆ ಬಿಟ್ಟುಕೊಟ್ಟರು. ಇನ್ನೊಂದು ಸಾಲು ತಮಗಾಗಿ ಇಟ್ಟುಕೊಂಡರು. ತೊಟ್ಟಿ, ಅಡಿಗೆಯಮನೆ, ನಡುಮನೆ, ದೇವರ ಮನೆಯೆಲ್ಲಾ ತಿಮ್ಮಮ್ಮನವರಿಗೆ ಸೇರಿತು.

ಮಗ ಒಬ್ಬಂಟಿಗನಾಗಿಬಿಟ್ಟ, ಬೇಸರಪಟ್ಟುಕೊಂಡಾನೆಂದು ಬೆಳಗ್ಗೆ ಗುಂಡಪ್ಪನವರ ಮನೆಗೆ ಹೋಗುವಾಗ, ಸಂಜೆ ವಾಕಿಂಗ್ ಹೋಗುವಾಗ ಅವನನ್ನು ಜತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದರು.

ಚೌಡಪ್ಪನವರ ಪುತ್ರವ್ಯಾಮೋಹ ಕಂಡು ಗುಂಡಪ್ಪ ಒಮ್ಮೊಮ್ಮೆ ಟೀಕೆಮಾಡಲು ಹಿಂಜರಿಯುತ್ತಿರಲಿಲ್ಲ.

"ಧಾಂಡಿಗನಂಥ ಮಗನನ್ನು ನೀನು ಜತೆಯಲ್ಲಿ ಕಟ್ಟಿಕೊಂಡು ತಿರುಗಿದರಾಗುತ್ತೇನಯ್ಯಾ ?"

"ಏನು ಮಾಡಲಪ್ಪಾ—ಹಳ್ಳಿಯಲ್ಲಿ ಅವನಿಗೆ ಕೆಲಸಕಾರ್ಯವಿರುತ್ತಿತ್ತು. ಅಲ್ಲಿ ನಾಲ್ಕಾರು ಸ್ನೇಹಿತರಿದ್ದರು. ಹೊತ್ತು ಹೋಗುತ್ತಿತ್ತು. ಇಲ್ಲಿ ಅವನೊಬ್ಬನೇ ಕಾಲ ಕಳೆಯುವುದು ಹೇಗೆ ಹೇಳು ?"

"ನಾವಿಬ್ಬರೂ ಪುರಾಣವೋ ವೇದಾಂತವೋ ಮಾತನಾಡಿಕೊಂಡು ಹೊರಟರೆ ಅವನಿಗೇನು ಆಸಕ್ತಿ ಇರುತ್ತದೆ ಹೇಳು. ಹುಡುಗ, ತನ್ನ ವಯಸ್ಸಿನ ಹುಡುಗರ ಜತೆ ಆಡಿಕೊಳ್ಳಬೇಕು. ಬೇಗ ಸ್ಕೂಲು ಸೇರಿಸಿಬಿಡು."

"ನಾನು ಬೆಂಗಳೂರಿಗೆ ಹೊಸಬ. ಆ ಜವಾಬ್ದಾರಿ ನಿನ್ನದು. ನಾಳೆಯೇ ಬೇಕಾದರೆ ಕರೆದುಕೊಂಡು ಹೋಗಿ ನೀನು ಸೇರಿಸು—ನಾನು ಬೇಡವೆನ್ನುವುದಿಲ್ಲ."

"ಅವನಿಗೆ ವಿದ್ಯವೇ ಬೇಕಾಗಿಲ್ಲ ಎಂದು ಹೇಳಿದೆ."

"ಅದು ನನ್ನ ಅಭಿಪ್ರಾಯವಲ್ಲ ಮಾರಾಯ. ಮಹಾಬಲನ ಅಭಿರುಚಿ ಹಾಗಿದೆ ಎಂದು ತಿಳಿಸಿದೆ. ನಾಲ್ಕು ದಿವಸ ಸ್ಕೂಲಿಗೆ ಹೋದರೆ ಅಭಿರುಚಿ ಬೆಳೆಯಬಹುದು."

"ನೋಡೋಣ"

ಎಂದು ಹೇಳಿದರು.

ಮಾರನೆಯ ದಿನವೇ ತಮ್ಮ ಮಗ ಸುಬ್ಬುಕೃಷ್ಣಯ್ಯನ ಜತೆಮಾಡಿ ಗೌರ್ನಮೆಂಟ್ ಹೈಸ್ಕೂಲಿಗೆ ಮಹಾಬಲನನ್ನು ಸೇರಿಸಿದರು.

ಸಂಜೆ ಮಹಾಬಲ ಸ್ಕೂಲುಮುಗಿಸಿಕೊಂಡು ಬರುವ ಹೊತ್ತಿಗೆ ತಿಮ್ಮಮ್ಮನವರು ಬಿಸಿ ಉಪ್ಪಿಟ್ಟು, ರವೆವುಂಡೆ, ಕಾಫಿ ಮಾಡಿಟ್ಟಿದ್ದರು. ಮಗ ಉಪಾಹಾರಮುಗಿಸಿದ ಮೇಲೆ ಚೌಡಪ್ಪನವರು ಅವನನ್ನು ಕರೆದು ಹತ್ತಿರ ಕೂಡಿಸಿಕೊಂಡು

"ಮಹಾಬಲಾ, ಸ್ಕೂಲು ಹೇಗಿತ್ತಪ್ಪಾ." ಎಂದು ಕೇಳಿದರು.

"ಇತ್ತು ಅಣ್ಣಯ್ಯ—ಹುಡುಗರು ವಿಚಿತ್ರವಾಗಿ ಆಡುತ್ತಾರೆ. ನನ್ನ ನೋಡಿ ನಗುತ್ತಾರೆ."

"ನಗುವುದೇಕೆ ? ನೀನೇನು ಕುಂಟೇ ಕುರುಡೇ ?"

"ಅದಕ್ಕಲ್ಲ—ಅವರು........"

"ಹೇಳು—ಸಂಕೋಚವೇತಕ್ಕೆ."

"ಹಳ್ಳಿಯ ಹುಡುಗ ಎಂದು ನನ್ನ ಹಾಸ್ಯಮಾಡುತ್ತಾರೆ."

"ಅವರೆಲ್ಲಾ ದಿಳ್ಳಿಯಲ್ಲೇ ಹುಟ್ಟಿ ಬೆಳದವರೇನೋ! ಸರಿಯಾಗಿ ಉತ್ತರ ಹೇಳದೆ ಮುಖ ಪೆಚ್ಚು ಹಾಕಿಕೊಂಡು ಬಂದೆಯಲ್ಲಾ."

"ನನ್ನ ಜುಟ್ಟು—ಟೋಪಿ ನೋಡಿ ನಗುತ್ತಾರೆ ಅಣ್ಣಯ್ಯ."

"ಅದಕ್ಕೇನುಮಾಡಬೇಕು."

"ನಾನು ಕ್ರಾಪ್ ಮಾಡಿಸಿಕೊಳ್ಳುತ್ತೇನೆ."

"ಇಷ್ಟೇತಾನೆ—ಮಾಡಿಸಿಕೋ."

"ನನಗೆ ಸರಿಯಾದ ಬಟ್ಟೆಬರೆ ಬೇಕು."

"ಬೇಕಾದ್ದು ಹೊಲಸಿಕೋ. ಸದ್ಯ ನೀನು ಸ್ಕೂಲಿಗೆ ಸರಿಯಾಗಿ ಹೋಗಿ ಓದಿದರೆ ಸಾಕು."

"ಸೂಟ್ ಹೊಲಸಿಕೊಳ್ಳುತ್ತೇನೆ."

"ಈಗಲೇ ಸೂಟುಪಾಟು ಬೇಡ. ಕೋಟು, ಷರಟು ಹೊಲಸಿಕೋ. ಒಳ್ಳೆಯ ಟೋಪಿ ತೆಗೆದುಕೋ. ಕಾಲಿಗೆ ಒಂದು ಜತೆ ಚಪ್ಪಲಿ ತೆಗೆದುಕೋ."

"ಕಾಲಿಗೆ ನಂಗೆ ಸ್ಲಿಪ್ಪರ್ ಬೇಕು."

"ಹೂ! ಅದೇ ತೆಗೆದುಕೋ—ಇನ್ನೇನು?"

"ಕೈಗೆ ಗಡಿಯಾರ."

"ಕಾಲೇಜಿಗೆ ಹೋದಮೇಲೆ ಗಡಿಯಾರ, ಬೈಸಿಕಲ್. ಪೇಟೆಗೆ ಬಂದಕೂಡಲೆ ಇಷ್ಟೊಂದು ಷೋಕ್ ಮಾಡಬಾರದಪ್ಪಾ. ಮಂತ್ರಕ್ಕಿಂತ ಉಗುಳು ಜಾಸ್ತಿಯಾಯಿತು ಎಂದು ನೋಡಿದವರು ಆಡಿಕೊಳ್ಳುತ್ತಾರೆ."

ಹುಬ್ಬುಗಂಟು ಹಾಕಿಕೊಂಡು ಮಹಾಬಲ ತಂದೆಯ ಮಾತಿಗೆ ಒಪ್ಪಿಕೊಂಡ.

ಮಹಾಬಲನ ಷೋಕಿ ವಿಷಯದಲ್ಲಿ ಚೌಡಪ್ಪನವರು ಸ್ವಲ್ಪ ಜೀನತನ ತೋರಿಸಿದರೂ ಉಳಿದ ಯಾವ ಖರ್ಚಿನ ವಿಷಯದಲ್ಲಿಯೂ ಕೊರತೆ ಮಾಡಲೆತ್ನಿಸಲಿಲ್ಲ. ಮಧ್ಯಾಹ್ನದ ಉಪಾಹಾರಕ್ಕೆಂದು ಮಗನ ಕೈಗೆ ದಿವಸಕ್ಕೆ ಎಂಟಾಣೆ ಇಡುತ್ತಿದ್ದರು. ಅವನು ಯಾವಾಗ ಎಷ್ಟು ದುಡ್ಡು ಕೇಳಿದರೂ ಇಲ್ಲವೆನ್ನುತ್ತಿರಲಿಲ್ಲ.

ಕೆಲವು ದಿವಸಗಳಲ್ಲಿ ಮಹಾಬಲನಿಗೆ ಸ್ಕೂಲಿನ ಚಳಿಬಿಟ್ಟುಹೋಯಿತು. ಅವನು ಪಿಳ್ಳಜುಟ್ಟು ಬೋಳಿಸಿ ಕ್ರಾಪು ಬಿಡಿಸಿದ ದಿನದಿಂದಲೇ ಉಳಿದ ಹುಡುಗರು ಅವನ ಬಗ್ಗೆ ವಿಶ್ವಾಸ ತೋರಿಸಲಾರಂಭಿಸಿದರು. ಪೇಟೆಯ ಹುಡುಗರಿಗಿಂತ ಮಹಾಬಲ ಕಟ್ಟಾಮುಟ್ಟಾ ಇದ್ದುದರಿಂದ ಅವನ ಗೋಜಿಗೆ ಹೋಗುವುದಕ್ಕೆ ಇತರ ಹುಡುಗರು ಸ್ವಾಭಾವಿಕವಾಗಿ ಸಂಕೋಚಪಡುತ್ತಿದ್ದರು.

ಸಹಪಾಠಿಗಳಲ್ಲಿ ನಾಣಿಗೂ ಮಹಾಬಲನಿಗೂ ಮೈತ್ರಿ ಬೆಳೆಯಲಾರಂಭವಾಯಿತು. ನಾಣಿ ತೀರ ಬಡವ. ಮನೆಯಲ್ಲಿ ಅವನಿಗೆ ಎರಡು ಹೊತ್ತು ಊಟ ಆಗುವುದೇ ಕಷ್ಟವಾಗಿತ್ತು. ತರಗತಿಯಲ್ಲಿ ಮುಂದಿದ್ದುದರಿಂದ ಅವನಿಗೆ 'ಫ್ರೀಷಿಪ್' ಸಿಕ್ಕಿತು. ಪುಸ್ತಕ, ಬಟ್ಟೆಗೆ ಅವನು ಅಲ್ಲಿ ಇಲ್ಲಿ ತಿರಿದು ತನ್ನ ವ್ಯಾಸಂಗ ಮುಂದುವರಿಸುತ್ತಿದ್ದ. ದಾರಿದ್ರ್ಯ ಅವನ ಜಾಣ್ಮೆಯನ್ನೂ ಮುಚ್ಚಿಬಿಟ್ಟಿತು.

ನಾಣಿಯ ಕಷ್ಟನೋಡಿ ಮಹಾಬಲನ ಮನಸ್ಸು ಕರಗಿತು. ಮಧ್ಯಾಹ್ನ ತಾನು ತಿಂಡಿಗೆ ಹೋಗುತ್ತಿದ್ದಾಗ ಬಿಡದೆ ನಾಣಿಯನ್ನೂ ಕರೆದುಕೊಂಡು ಹೋಗಿ ಅವನಿಗೂ ತಿಂಡಿ ಕೊಡಿಸುತ್ತಿದ್ದ. ನಾಣಿ ಅದಕ್ಕೆ ಪ್ರತಿಫಲವಾಗಿ ಮಹಾಬಲನ 'ಹೋಂ ವರ್ಕ್' ಮಾಡಿಕೊಡುತ್ತಿದ್ದ. ಮಹಾಬಲನ ಜತೆಯಲ್ಲಿ ಕುಳಿತು ಕ್ಲಿಷ್ಟವಾದ ಭಾಗಗಳನ್ನು ಅವನಿಗೆ ಅರ್ಥವಾಗುವಂತೆ ಓದಿ ಹೇಳುತ್ತಿದ್ದ.

ನಾಣಿ ಮನೆಗೆ ಬಂದ ಕೆಲವುದಿನ ಚೌಡಪ್ಪನವರು ಅವನನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿ 'ಅಡ್ಡಿಯಿಲ್ಲ' ಎಂದುಕೊಂಡರು. ನಾಣಿಯ ಸಹವಾಸದಿಂದ ಮಹಾಬಲನ ಓದುಗಾರಿಕೆ ವೃದ್ಧಿಯಾಗುವುದೆಂದು ಅವರು ಸಂತೋಷಭರಿತರಾದರು.

ಒಂದು ದಿನ ನಾಣಿ, ಮಹಾಬಲ ಕುಳಿತಿದ್ದಲ್ಲಿಗೆ ಚೌಡಪ್ಪನವರು ಬಂದು ತಾವೂ ಕುಳಿತುಕೊಂಡರು. ನಾಣಿ ಮರ್ಯಾದೆಯಿಂದ ಎದ್ದು ನಿಂತ. ಹುಡುಗನ ವಿನಯಶೀಲತೆ ಕಂಡು ಚೌಡಪ್ಪನವರಿಗೆ ಅವನ ಬಗ್ಗೆ ಇದ್ದ ವಿಶ್ವಾಸ ಇಮ್ಮಡಿಸಿತು.

"ಕುಳಿತುಕೋ ಮಗೂ........ಏನು ಓದುತ್ತಾ ಇದ್ದೀರಿ"

"ನಮ್ಮ ರೀಡರ್ ಸಾರ್, ಅದರಲ್ಲಿ ಗೋಪಾಲ ಕೃಷ್ಣ ಗೋಖಲೆಯವರ ಮೇಲೆ ಒಂದು ಪಾಠವಿದೆ."

"ಬಹಳ ಸಂತೋಷ. ನಾಣಿ—ನೀನು ಮನಸ್ಸಿಗೇನೂ ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳಬಯಸುತ್ತೇನೆ.',

"ಹೇಳಿ ಸಾರ್."

"ನೀನು ಇಲ್ಲೇ ಏಕೆ ಬಂದಿರಬಾರದು. ಮಹಾಬಲನಿಗೂ ಜತೆಯಾಗುತ್ತದೆ."

ತಂದೆಯ ಸಲಹೆಕೇಳಿ ಮಹಾಬಲನಿಗೆ ಮಹದಾನಂದವಾಯಿತು.

"ಹೌದು, ಕಣೋ ನಾಣಿ. ಅಣ್ಣಯ್ಯ ಹೇಳುವ ಹಾಗೆ ಇಲ್ಲೇ ಬಂದಿದ್ದುಬಿಡೋ."

ಎಂದ. ನಾಣಿ ಕೂಡಲೇ ಉತ್ತರಕೊಡಲಿಲ್ಲ. ಸ್ನೇಹಿತನ ಉತ್ಸಾಹ, ಅವನ ತಂದೆಯ ವಿಶ್ವಾಸ ನಾಣಿಯ ಮನಸ್ಸಿನಮೇಲೆ ವಿಚಿತ್ರ ಪರಿಣಾಮವನ್ನುಂಟುಮಾಡಿತ್ತು. ಅವನು ಉತ್ತರ ಕೊಡದಿರಲು ಚೌಡಪ್ಪನವರು

"ಏಕೆ ಮಗೂ ಸುಮ್ಮನಾದೆ. ಏನಾದರೂ ಹೇಳು."

"ತಮ್ಮ ವಿಶ್ವಾಸಕ್ಕೆ ನಾನು ತುಂಬ ಋಣಿ ಸಾರ್. ನನ್ನಂಥ ನಿರ್ಗತಿಕನನ್ನು ಇಷ್ಟು ಪ್ರೇಮದಿಂದ ಆದರಿಸುವವರು ಯಾರು? ಆದರೆ..........."

"ಆದರೆ..............."

"ನನ್ನ ತಂದೆ ತುಂಬ ಬಡವರು ಸಾರ್. ಆದರೆ ಅಷ್ಟೇ ಸ್ವಾಭಿಮಾನಿಗಳು. ಈ ಮಾತು ಅವರ ಕಿವಿಯಮೇಲೆ ಹಾಕಿದರೆ ತುಂಬ ನೊಂದುಕೊಳ್ಳುತ್ತಾರೆ. ಅವರ ಮನಸ್ಸು ಹೇಗೆ ನೋಯಿಸಲಿ ಸಾರ್."

ಚೌಡಪ್ಪನವರಿಗೆ ನಾಣಿಯ ಬಗ್ಗೆ ಇದ್ದ ವಿಶ್ವಾಸದ ಜತೆಗೆ ಗೌರವವೂ ಬೆಳೆಯಿತು.

"ಹೋಗಲಿ ಬಿಡು ಮಗೂ. ನಿನಗೆ ಹೇಗೆ ಅನುಕೂಲವೋ ಹಾಗೆ ಮಾಡು. ನಿನಗೆ ಏನು ಬೇಕಾದರೂ ಕೇಳು. ಯಾವುದಕ್ಕೂ ತಾಪತ್ರಯ ಪಡಬೇಡ........ಸಂಕೋಚಪಟ್ಟುಕೊಳ್ಳಬೇಡ."

'ಆಗಲಿ' ಎಂದು ನಾಣಿ ಒಪ್ಪಿಕೊಂಡ.

೩

ಬೆಂಗಳೂರು ನಗರದಲ್ಲಿ ೧೦-೧೨ ಪ್ರೌಢವಿದ್ಯಾ ಶಾಲೆಗಳಿದ್ದವು. ಅವುಗಳಲ್ಲಿ ಮೂರು ಮಾತ್ರ ಸರ್ಕಾರದವು. ಉಳಿದ ಶಾಲೆಗಳನ್ನು ಕ್ರೈಸ್ತ ಸಂಸ್ಥೆಗಳು, ಖಾಸಗಿ ಶಿಕ್ಷಣ ಸಮಿತಿಯವರು, ದೇಶೀಯ ವಿದ್ಯಾ ಸಮಿತಿಯವರು ನಡೆಸುತ್ತಿದ್ದರು. ಸರ್ಕಾರಿ ಅಧಿಕಾರಿಗಳು, ಶ್ರೀಮಂತರು, ವರ್ತಕರು, ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ ಕಳಿಸುವುದು ರೂಢಿಯಾಗಿತ್ತು. ಖಾಸಗಿ ಶಾಲೆಗಳು ಕೇವಲ ಬಡವರ ಮಕ್ಕಳಿಗೆ ಎಂಬ ಅಭಿಪ್ರಾಯ ಹೇಗೋ ಜನತೆಯಲ್ಲಿ ಬಲವಾಗಿ ಬೇರೂರಿತ್ತು.

ಮಹಾಬಲ ಸೇರಿದ್ದುದೂ ಸರ್ಕಾರಿ ಶಾಲೆಗೇ. ನಿತ್ಯ ಕಾರಿನಲ್ಲಿ ಬರುವ ಹುಡುಗರನ್ನು, ವಿಕ್ಟೋರಿಯಾಗಾಡಿಯಲ್ಲಿ ಬರುವ ಹುಡುಗರನ್ನು, ಬೈಸಿಕಲ್ ಹತ್ತಿ ಬರುವ ಹುಡುಗರನ್ನು ಅವನು ನೋಡುತ್ತಿದ್ದ. ಆರನೆಯ ಫಾರ್ಮಿನಲ್ಲಿ ಓದುತ್ತಿದ್ದ ಒಬ್ಬ ಮುಸಲ್ಮಾನರ ಹುಡುಗ ತನ್ನ ಸ್ವಂತ ಮೋಟಾರು ಬೈಸಿಕಲ್ಲಿನಲ್ಲಿ ಬರುತ್ತಿದ್ದ.

ಮಹಾಬಲನ ತರಗತಿಯಲ್ಲಿಯೂ ಸರ್ಕಾರಿ ಅಧಿಕಾರಿಗಳ ಮಕ್ಕಳು, ಶ್ರೀಮಂತರ ಮಕ್ಕಳು ಇದ್ದರು. ಅವರ ಸೊಗಸು, ವೈಖರಿ, ಹಾವಭಾವ, ಮಾತಿನ ಧೋರಣೆ ಮಹಾಬಲನಿಗೆ ಮೊದಮೊದಲು ವಿಚಿತ್ರವಾಗಿ ಕಂಡು ಭಯವನ್ನುಂಟುಮಾಡಿತು. ಆದರೆ ಉಮಾಪತಿ ಆ ಭಯವನ್ನು ನಿವಾರಣೆ ಮಾಡಿದ.

ಉಮಾಪತಿ ಪ್ರಸಿದ್ಧವರ್ತಕರೂ ಶ್ರೀಮಂತರೂ ಆದ ಚಿಂತಾಮಣಿ ಶ್ರೀನಿವಾಸಶೆಟ್ಟರ ವರಪುತ್ರ. ಒಬ್ಬನೇ ಮಗನೆಂದು ಶೆಟ್ಟರು ಮಗನನ್ನು ದೇವರ ಭಂಡಾರದಂತೆ ಕಾಪಾಡಿದ್ದರು. ಶೆಟ್ಟರ ಮನೆಯಲ್ಲಿ ಲೋವರ್ ಸೆಕೆಂಡರಿ ಪ್ಯಾಸುಮಾಡಿ ಹೈಸ್ಕೂಲು ಕಟ್ಟೆ ಹತ್ತಿದ್ದವನು ಉಮಾಪತಿಯೊಬ್ಬನೇ. ಮಗನ ವಿದ್ಯಾಪ್ರಾವೀಣ್ಯತೆ ಶೆಟ್ಟರಿಗೆ ಬಹಳ ಹೆಮ್ಮೆಯ ವಿಷಯವಾಗಿತ್ತು.

ಉಮಾಪತಿ ನಿತ್ಯ ಶಾಲೆಗೆ ಸೊಗಸಾದ ಪೇಜ್‌ಸೆಡಾನ್ ಕಾರಿನಲ್ಲಿ ಬಂದಿಳಿಯುತ್ತಿದ್ದ. ಅವನ ಶಾಲೆ ಮುಗಿಯುವ ಹೊತ್ತಿಗೆ ಕಾರು ಬಂದು ಸಿದ್ಧವಾಗಿರುತ್ತಿತ್ತು. ತಲೆಗೆ ಬಲವಾಗಿ ಬ್ರಿಲಿಯಂಟೈನ್ ಬಳಿದುಕೊಂಡು,

ಎಣ್ಣೆಗೆಂಪಿನ ಮುಖಕ್ಕೆ ಎರಡು ಮೂರು ಆವರ್ತಿ ಪಾಂಡ್ ಪೌಡರ್ ಬಳಿದು ಕೊಂಡು, ಕೈಯುಗುರುಗಳಿಗೆ ಕೆಂಪುಬಣ್ಣ ಹಚ್ಚಿಕೊಂಡು, ದಿನಕ್ಕೊಂದೊಂದು ಬಗೆಯ ಸರ್ಜ್, ಟ್ವೀಡ್, ಸಿಲ್ಕ್ ಸೂಟ್ ಹಾಕಿಕೊಂಡು ಉಮಾಪತಿ ಶಾಲೆಗೆ ಒಳ್ಳೆಯ ಕಾಮಣ್ಣನ ಹಾಗೆ ಬರುತ್ತಿದ್ದ. ಅವನ ಅಹಂಕಾರ, ಠೀವಿ ನೋಡಿ ವಿದ್ಯಾರ್ಥಿಗಳು ಅವನ ಬಳಿ ಹೆಚ್ಚು ಸುಳಿಯುತ್ತಿರಲಿಲ್ಲ.

ಆದರೆ ಉಮಾಪತಿಯೂ ಒಬ್ಬ ಸ್ನೇಹಿತನನ್ನು ಅರಸುತ್ತಿದ್ದ. ಮೈತ್ರಿಯನ್ನು ಬಯಸುವ ಮಾನವ ಜೀವನದ ಸಾಹಜಿಕ ಆಸೆ ಅವನಲ್ಲಿಯೂ ಮೂಡಿತ್ತು. ಜತೆಗೆ ತನ್ನ ಪ್ರಭಾವ, ಶ್ರೀಮಂತಿಕೆ, ವೈಭವ ಯಾರಲ್ಲಿಯಾದರೂ ಹೇಳಿಕೊಳ್ಳುವ ಚಾಪಲ್ಯ. ತರಗತಿಯಲ್ಲಿ ಅವನ ಹಂತದಲ್ಲಿ ನಿಲ್ಲುವವರು ಯಾರೂ ಇರಲಿಲ್ಲ. ಕಡಿಮೆ ವರ್ಗದವರ ಗೆಳೆತನ ಮಾಡುವುದು ಉಮಾಪತಿಯ ಶ್ರೀಮದ್ಗಾಂಭೀರ್ಯಕ್ಕೆ ಕುಂದೆನಿಸುತ್ತಿತ್ತು.

ವರ್ಷಾಂತ್ಯದಲ್ಲಿ 'ತರಗತಿ ಉತ್ಸವ' ಮಾಡಲು ವಿದ್ಯಾರ್ಥಿಗಳು ನಿಶ್ಚಯಿಸಿದರು. ಚಂದಾಪಟ್ಟಿ ಎಲ್ಲರ ಕೈಗೂ ಹೋಯಿತು. ಉಮಾಪತಿ ಸಾಧಾರಣವಾಗಿ ಹಿಂದಿನ ಬೆಂಚುಗಳಲ್ಲಿಯೇ ಕೂಡುತ್ತಿದ್ದುದರಿಂದ ಪಟ್ಟಿ ಮಹಾಬಲನನ್ನು ದಾಟಿ ಅವನ ಕೈಗೆ ಬಂತು.

ಉಮಾಪತಿ ಮೊದಲಿನಿಂದ ಕೊನೆಯವರೆಗೂ ಪಟ್ಟಿ ಓದಿದ. ಯಾವ ವಿದ್ಯಾರ್ಥಿಯೂ ಒಂದು ರೂಪಾಯಿ, ಎಂಟಾಣೆ ಮೀರಿರಲಿಲ್ಲ. ಇಬ್ಬರು ವಿದ್ಯಾರ್ಥಿಗಳು ಮಾತ್ರ ಎರಡುರೂಪಾಯಿ ಹಾಕಿದ್ದರು. ಪಟ್ಟಿ ನೋಡುತ್ತಿರುವಂತೆ ಅವನ ಕಣ್ಣು ಮಹಾಬಲನ ಹೆಸರಿನ ಕಡೆ ಹೋಯಿತು. ಹತ್ತು ರೂಪಾಯಿ ಚಂದಾ ಅವನು ಹಾಕಿದ್ದ. ಉಮಾಪತಿ ಕ್ಷಣಕಾಲ ಕತ್ತೆತ್ತಿ ಮಹಾಬಲನನ್ನು ನೋಡಿ ತನ್ನ ಪಾರ್ಕರ್ ಪೆನ್ನಿನಿಂದ ಇಪ್ಪತ್ತೈದು ರೂಪಾಯಿ ಚಂದಾ ಬರೆದ.

ಅಂದೇ ಉಮಾಪತಿ ನಿಶ್ಚಯಿಸಿದ. ತನಗೆ ತರಗತಿಯಲ್ಲಿ ಯೋಗ್ಯನಾದ ಗೆಳೆಯನೆಂದರೆ ಮಹಾಬಲನೇ—ಇನ್ನು ಯಾರೂ ಆ ಹಿರಿಯ ಸ್ಥಾನಕ್ಕೆ ಅರ್ಹರಲ್ಲವೆಂದು.

ಆದರೆ ಮಹಾಬಲನ ಸ್ನೇಹ ಬೆಳಸುವುದು ಹೇಗೆ ? ತಾನಾಗಿಯೇ ಹೋಗಿ ಸಲಿಗೆ ಬೆಳಸುವುದು ಗೌರವವಲ್ಲ. ಗುರುತು ಪರಿಚಯವಿತ್ತು.

ಒಂದೆರಡು ಸಾರಿ ಮಹಾಬಲನೊಂದಿಗೆ ಶಾಲೆಯ ವಿಷಯ ಲೋಕಾಭಿರಾಮವಾಗಿ ಮಾತನಾಡಿಯೂ ಇದ್ದ. ಸ್ನೇಹಕ್ಕೆ ಬುನಾದಿ ಹಾಕುವುದಕ್ಕೆ ಇಷ್ಟೇ ಸಾಲದಾಗಿತ್ತು.

'ತರಗತಿ ಉತ್ಸವ' ದ ದಿನ ಉಮಾಪತಿಗೆ ಒಂದು ಸದವಕಾಶ ಸಿಕ್ಕಿತು. ಉತ್ಸವ ಮುಗಿಯುವ ಹೊತ್ತಿಗೆ ಸಂಜೆ ಏಳುಗಂಟೆಯಾಗಿತ್ತು. ಕಾಲುನಡಗೆಯಲ್ಲೇ ಮಹಾಬಲ ಮನೆಗೆ ಹೊರಟಿದ್ದ. ಉಮಾಪತಿ ಕಾರು ಬರಲು ಕುಳಿತು ಹೊರಟ. ದಾರಿಯಲ್ಲಿ ನಡೆದು ಹೋಗುತ್ತಿದ್ದ ಮಹಾಬಲನ ಪಕ್ಕದಲ್ಲಿ ಕಾರು ನಿಲ್ಲಿಸಿ

"ಎಲ್ಲಿಗೆ ಮಹಾಬಲರಾವ್" ಎಂದು ಕೇಳಿದ.

"ಮನೆಗೆ."

"ನಿಮ್ಮ ಮನೆಯೆಲ್ಲಿ ?"

"ಬಸವನಗುಡಿಯಲ್ಲಿ"

"ಬನ್ನಿ—ನಾನೂ ಬಸವನಗುಡಿಯಲ್ಲೇ ಇರುವುದು."

ಎಂದು ಕಾರಿನ ಬಾಗಿಲುತೆಗೆದ. ಮಹಾಬಲ ಕೃತಜ್ಞತೆ ಸಮರ್ಪಿಸುತ್ತ ಒಳಗೆ ಬಂದು ಕುಳಿತ.

ಕಾರು ನೇರವಾಗಿ ಗಾಂಧಿಬಜಾರು ದಾಟಿ ನಾಗಸಂದ್ರ ರಸ್ತೆಯಲ್ಲಿ ಸಾಗಿತು. ಮಹಾಬಲ

"ಗಾಂಧಿಬಜಾರಿನಲ್ಲಿ ನಿಲ್ಲಿಸಿದ್ದರೆ ನಾನು ಇಳಿದುಹೋಗುತ್ತಿದ್ದೆ."

"ಬನ್ನಿ—ಅವಸರವೇನು—ನಿಮ್ಮ ಮನೆಗೇ ಕಾರು ಕಳಿಸಿಕೊಡುತ್ತೇನೆ. ನಮ್ಮ ಮನೆಯುತನಕ ಬಂದು ಹೋಗಬಾರದೆ ?"

"ಬರಬಾರದು ಎಂದೇನಿಲ್ಲ. ಹೊತ್ತಾಯಿತು. ತಂದೆಯವರು ದಾರಿ ನೋಡುತ್ತಿರುತ್ತಾರೆ."

"ಐದೇ ನಿಮಿಷ. ನಮ್ಮ ಮನೆ ನೋಡಿದ ಹಾಗಾಗುತ್ತದೆ."

ನಾಗಸಂದ್ರ ರಸ್ತೆಯ ಮುಂದಿನ ಚೌಕದ ಬಲಗಡೆಗೆ ಉಮಾಪತಿಯ ಭವ್ಯಸದನ. ಅದರ ಮುಂದೆ ಕಾರು ಬಂದು ನಿಂತಿತು. ಉಮಾಪತಿ ಇಳಿದು ಮಹಾಬಲನನ್ನೂ ಇಳಿಸಿಕೊಂಡು ತನ್ನ ರೂಮಿಗೆ ಕರೆದೊಯ್ದ.

ಉಮಾಪತಿಯ ರೂಮು ನೋಡಿ ಮಹಾಬಲ ಬೆಕ್ಕಸಬೆರಗಾದ.

ಸೊಗಸಾದ ಸೋಫಾ, ಟೀಪಾಯ್, ಕರೀಮರದ ಮಂಚ ಅದಕ್ಕೆ ರೇಷ್ಮೆಯ ತೆರೆ, ಸ್ಯಾಟಿನ್ ಹಾಸು—ಭವ್ಯವಾದ ವಿಶಾಲ ಮೇಜು—ಅದರ ಮುಂದೆ ಮೆತ್ತೆ ಹಾಕಿದ ಎರಡು ಕುರ್ಚಿಗಳು. ಕಿಟಕಿ ಬಾಗಿಲುಗಳಿಗೆ ಬಣ್ಣಬಣ್ಣದ ತೆರೆಗಳು. ಮಹಾಬಲ ರೂಮಿನ ಅಂದ ಚಂದ ಮೆಚ್ಚುತ್ತ ಕುಳಿತಿರುವಂತೆ ಉಮಾಪತಿ ಒಳಗೆ ಹೋಗಿ ಎರಡು ಕಪ್ ಕಾಫಿಮಾಡಿಸಿ ಆಳಿನ ಕೈಯಲ್ಲಿ ತೆಗೆಸಿಕೊಂಡು ಬಂದ

"ಈಗೇಕೆ ಕಾಫಿ" ಎಂದು ಮಹಾಬಲ ಸಂಕೋಚ ವ್ಯಕ್ತಮಾಡಿದ.

"ಅಪರೂಪಕ್ಕೆ ಬಂದಿರುವಿರಿ. ಸ್ವಲ್ಪ ಕಾಫಿಯನ್ನೂ ಕೊಡ ಬೇಡವೇ ?"

ಇಬ್ಬರೂ ಕಾಫಿ ಸೇವಿಸಿದರು. ಮನೆಗೆ ಹೋಗಲು ಮಹಾಬಲ ತವಕಪಡುತ್ತಿರುವುದನ್ನು ಕಂಡು ಉಮಾಪತಿ

"ಬಹಳ ಹೊತ್ತಾಯಿತು. ನಾಳೆ ಸಾವಕಾಶವಾಗಿ ಬರಬೇಕು."

"ಹಾಗೇ ಆಗಲಿ"

ಉಮಾಪತಿ ಡ್ರೈವರನ್ನು ಕರೆದು

"ರಾಯರನ್ನು ಕರೆದುಕೊಂಡುಹೋಗಿ ಅವರ ಮನೆಯಲ್ಲಿ ಬಿಟ್ಟುಬಾ"

ಎಂದು ಆಜ್ಞಾಪಿಸಿ

"ನಾಳೆ ಸ್ಕೂಲಿಗೆ ಎಷ್ಟು ಹೊತ್ತಿಗೆ ಹೊರಡುವಿರಿ" ಎಂದು ಕೇಳಿದ.

"ಹತ್ತೂವರೆಗೆ."

"ಮನೆಯಲ್ಲಿಯೇ ಇರಿ—ನಾನು ಹಾಗೆಯೇ ಬರುತ್ತೇನೆ. ಇಬ್ಬರೂ ಜತೆಯಲ್ಲಿ ಹೋಗೋಣ."

"ಆಗಬಹುದು."

ಎಂದು ಮಹಾಬಲ ಹೇಳಿ ಉಮಾಪತಿಯ ಕಾರಿನಲ್ಲಿ ಮನೆಗೆ ಬಂದ.

ಗೆಲುವಿನ ಸುಮ್ಮಾನದಿಂದ ಉಮಾಪತಿ ಹಿರಿಹಿರಿ ಹಿಗ್ಗಿದ. ಮಗ ಕಾರಿನಲ್ಲಿ ಬಂದುದನ್ನು ಕಂಡು ಚೌಡಪ್ಪನವರು ಕೇಳಲು ಉಮಾಪತಿಯ ಸ್ನೇಹವಾದದ್ದು, ಅವನು ಮನೆಗೆ ಕರೆದುಕೊಂಡು ಹೋಗಿ ಕಾಫಿಕೊಟ್ಟದ್ದು, ತನ್ನನ್ನು ಕಾರಿನಲ್ಲಿ ಕಳಿಸಿಕೊಟ್ಟದ್ದನ್ನು ಮಹಾಬಲ ವಿವರವಾಗಿ ತಂದೆಗೆ ಹೇಳಿದ.

೪

ಉಮಾಪತಿಯ ಸ್ನೇಹವಾದಂದಿನಿಂದ ಮಹಾಬಲನ ಖರ್ಚು ಏರುತ್ತ ಹೋಯಿತು. ಉಮಾಪತಿ ಹಣ ನೀರಿನಂತೆ ಖರ್ಚುಮಾಡುತ್ತಿದ್ದ. ತನ್ನ ಆತ್ಮಗೌರವ ಉಳಿಸಿಕೊಳ್ಳುವುದಕ್ಕಾದರೂ ಮಹಾಬಲ ಅವನ ಜತೆಗೂ ಖರ್ಚುಮಾಡಬೇಕಾಗುತ್ತಿತ್ತು. ಈ ವಿಷಯ ಒಂದು ದಿನ ಚೌಡಪ್ಪನವರು ಗುಂಡಪ್ಪನವರ ಹತ್ತಿರ ಪ್ರಸ್ತಾಪಮಾಡಿದರು.

"ತಾಯಿಯಿಲ್ಲದ ಮಗನೆಂದು ನಾನು ಯಾವುದಕ್ಕೂ ಅರೆಮಾಡು ವುದಿಲ್ಲ ಗುಂಡೂ. ಖರ್ಚಾಗುತ್ತೆ ಎಂದು ನಾನು ವ್ಯಥೆಪಡುವುದಿಲ್ಲ."

"ಹಾಗಾದರೆ ಏತಕ್ಕಾಗಿ ವ್ಯಥೆಪಡುತ್ತಿರುವೆ."

"ಹುಡುಗ ಸಂಪಾದನೆಯ ಯೋಚನೆಯೇ ಇಲ್ಲದೆ ಹೀಗೆ ಖರ್ಚು ಮಾಡುತ್ತ ಬಂದರೆ ಮುಂದೇನುಗತಿ ಎಂದು ಯೋಚನೆ."

"ನೋಡು ಚೌಡಪ್ಪ-ನಾನು ವೇದಾಂತ ಹೇಳುತ್ತಿದ್ದೇನೆಂದು ಬೇಸರ ಪಟ್ಟುಕೊಳ್ಳಬೇಡ. ಒಬ್ಬ ಮನುಷ್ಯನ ಜೀವನ ರೂಪಿಸುವುದು ಯಾವ ಯಾವ ಲಕ್ಷಣಗಳೆಂಬುದನ್ನು ಬಲ್ಲೆಯಾ ? "

"ತಕ್ಕಮಟ್ಟಿಗೆ ಬಲ್ಲೆ. ನಿನ್ನ ಅಭಿಪ್ರಾಯ ತಿಳಿಸು."

"ಮೊದಲನೆಯದಾಗಿ ಅನುವಂಶಿಕ ಗುಣ. ತಂದೆ ತಾತಂದಿರು ಹೇಗಿದ್ದರೋ, ಯಾವ ಬಗೆಯ ಬಾಳ್ವೆ ನಡೆಸಿದರೋ ಅದು ಸಂತಾನದ ಮೇಲೆ ಪ್ರಭಾವ ಬೀರುತ್ತದೆ. ಹೌದೋ ಅಲ್ಲವೋ ? "

"ಅಲ್ಲವೆಂದವರು ಯಾರು ? "

"ಎರಡನೆಯದಾಗಿ ಆ ವ್ಯಕ್ತಿಯ ಸಂಸ್ಕಾರ. ಅವನು ಜನ್ಮ ಜನ್ಮಾಂ ತರಗಳಿಂದ ಏನು ಕೇಳಿಕೊಂಡು ಬಂದಿದ್ದಾನೋ ಅದನ್ನು ಅನುಭವಿ ಸುತ್ತಾನೆ."

"ನಿಜ"

"ಮೂರನೆಯದಾಗಿ ಅವನ ಸ್ವಬುದ್ಧಿ. ಈ ಜನ್ಮದಲ್ಲಿ ಅವನ ವಿವೇಕ, ವಿವೇಚನೆ ಏನು ಹೇಳಿಕೊಡುತ್ತದೋ ಅದನ್ನು ಅವನು ಎಷ್ಟರ ಮಟ್ಟಿಗೆ ಕಾರ್ಯೋನ್ಮುಖಮಾಡಬಲ್ಲನೋ ಅದರ ಮೇಲೂ ಅವನ ಜೀವನ ಅವಲಂಬಿಸುತ್ತದೆ. ನಿನ್ನ ಮಗನ ಬಾಳನ್ನು ತಿದ್ದಿ, ಹಸನಾಗಿ ಮಾಡಿ,

ಅದಕ್ಕೊಂದು ಸರಿಯಾದ ದಾರಿ ತೋರಿಸುವ ಕರ್ತವ್ಯ ನಿನ್ನದು. ಆದರೆ ಅದು ಯಾವ ದಾರಿ ಹುಡುಕಿಕೊಳ್ಳುತ್ತದೆಯೆಂಬುದನ್ನು ನೀನು ಹೇಗೆ ಊಹಿಸಬಲ್ಲೆ. ನೋಡು—ನನ್ನ ಮನೆಯ ದೃಷ್ಟಾಂತವನ್ನೇ ತೆಗೆದುಕೋ. ನನ್ನ ಮಗ ನನ್ನಂತೆಯೇ ಲಾಯರಾಗುವುದು ನನಗೆ ಸ್ವಲ್ಪವೂ ಇಷ್ಟ ವಿರಲಿಲ್ಲ. ಅವನು ಇಂಜನೀಯರ್ ಆಗಲಿ ಎಂದು ಪ್ರಯತ್ನಪಟ್ಟೆ. ನನ್ನ ಪ್ರಯತ್ನ ಸಾರ್ಥಕವಾಗಲಿಲ್ಲ. ಅವನು ಲಾಯರೇ ಆದ—ಈ ವೃತ್ತಿ ಅವಲಂಬಿಸಿದ ಮೇಲೆ ಇದನ್ನೇ ಸರಿಯಾಗಿ ರೂಢಿಸಿಕೊಂಡು ಕೀರ್ತಿ ವಂತನಾಗಲಿ ಎಂದು ಆಶೀರ್ವಾದಮಾಡಿದೆ."

"ನಮ್ಮ ಮಹಾಬಲನಿಗೆ ನಾನೇನು ಮಾಡಬೇಕು ಅದನ್ನಾದರೂ ಸ್ಪಷ್ಟವಾಗಿ ಹೇಳಯ್ಯ."

"ನಾನು ಹೇಳುವ ವಿಷಯವೇ ಅಲ್ಲ ಅದು. ನೀನೇ ಯೋಚನೆ ಮಾಡು. ಸಮಯ ಸಂದರ್ಭ ಹೇಗೆ ಬರುತ್ತದೋ ನೋಡು. ಅದಕ್ಕನು ಗುಣವಾಗಿ ಉಭಯತ್ರರಿಗೂ ಹಿಂಸೆಯಾಗದ ರೀತಿ ವ್ಯವಹರಿಸು."

"ಅವನ ಖರ್ಚಿನ ವಿಷಯ ಏನೂ ಹೇಳಲೇ ಇಲ್ಲವಲ್ಲಾ."

"ಹುಡುಗರು ಸಂಪಾದನೆಮಾಡುವುದನ್ನು ಹೇಗೆ ಕಲಿಯಬೇಕು ಹಾಗೇ ಖರ್ಚುಮಾಡುವುದನ್ನೂ ಕಲಿಯಬೇಕು. ಮಕ್ಕಳ ಕೈಗೆ ದುಡ್ಡುಕೊಡುವುದು ತಪ್ಪು ಎಂದು ಕೆಲವು ತಂದೆತಾಯಿ ಭಾವಿಸುತ್ತಾರೆ. ಈ ಕೃಪಣತನದಿಂದ ಮುಂದೆ ಮಕ್ಕಳ ಜೀವನ ಬಹಳ ವಿಷಾದಮಯವಾಗುತ್ತದೆ."

"ಸ್ವಬುದ್ಧಿಯಿಂದ ಖರ್ಚುಮಾಡಿದರೆ ಚಿಂತೆಯಿಲ್ಲ. ಹುಲಿ ಬರೆಹಾಕಿ ಕೊಂಡಿದೆ ಎಂದು ನರಿಯೂ ಬರೆಹಾಕಿಕೊಂಡ ಹಾಗೆ ಮಾಡಿದರೆ!"

"ನೋಡು—ಮನುಷ್ಯ ತಪ್ಪುಮಾಡದೆ ಜೀವನ ಸಾಗಿಸಬಲ್ಲ ಎನ್ನುವ ಮಾತು ಸುಳ್ಳು. ತಪ್ಪುಮಾಡಬೇಕು.—ತಿದ್ದಿಕೊಳ್ಳಬೇಕು—ತಪ್ಪುಸರಿಯ ಅಂತರ ಅನುಭವದಿಂದ ಕಂಡುಕೊಳ್ಳಬೇಕು........ಆ ಹುಡುಗ ಯಾರು?"

"ಚಿಂತಾಮಣಿ ಶ್ರೀನಿವಾಸಶೆಟ್ಟರ ಮಗ. ಭಾರಿ ಶ್ರೀಮಂತ."

"ಶೆಟ್ಟರನ್ನು ನಾನು ಬಲ್ಲೆ. ಹುಡುಗ ಸ್ವಲ್ಪ ಷೋಕಿ ಆಸಾಮಿ—ಖರ್ಚುದಾರ. ಆದರೆ ಒಳ್ಳೆಯವನು. ಅವನಲ್ಲಿ ದುಷ್ಟ ಹವ್ಯಾಸ ಯಾವದೂ ಇಲ್ಲ."

"ನೀನು ಹೇಳಿದ ಹಾಗೆ 'ಕಾಲಾಯತಸ್ಮೈನಮಃ' ಎಂದಿರುವುದೇ ಲೇಸೆಂದು ಕಾಣುತ್ತದೆ."

ಚೌಡಪ್ಪನವರ ಅಸಹಾಯಕತೆ ಕಂಡು ಗುಂಡಪ್ಪನವರು ನಸುನಕ್ಕರು.

೫

ಮಹಾಬಲನ ಮನಸ್ಸಿನ ಮೇಲೆ ಉಮಾಪತಿಯ ಸ್ನೇಹ ವಿಪರೀತ ಪರಿಣಾಮವನ್ನುಂಟುಮಾಡಿತು ಇವನನ್ನು ಬಿಟ್ಟು ಅವನಿರುತ್ತಿರಲಿಲ್ಲ; ಅವನನ್ನು ಬಿಟ್ಟು ಇವನಿರುತ್ತಿರಲಿಲ್ಲ. ನಾಣಿಯ ಬಗ್ಗೆ ಮೊದಲು ಎಷ್ಟು ವಿಶ್ವಾಸ ತಳೆದಿದ್ದನೋ ಅಷ್ಟು ಉದಾಸೀನ ತಳೆಯುವುದಕ್ಕಾರಂಭಿಸಿದ.

ಉಮಾಪತಿ ಮನೆಗೆ ಬಂದಾಗ ನಾಣಿಯಿದ್ದುಬಿಟ್ಟರೆ ಮಹಾಬಲನ ಮೈಮೇಲೆ ಮುಳ್ಳೇಳುತ್ತಿತ್ತು. ಮೊದಲು ಕೆಲವು ದಿನ ಈ ಮಾನಸಿಕ ಪರಿವರ್ತನ ನಾಣಿಗೆ ಅರ್ಥವಾಗಲಿಲ್ಲ. ಕ್ರಮಕ್ರಮೇಣ ಅರ್ಥವಾಗಲಾರಂಭವಾಯಿತು. ಅವನ ಮನಸ್ಸು ಮುದುಡಿಹೋಯಿತು. ಮಹಾಬಲನ ಮನೆಗೆ ಬರುವುದನ್ನು ಆದಷ್ಟು ಕಡಿಮೆಮಾಡತೊಡಗಿದ. ತರಗತಿಯಲ್ಲಿಯೂ ಆದಷ್ಟು ಮಹಾಬಲನಿಂದ ದೂರವಿರತೊಡಗಿದ.

ಪರೀಕ್ಷೆ ಹತ್ತಿರ ಬಂತು. ಜತೆಯಲ್ಲಿ ಓದೋಣ ಬಾರೆಂದು ಮಹಾಬಲನೇ ನಾಣಿಯನ್ನು ಕರೆದಿದ್ದ. ಶಾಲೆಮುಗಿದ ಮೇಲೆ ನಾಣಿ ಮನೆಗೆ ಹೋಗಿ ಮಹಾಬಲನ ಮನೆಗೆ ಬಂದ. ಮಹಾಬಲ ಇನ್ನೂ ಮನೆಗೆ ಬಂದಿರಲಿಲ್ಲ. ಅವನಿಗಾಗಿ ಕಾಯುತ್ತ ಕುಳಿತು. ನಾಣಿ ಒಬ್ಬನೇ ಕುಳಿತಿರುವುದನ್ನು ಕಂಡು ಚೌಡಪ್ಪನವರು ಅವನ ಬಳಿ ಬಂದು

"ಚೆನ್ನಾಗಿದ್ದೀಯಾ ಮಗೂ" ಎಂದರು.

"ಇದ್ದೇನೆ ಸಾರ್. ನಿಮ್ಮ ದಯದಿಂದ."

"ನಿನ್ನ ನೋಡಿ ಬಹಳ ದಿವಸವಾಯಿತು."

"ಹೌದು ಸಾರ್. ಈಚೆಗೆ ನಾನು ಇಲ್ಲಿಗೆ ಬರಲಾಗಲಿಲ್ಲ."

"ಏಕಪ್ಪಾ—ಏನು ಯೋಚನೆ ಹೇಳು."

"ಏನೂ ಇಲ್ಲ ಸಾರ್. ಪರೀಕ್ಷೆ ಹತ್ತಿರ ಬಂತು. ಮನೆಯಲ್ಲಿ ನನ್ನ ತಾಯಿಯವರಿಗೆ ಮೈಯಲ್ಲಿ ಸರಿಯಾಗಿರಲಿಲ್ಲ. ಚೂರೂಪಾರೂ ಮನೆಗೆಲಸ ಮಾಡಿಕೊಡಬೇಕಾಗುತ್ತಿತ್ತು."

ಚೌಡಪ್ಪನವರು ಕ್ಷಣಕಾಲ ಯೋಚಿಸಿ, ತಮ್ಮ ಯೋಚನೆ ನಾಣಿಗೆ ತಿಳಿಯದಿರಲೆಂದು ಒಂದು ಚಿಟಿಕೆ ನಶ್ಯ ಮೂಗಿಗೇರಿಸಿ, ವಸ್ತ್ರದಿಂದ ಒರಿಸಿ ಕೊಳ್ಳುತ್ತಾ

"ಮಹಾಬಲ ನಿನ್ನ ವಿಷಯದಲ್ಲಿ ಸರಿಯಾಗಿದ್ದಾನೆಯೇ ನಾಣಿ"

ಎಂದು ಕೇಳಿದರು. ಅವರ ಪ್ರಶ್ನೆ ನಾಣಿಯನ್ನು ದಂಗುಬಡಿಸಿತು. ಅದರ ಓಘದಿಂದ ಚೇತರಿಸಿಕೊಂಡು

"ಯಾಕೆ ಸಾರ್ ಹೀಗೆ ಕೇಳುವಿರಿ. ನಾನೂ ಅವನೂ ವ್ಯಾಜ್ಯ ಕಾದಿಲ್ಲವಲ್ಲಾ."

"ವ್ಯಾಜ್ಯಕಾದಿಲ್ಲ—ಆದರೆ ಅವನು ಹಿಂದಿನಂತೆ ವಿಶ್ವಾಸವಾಗಿದ್ದಾನೆಯೇ ?"

"ಇದ್ದಾನೆ ಸಾರ್. ಮನೆಗೇಕೆ ಬರುತ್ತಿಲ್ಲ ಎಂದು ಮೇಲಿಂದ ಮೇಲೆ ಕೇಳುತ್ತಾನೆ. ಅವನ ಮನಸ್ಸು ಬಹಳ ಒಳ್ಳೆಯದು ಸಾರ್."

ನಾಣಿ ತಮ್ಮಲ್ಲಿ ಸುಳ್ಳು ಹೇಳುತ್ತಿದ್ದಾನೆಂದು ಚೌಡಪ್ಪನವರು ಚೆನ್ನಾಗಿ ಬಲ್ಲರು. ಇನ್ನು ಆ ವಿಷಯ ಕೆದಕಿಕೇಳುವುದರಲ್ಲಿ ಪ್ರಯೋಜನ ವಿಲ್ಲವೆಂದು ಸುಮ್ಮನಾದರು.

ಚೌಡಪ್ಪನವರು ಇನ್ನೆಲ್ಲಿ ಪ್ರಶ್ನೆಹಾಕಿ ನಿಜಸ್ಥಿತಿ ತನ್ನ ಬಾಯಿಂದ ಹೊರಡಿಸುತ್ತಾರೋ ಎಂದು ನಾಣಿ ಹೆದರಿ ಹೊರಡಲೆದ್ದ. ಚೌಡಪ್ಪನವರು ಅವನ ಆತುರ ಕಂಡು

"ಏಕೆಮಗೂ ಹೊರಟುಬಿಟ್ಟೆ. ಕೂತುಕೋ. ಮಹಾಬಲ ಬರುತ್ತಾನೆ."

"ನಾನು ಇವತ್ತು ಮನೆಗೆ ಬೇಗ ಹೋಗಬೇಕಾಗಿದೆ ಸಾರ್. ಇವತ್ತಿನ ಅಡಿಗೆ ನಾನೇ ಮಾಡಬೇಕಾಗಿದೆ."

"ಹಾಗಾದರೆ ಹೋಗಿ ಬಾಪ್ಪ."

ಎಂದು ಚೌಡಪ್ಪನವರು ಕಳಿಸಿಕೊಟ್ಟು, ಮಹಾಬಲನ ಬರುವನ್ನು ನಿರೀಕ್ಷಿಸುತ್ತ ಕುಳಿತರು.

ಮುಕ್ಕಾಲು ಗಂಟೆಯಾದನಂತರ ಉಮಾಪತಿಯ ಕಾರಿಂದಿಳಿದು ಮಹಾಬಲ ಒಳಕ್ಕೆ ಬಂದ. ತಂದೆಯನ್ನು ನೋಡಿ

"ಏಕಣ್ಣಾ—ವಾಕಿಂಗ್ ಹೋಗಲಿಲ್ಲವೇ ?" ಎಂದು ಕೇಳಿದ.

"ಇಲ್ಲಪ್ಪಾ—ಗುಂಡೂರಾಯರು ಏನೋ ಕೆಲಸದ ಮೇಲೆ ಹೊರಟ್ಟಿದ್ದರು. ಎಲ್ಲಿಗೆ ಹೋಗಿದ್ದೆ ಮಹಾಬಲ?"

"ಉಮಾಪತಿ ಸೂಟ್ ಹೊಲೆ ಹಾಕಬೇಕಾಗಿತ್ತಂತೆ. ಕಂಟೋನ್ಮೆಂಟಿಗೆ ಎಳೆದುಕೊಂಡು ಹೋದ."

"ಪರೀಕ್ಷೆ ಹತ್ತಿರ ಬಂತಲ್ಲಪ್ಪಾ."

"ಬರಲಿ ಭಯವೇನು? ಕ್ಲಾಸ್ ಪರೀಕ್ಷೆ."

"ನಾಣಿ ಬಂದಿದ್ದ."

"ಬಂದಿದ್ದನೇ. ಜತೆಯಲ್ಲಿ ಓದೋಣ ಬಾ ಎಂದು ಹೇಳಿದ್ದೆ."

"ನೀನೇ ಅವನ ಮನೆಗೆ ಹೋಗಿ ಓದಿಕೊಂಡು ಬಾ."

"ಅವನ ಮನೆಯಲ್ಲಿ ಜಾಗವಿಲ್ಲಣ್ಣ, ಜಿಗಿ ಜಿಗಿ ಎನ್ನುತ್ತಿರುತ್ತದೆ. ಮನೆಯಲ್ಲಿ ಅವನಿಗೆ ನೂರೆಂಟು ಕೆಲಸ ಅಂಟಿಸುತ್ತಿರುತ್ತಾರೆ. ಅವನು ಎದ್ದು ಎದ್ದು ಹೋಗುತ್ತಿರುತ್ತಾನೆ."

"ಕ್ಲಾಸ್ ಪರೀಕ್ಷೆಯಾದರೂ ಚಿಂತೆಯಿಲ್ಲ, ಸ್ವಲ್ಪ ಓದಿಕೊಳ್ಳಪ್ಪಾ." ಎಂದು ಹೇಳಿ ಚೌಡಪ್ಪನವರು ಹೊರಗೆ ಹೋದರು. ತಂದೆಗೆ ನಾಣಿ ಏನಾದರೂ ಹೇಳಿ ಹೋದನೇ ಎಂದು ಮಹಾಬಲನಿಗೆ ಯೋಚನೆಯಾಯಿತು. 'ಛೆ' ನಾಣಿ ಒಳ್ಳೆಯ ಹುಡುಗ ಇಲ್ಲದ ತರಲೆ ಮಾಡುವವನಲ್ಲ ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡ.

ಮಹಾಬಲನ ಮನಸ್ಸಿನಲ್ಲಿ ನಾಣಿಯ ಬಗ್ಗೆ ಮೂಡುತ್ತಿದ್ದ ಔದಾಸೀನ್ಯ, ಉಮಾಪತಿಯ ಬಗ್ಗೆ ಬೆಳೆಯುತ್ತಿದ್ದ ವಿಶ್ವಾಸವನ್ನು ಚೌಡಪ್ಪನವರು ಚೆನ್ನಾಗಿ ಗಮನಿಸಿದ್ದರು.

"ಮನೆಯ ಕೆಲಸವೂ ಮಾಡಿಕೊಟ್ಟು ಆ ಹುಡುಗ ಎಷ್ಟು ಶ್ರದ್ಧೆಯಿಂದ ಓದುತ್ತಾನೆ ನೋಡು."

"ಹೊ!"

"ಅದೇ ಬದುಕುವ ಲಕ್ಷಣ ಮಹಾಬಲ."

"ನಾನು ಓದುವುದಿಲ್ಲವೇ?"

"ಓದುವುದಿಲ್ಲವೆಂದು ನಾನು ಹೇಳುತ್ತಿಲ್ಲ. ಆದರೆ ಓದಿನ ಮೇಲೆ ನಿನಗೆ ಶ್ರದ್ಧೆ ಕಡಿಮೆ."

"ಸುಮ್ಮನೆ ಇಪ್ಪತ್ತು ನಾಲ್ಕುಗಂಟೆ ಓದಿದರೆ ಪಾಠ ತಲೆಗೆ ಹತ್ತುವುದಿಲ್ಲಪ್ಪಾ."

"ಅದನ್ನು ನಾನು ಬಲ್ಲೆ ಮಹಾಬಲ. ವಿದ್ಯೆಗೆ ವಿರಾಮ-ವಿಶ್ರಾಂತಿ ಬೇಕು. ಆದರೆ ನಿನಗೆ ಎರಡೂ ದೊರೆಯುತ್ತಿಲ್ಲ, ನಿನಗೆ ಒಂದು ಮಾತು ಸ್ಪಷ್ಟವಾಗಿ ಹೇಳಬೇಕೆಂದು ಬಹಳ ದಿವಸದಿಂದ ಮನಸ್ಸು ಹಾತೊರೆಯುತ್ತಿದೆ. ಎಷ್ಟಾದರೂ ನೀನು ಮಗು. ಎಲ್ಲಿ ಮನಸ್ಸಿಗೆ ನೋವುಂಟುಮಾಡಿಕೊಳ್ಳುವೆಯೋ ಎಂದು ಸುಮ್ಮನಿದ್ದೆ."

"ಹೇಳು ಪರವಾಯಿಲ್ಲ."

"ನಾಣಿಯ ಸ್ನೇಹ ಕಡೆಗಾಣಿಸಿ ಉಮಾಪತಿಯ ಸ್ನೇಹ ಬೆಳಸುವುದು ನ್ಯಾಯವಲ್ಲ."

"ನಾಣಿ ಆಕ್ಷೇಪಣೆ ಮಾಡಿದನೇ ?"

"ಆ ಹುಡುಗ ಅಂಥ ಕೆಲಸಕ್ಕೆ ಹೋಗುವವನಲ್ಲ, ಆದರೆ ಅವನ ಮನಸ್ಸಿನಲ್ಲಿ ಅಸಮಾಧಾನ ಮೂಡಿದೆಯೆಂಬುದನ್ನು ಯಾರು ಬೇಕಾದರೂ ಕಂಡುಕೊಳ್ಳಬಹುದು."

"ಉಮಾಪತಿ ಸ್ನೇಹಕ್ಕೆ ಅಯೋಗ್ಯನೇ ?"

"ನಾನು ಹಾಗೆ ಹೇಳಲಿಲ್ಲವಲ್ಲ."

"ಸ್ಪಷ್ಟವಾಗಿ ಹೇಳಲಿಲ್ಲ-ಸೂಕ್ಷ್ಮವಾಗಿ ಸೂಚಿಸಿದೆ."

"ತಪ್ಪು ತಿಳಿದುಕೊಳ್ಳಬೇಡ ಮಹಾಬಲ. ಉಮಾಪತಿ ವಿದ್ಯೆಯ ಮೇಲೇ ಅವಲಂಬಿಸಬೇಕಾಗಿಲ್ಲ. ಅವನು ಕೂತು ತಿನ್ನುವುದಕ್ಕೆ ಹಿರಿಯರು ಬೇಕಾದಷ್ಟು ಆಸ್ತಿ ಮಾಡಿಟ್ಟಿರುತ್ತಾರೆ. ಸ್ಕೂಲಿಗೆ ಹೋಗುವುದೂ ವಿದ್ಯೆ ಕಲಿಯುವುದೂ ಅವನಿಗೊಂದು ವಿನೋದ. ಆದರೆ ನಾಣಿಗೆ ವಿದ್ಯೆಯೇ ಸರ್ವಸ್ವ. ಅವನ ಸಮಸ್ತ ಭವಿಷ್ಯವೂ ಅವನ ವಿದ್ಯಾರ್ಜನೆಯನ್ನೇ ಅವಲಂಬಿಸಿದೆ. ನೀನು ಉಮಾಪತಿಯಷ್ಟು ಶ್ರೀಮಂತನೂ ಅಲ್ಲ, ನಾಣಿಯಷ್ಟು ಬಡವನೂ ಅಲ್ಲ. ನಾನು ನಿನಗೆ ಬಿಟ್ಟುಹೋಗುವ ಆಸ್ತಿ ಅಪಾರವಾದುದೇನೂ ಅಲ್ಲ. ಅದನ್ನು ರೂಢಿಸಿ ಬೆಳಸಿಕೊಂಡರೆ ಅದೊಂದು ಆಸ್ತಿ. ಕಷ್ಟಪಟ್ಟರೆ ಸುಖವಾಗಿ ಜೀವನಮಾಡಬಹುದು. ಈ ಸ್ಥಿತಿಯಲ್ಲಿ ನೀನು ಉಮಾಪತಿಯನ್ನು ಅನುಕರಿಸುವುದರಿಂದ ಹಿತವಿದೆಯೇನು ಹೇಳು."

"ಉಮಾಪತಿ ಜತೆ ನಾನು ಸೇರಬೇಡವೇ ?"

"ನೀನೇ ಯೋಚಿಸಿ ನೋಡು. ಯಾವುದು ಸರಿಯೆಂದು ತೋರುತ್ತದೆಯೋ ಅದನ್ನು ಮಾಡು. ಉಮಾಪತಿಯ ಸ್ನೇಹಕ್ಕೆ ನಾಣಿಯನ್ನು ನಿರಾಕರಿಸಬೇಡವೆಂದು ಮಾತ್ರ ನಾನು ಹೇಳಬಲ್ಲೆ."

ತಂದೆಯ ಮಾತಿಗೆ ಮಹಾಬಲ ಎದುರು ಹೇಳಲಿಲ್ಲ. ಅವನ ಮನಸ್ಸಿನಲ್ಲಿ ತುಮುಲಯುದ್ಧವಾರಂಭವಾಯಿತು. 'ನಾಣಿ, ತಂದೆಯವರ ಹತ್ತಿರ ಚಾಡಿ ಹೇಳಿರಬಹುದೆ' ಎಂದು ಯೋಚಿಸಿದ ನಾಣಿಯ ಮೇಲೆ ಅಂಥ ಆಪಾದನೆ ಹೊರಿಸುವುದು ತಪ್ಪೆಂದು ತೋರಿತು.

ಅಂದು ಸಂಜೆ 'ಗ್ಲೋಬ್ ಸಿನಿಮಾ ಮಂದಿರ'ಕ್ಕೆ ಹೋಗುವುದೆಂದು ಮಹಾಬಲ, ಉಮಾಪತಿ ನಿರ್ಧರಿಸಿದ್ದರು. ಉಮಾಪತಿ ಬರುವುದರೊಳಗಾಗಿ ಬಟ್ಟೆಹಾಕಿಕೊಂಡು ಮಹಾಬಲ ಮನೆಬಿಟ್ಟು ಹೊರಟುಬಿಟ್ಟಿದ್ದ. ಅಂದವನು ನಾಣಿ ಮನೆಗೂ ಹೋಗಲಿಲ್ಲ.

೬

ನಾಣಿ ಕ್ರಮವಾಗಿ ಮಹಾಬಲನ ಮನೆಗೆ ಬರುತ್ತಿದ್ದ. ಪರೀಕ್ಷೆ ಸಮೀಪಿಸಿದ್ದರಿಂದ ಇಬ್ಬರೂ ಪಾಠಪ್ರವಚನಗಳಲ್ಲಿ ನಿರತರಾದರು. ಮೊದಲಿನಂತೆ ಮಹಾಬಲ ಉಮಾಪತಿಯ ಜತೆ ಸೇರದಿರುವುದನ್ನು ಕಂಡು ನಾಣಿಗೆ ಆಶ್ಚರ್ಯವಾಗಿತ್ತು. ಆ ವಿಷಯ ಪ್ರಸ್ತಾಪಿಸಲೇ ಬೇಡವೇ ಎಂದು ಯೋಚಿಸಿ ಒಂದು ದಿನ

"ಮಹಾಬಲ, ಈಚೆಗೆ ಉಮಾಪತಿಯನ್ನು ಕಾಣಲೇ ಇಲ್ಲ" ಎಂದ.

"ಪರೀಕ್ಷೆಗೆ. ಅವನೂ ಓದುತ್ತಿದ್ದಾನೆ. ಮನೇಗೆ ಮೇಷ್ಟರು ಬರುತ್ತಾರೆ."

ನೀನು ಅವರ ಮನೆ ಕಡೆ ಈಚೆಗೆ ಹೋಗಿದ್ದೆಯಾ ? "

"ಏಕೆ ?"

"ಸುಮ್ಮನೆ ಕೇಳಿದೆ. ನಿನಗೂ ಅವನಿಗೂ ಮನಸ್ತಾಪ ಬಂದಿಲ್ಲವಷ್ಟೆ ?"

ಮನಸ್ತಾಪ ಏಕೆ ಬರಬೇಕು ?"

"ಬರಬಾರದು. ಲೋಕದಲ್ಲಿ ಸ್ನೇಹ ಬೆಳೆಯುವುದು ಕಷ್ಟ. ಬೆಳೆದ ಸ್ನೇಹವನ್ನು ಮುರಿಯಗೊಡುವುದು ಅವಿವೇಕ."

"ನಾಣಿ, ನಿನ್ನ ಹತ್ತಿರ ಒಂದು ವಿಷಯ ನಾನು ಹೇಳಿಲ್ಲ. ಈಗ ನೀನೇ ಪ್ರಸ್ತಾಪಮಾಡಿದುದರಿಂದ ಹೇಳುತ್ತೇನೆ."

"ಹೇಳು. ಮರೆಮಾಚುವುದಕ್ಕೇನಿದೆ."

"ನಾನು ಉಮಾಪತಿಯ ಸ್ನೇಹ ಬೆಳಸಿದುದಕ್ಕೆ ತಂದೆಯವರು ಕೋಪಿಸಿಕೊಂಡರು."

"ಅದರಲ್ಲಿ ತಪ್ಪೇನು ?"

"ನಿನ್ನ ನಿರ್ಲಕ್ಷಿಸಿ ಶ್ರೀಮಂತ ಹುಡುಗನ ಸ್ನೇಹಬಯಸುತ್ತೇನೆಂದು ತಂದೆಯವರು ಭಾವಿಸಿಕೊಂಡರು. ನೀನು ಅವರ ಹತ್ತಿರ ಏನಾದರೂ ಹೇಳಿರಬಹುದೆಂದು ನಾನು ಅನುಮಾನಪಟ್ಟುಕೊಂಡೆ."

"ನಾನೇ ಹೇಳುವುದು ? "

"ಹೂ ! ನಾನು ಹಾಗೆ ಭಾವಿಸಿಕೊಂಡೆ. ನನ್ನ ಭಾವನೆ ತಪ್ಪಾಗಿದ್ದರೆ ಕ್ಷಮಿಸು."

"ನಾನೇನೂ ಹೇಳುವುದಕ್ಕೆ ಹೋಗಿಲ್ಲ ಮಹಾಬಲ. ನಿಮ್ಮ ತಂದೆ ತುಂಬ ತಿಳುವಳಿಕಸ್ಥರು. ಅವರೇ ಎಲ್ಲಾ ಲೆಕ್ಕಾಚಾರ ಹಾಕಿಕೊಂಡು ಆ ವಿಧವಾದ ಅಭಿಪ್ರಾಯವಿಟ್ಟುಕೊಂಡರು. ಇನ್ನೊಂದು ಮಾತು ಕೇಳು— ದ್ರೋಣರ ಗುರುಕುಲದಲ್ಲಿ ಕೌರವ ಪಾಂಡವರಿಬ್ಬರಿಗೂ ಅಸ್ತ್ರ ವಿದ್ಯಾಭ್ಯಾಸ ವಾಗುತ್ತಿತ್ತಂತೆ."

"ಇದೇನಯ್ಯ ಪುರಾಣದ ಕಥೆ ಹೇಳುತ್ತಿರುವೆ."

"ಮುಂದೆ ಕೇಳು.—ಅಲ್ಲಿಗೆ ಕರ್ಣ ಬಂದನಂತೆ. ಅವನು ಸೂತಪುತ್ರ —ಕಾನೀನ. ಅರ್ಜುನ ಆಗಂತುಕನನ್ನು ನೋಡಿ ತಿರಸ್ಕರಿಸಿದನಂತೆ. ಭೀಮ ಕರ್ಣನನ್ನು ಕೆಣಕಿದನಂತೆ. ಸುಯೋಧನ ಮಾತ್ರ ಕರ್ಣನ ಮೈತ್ರಿ ಬಯ ಸಿದನಂತೆ. ಆಕರ್ಷಣ ವಿಕರ್ಷಣಗಳಿಗೆ ಕಾರಣಗಳಿರಬಹುದು-ಇಲ್ಲದೆಯೂ ಇರಬಹುದು. ಅರ್ಜುನನ ಕರ್ಣನ ಮನಸ್ಸು ವಿಕರ್ಷಣೆಗಳಿಗೊಳಗಾದವು ಕರ್ಣ ಸುಯೋಧನರ ಮನಸ್ಸು ಹಾಲು ಸಕ್ಕರೆಯಂತೆ ಬೆರೆಯಿತು. ನಿನಗೆ ನನ್ನ ಬಗ್ಗೆ ಇದೇ ಭಾವನೆಯಿರಬಹುದು. ನಿನ್ನ ಮನಸ್ಸು ಉಮಾಪತಿಯ ಮನಸ್ಸು ಹೆಚ್ಚು ಕೂಡಬಹುದು. ನಾನು ಖಂಡಿತವಾಗಿಯೂ ನಿಮ್ಮ ಸ್ನೇಹಕ್ಕೆ ಅಡ್ಡಿ ಬರುವುದಿಲ್ಲ.—ನೀನು ನಿರ್ವ್ಯಾಜ ಅಂತಃಕರಣ ತೋರಿಸಿದೆ.

ಮನೆಗೆ ಕರೆದುಕೊಂಡು ಬಂದು ಆದರಿಸಿದೆ. ನಿನ್ನ ತಂದೆ ಮಗನಂತೆ ನನ್ನ ಪ್ರೀತಿಸಿದರು. ಇದಕ್ಕೆಲ್ಲಾ ನಾನು ಋಣಿ. ನಿನಗೆ ಬೇಡವಾದರೆ ನಾನು ಖಂಡಿತ ಮತ್ತೆ ಇಲ್ಲಿಗೆ ಬರುವುದಿಲ್ಲ. ನಿನ್ನ ಮೇಲೆ ಕೋಪದಿಂದ ಈ ಮಾತು ಹೇಳುತ್ತಿದ್ದೇನೆಂದು ಭಾವಿಸಬೇಡ. ನನ್ನ ಬಾಳಿನಿಂದ ಯಾರಿಗೂ ಅಹಿತವಾಗದಿದ್ದರೆ, ಯಾರ ಮನಸ್ಸಿಗೂ ವಿಷಾದವಾಗದಿದ್ದರೆ ಸಾಕು. ಇದಕ್ಕಿಂತ ನಾನು ಹೆಚ್ಚು ಏನನ್ನೂ ಬಯಸುವುದಿಲ್ಲ."

ಮಾತು ಮುಗಿಸುತ್ತ ನಾಣಿಯ ಕಂಠ ಗದ್ಗದಿತವಾಯಿತು. ಅವನ ಮನಸ್ಸಿಗಾಗಿದ್ದ ಯಾತನೆಯನ್ನು ಮಹಾಬಲ ಲಕ್ಷಿಸಿದ. ಅವನ ಹೃದಯದಲ್ಲಿಯೂ ನೋವುಂಟಾಗಿತ್ತು.

ನಾಣಿಗೆ ಒಂದೆರಡು ಸಮಾಧಾನದ ಮಾತು ಹೇಳುವುದು ಅವಶ್ಯಕವೆಂದು ಮಹಾಬಲ ಭಾವಿಸಿದ.

"ತಂದೆಯವರು ಹಾಗೆ ಭಾವಿಸಿಕೊಂಡರು ನಾಣಿ. ನಿನ್ನ ವಿಚಾರದಲ್ಲಿ ನನ್ನ ವಿಶ್ವಾಸ ಕಡಿಮೆಯಾಗಿಲ್ಲ. ನಿನ್ನ ಮನಸ್ಸು ನೋಯಿಸಬೇಕೆಂಬ ಉದ್ದೇಶ ಖಂಡಿತವಾಗಿಯೂ ನನಗಿಲ್ಲ."

"ಹೋಗಲಿ ಬಿಡು. ಕಳೆದುಹೋದುದನ್ನು ಚಿಂತಿಸಿ ಫಲವೇನು? ನೀನೂ, ನಿನ್ನ ತಂದೆಯವರು ಮಾಡಿರುವ ಉಪಕಾರಕ್ಕೆ ನಾನು ಯಾವ ರೀತಿಯಲ್ಲಿಯೂ ಪ್ರತ್ಯುಪಕಾರ ಮಾಡಲಾರೆ ಮಹಾಬಲ. ನನ್ನ ಹೃದಯದಲ್ಲಿ ತುಂಬಿರುವ ಕೃತಜ್ಞತೆಯನ್ನು ಯಾವ ಬಗೆಯಲ್ಲಿ ಸೂಚಿಸಬೇಕೋ ಕಾಣೆ."

"ನಾವೇನೂ ನಿನ್ನ ತಲೆಯ ಮೇಲೆ ಕಿರೀಟ ಹೊರೆಸಿಲ್ಲ ನಾಣಿ."

"ಹೊರೆಸಿದ್ದೀರಿ. ಪ್ರಾಯಶಃ ಅದು ನಿಮಗೇ ಗೊತ್ತಿಲ್ಲದಿರಬಹುದು. ದುಃಖಿಜೀವಕ್ಕೆ ನಾಲ್ಕು ಪ್ರಿಯವಚನ, ನಾಲ್ಕು ಧೈರ್ಯದ ಮಾತು ಹೇಳುವವರು ಅವನಿಗೆಂಥ ಉಪಕಾರ ಮಾಡುವರೆಂಬುದನ್ನು ನೀನು ಕಾಣೆ. ದುಃಖದ ಸ್ವರೂಪ ನೀನರಿಯೆ. ಮುಂದಾದರೂ ನೀನು ಅರಿಯಲೇ ಬಾರದೆಂದು ನನ್ನ ಹಾರೈಕೆ. ದೇವರು ಹೀಗೆಯೇ ನಿನ್ನನ್ನು ಸುಖಿಯಾಗಿಟ್ಟಿರಲಿ."

ನಾಣಿಯ ಮನತುಂಬಿದ ಮಾತುಗಳು ಮಹಾಬಲನ ಅಂತಃಕರಣವನ್ನು ಮುತ್ತಿದವು. ಸ್ನೇಹದ ಪವಿತ್ರ ಸ್ವರೂಪ ಅವನ ಮುಂದೆ ಬೃಹದ್-ರೂಪ ತಾಳಿ ನಿಂತಂತಾಯಿತು.

"ನನ್ನನ್ನು ಕ್ಷಮಿಸು ನಾಣಿ. ನಾನು ತಪ್ಪುಮಾಡಿದರೆ ತಿದ್ದುವುದು ನಿನ್ನ ಕರ್ತವ್ಯವಲ್ಲವೇ ?"

"ಅಷ್ಟು ಜವಾಬುದಾರಿ ನನಗೆ ಬೇಡ ಮಹಾಬಲ. ಪ್ರೇಮದ ಕಣ್ಣಿಗೆ ತಪ್ಪು ಕಾಣುವುದಿಲ್ಲ."

ನಾಣಿಯ ಒಂದೊಂದು ಮಾತಿನಲ್ಲಿಯೂ ಸತ್ಯದ ಹೊಳಪು ಕಂಡು ಬರುತ್ತಿತ್ತು.

ಇವನಿಗೆಲ್ಲಿಂದ ಬಂತು ಇಂಥ ಅನುಭವ ಎಂದು ಮಹಾಬಲ ಯೋಚಿಸಿದ.

೭

ಉಮಾಪತಿ ಮೂರು ನಾಲ್ಕು ಸಲ ಮಹಾಬಲನನ್ನು ಹುಡುಕಿಕೊಂಡು ಬಂದ. ಅವನು ಯಾವಾಗ ಬಂದರೂ ಮಹಾಬಲ ಕೈಗೆ ಸಿಕ್ಕುತ್ತಿರಲಿಲ್ಲ. ಉಮಾಪತಿಗೆ ಯೋಚನೆ ಹತ್ತಿಕೊಂಡಿತು. ತನ್ನ ಆಳಿನ ಕೈಯಲ್ಲಿ ಚೀಟಿ ಬರೆದು ಕಳಿಸಿದ.

ಆಳು ತಂದುಕೊಟ್ಟ ಚೀಟಿಯನ್ನು ಮಹಾಬಲನ ಪರವಾಗಿ ಚೌಡಪ್ಪ ನವರು ತೆಗೆದುಕೊಂಡರು. ಕಾಗದದ ಒಕ್ಕಣೆ ನೋಡಿ ಅವರ ಮನಸ್ಸಿಗೆ ವ್ಯಥೆಯಾಯಿತು.

ಮಹಾಬಲ ಮನೆಗೆ ಬಂದ ಕೂಡಲೆ ಅವನ ಕೈಗೆ ತಾವೇ ಕಾಗದ ವಿತ್ತರು. ಮಹಾಬಲ ಕಾಗದ ಓದಿ ನೋಡಿಕೊಂಡು, ಜೇಬಿನಲ್ಲಿ ಸೇರಿಸಿದ ಚೌಡಪ್ಪನವರು ಮಗನನ್ನು ಕೇಳಿದರು.

"ಉಮಾಪತಿಯನ್ನು ಈಚೆಗೆ ನೋಡಲಿಲ್ಲವೇ ?"

"ಇಲ್ಲ. ನೋಡಲಿಲ್ಲ."

"ಅವನು ಮೂರು ನಾಲ್ಕುಸಲ ಇಲ್ಲಿಗೆ ಬಂದಿದ್ದನಂತೆ."

"ಬಂದಿದ್ದನಂತೆ."

"ಅವನ ಮನೆಗೆ ಹೋಗಿ ಬರಬೇಕಾಗಿತ್ತು."

"ಹೋಗಲು ಮನಸ್ಸಾಗಲಿಲ್ಲ."

"ಏಕೆ ಮಹಾಬಲೂ ?"

"ಶ್ರೀಮಂತರ ಸಹವಾಸ ಬೇಡವೆಂದು ನೀನೇ ಹೇಳಿದೆ."

"ನಾನು ಹೇಳಿದ್ದನ್ನು ನೀನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಶ್ರೀಮಂತಿಕೆಗೆ ಮರುಳಾಗಿ ಬಡವರನ್ನು ನಿರಾಕರಿಸಬಾರದೆಂದು ನಾನು ಹೇಳಿದೆ. ಉಮಾಪತಿಯ ಸ್ನೇಹಕ್ಕಾಗಿ ನಾಣಿಯನ್ನು ದೂರಮಾಡಬೇಡ ವೆಂದು ಹೇಳಿದೆ. ನೀನು ಉಮಾಪತಿಯನ್ನೂ ಹೀಗೆ ದೂರವಿಡುತ್ತೀಯೆಂದು ನಾನು ಯೋಚಿಸಲಿಲ್ಲ. ಆ ಹುಡುಗ ಯಾವ ಅನ್ಯಾಯವನ್ನೂ ಮಾಡಿಲ್ಲ. ವಿನಾಕಾರಣ ಅವನ ಸಂಗ ಬಿಡುವುದೂ ನನಗೆ ನ್ಯಾಯವೆಂದು ತೋರುವುದಿಲ್ಲ."

"ನಾನೇನು ಮಾಡಲಿ ? "

"ಇಬ್ಬರ ಸ್ನೇಹವನ್ನೂ ಇಟ್ಟುಕೋ ? "

"ಅದು ಸಾಧ್ಯವಿಲ್ಲ. ನಾಣಿಯನ್ನು ಉಮಾಪತಿ ಹತ್ತಿರ ಸೇರಿಸುವು ದಿಲ್ಲ. ಉಮಾಪತಿಯನ್ನು ಕಂಡರೆ ನಾಣಿಗೂ ಅಷ್ಟಷ್ಟೇ ! "

"ನಾನು ಬೇಕಾದರೆ ಉಮಾಪತಿಗೆ ಒಂದು ಮಾತು ಹೇಳಿನೋಡು ತ್ತೇನೆ. ಈ ವಯಸ್ಸಿನಲ್ಲಿ ನೀವು ಪಕ್ಷ ವಿಪಕ್ಷ ಕಟ್ಟುವುದು ಸರಿಯಲ್ಲ."

ಈ ಸಮಸ್ಯೆಯನ್ನು ತಂದೆ ಹೇಗೆ ಬಿಡಿಸುತ್ತಾರೆಂದು ನೋಡಲು ಮಹಾಬಲ ಕುತೂಹಲಿಯಾದ.

ಒಂದು ದಿನ ಮನೆಯಲ್ಲಿ ಲಕ್ಷಣವಾಗಿ ತಿಂಡಿ ಮಾಡಿಸಿ ಉಮಾಪತಿ, ನಾಣಿ ಇಬ್ಬರಿಗೂ ಚೌಡಪ್ಪನವರೇ ಹೇಳಿ ಕಳಿಸಿದರು.

ಉಮಾಪತಿಗಾದ ಸಂತೋಷಕ್ಕೆ ಪಾರವೇ ಇಲ್ಲ. ತಿಂಡಿ ಮುಗಿಯು ತ್ತಲೇ ಮಹಾಬಲನನ್ನು ಕರೆದುಕೊಂಡು ಸರ್ಕಸ್ಸಿಗೆ ಹೋಗುವುದೆಂದು ಲೆಕ್ಕ ಹಾಕಿಕೊಂಡೇ ಅವನು ಬಂದ.

ಉಮಾಪತಿ, ಮಹಾಬಲ ಮಾತನಾಡುತ್ತ ಕುಳಿತಿರುವಂತೆ ನಾಣಿಯೂ ಬಂದ. ನಾಣಿಯನ್ನನುಸರಿಸಿ ಚೌಡಪ್ಪನವರೂ ಬಂದು ಎಲ್ಲರ ಜತೆ ಕುಳಿತರು.

ತಿಮ್ಮಮ್ಮ ತಿಂಡಿ ತಟ್ಟೆಗಳನ್ನೂ ಕಾಫಿ ಲೋಟಗಳನ್ನೂ ಬಾಗಿಲು ಬಳಿ ತಂದಿಟ್ಟರು. ಮಹಾಬಲ ಅವುಗಳನ್ನು ತೆಗೆದುಕೊಂಡು ಎಲ್ಲರಿಗೂ ಹಂಚಿದ.

ನಾಣಿ ಬಂದುದನ್ನು ಕಂಡಕೂಡಲೆ ಉಮಾಪತಿಯ ಮುಖ ಸ್ವಲ್ಪ ಹುಳ್ಳಗೆ ಆಯಿತು. ಚೌಡಪ್ಪನವರು ಅದನ್ನು ಗಮನಿಸದಿರಲಿಲ್ಲ.

ಹೀರೇಕಾಯಿ ಬೋಂಡ ಬಾಯಿಗೆ ಹಾಕಿಕೊಂಡು ಚೌಡಪ್ಪನವರು ಎಲ್ಲರನ್ನೂ ಉಪಚರಿಸಿದರು.

ಉಮಾಪತಿಯ ಗಂಟಲಲ್ಲಿ ತಿಂಡಿ ಸಾವಕಾಶವಾಗಿ ಇಳಿಯುತ್ತಿತ್ತು.

"ಏಕೆ ಉಮಾಪತಿ, ನಿನಗೆ ಬೋಂಡ ಸೇರುವುದಿಲ್ಲವೇ ?"

ಎಂದು ಚೌಡಪ್ಪನವರು ಕೇಳಿದರು.

"ಸೇರುತ್ತದೆ ಸಾರ್. ಆದರೆ ನಾನು ಖಾರ ಹೆಚ್ಚು ತಿನ್ನುವುದಿಲ್ಲ."

"ಕೇಸರೀಭಾತೇ ತೆಗೆದುಕೋ."

"ಬೇಡಿ ಸಾರ್ ತಟ್ಟೆಯಲ್ಲಿಯೇ ಬೇಕಾದಷ್ಟಿದೆ."

"ನಿನ್ನ ಓದು ಹೇಗೆ ಸಾಗಿದೆ ?"

"ಮನೆಗೆ ಮೇಷ್ಟ್ರು ಬರುತ್ತಿದ್ದಾರೆ. ತಕ್ಕಮಟ್ಟಿಗೆ ಸಾಗಿದೆ."

"ನಿನ್ನ ಓದು ಹೇಗೆ ಸಾಗಿದೆಯಪ್ಪಾ."

"ಏನು ಓದುವುದು ಸಾರ್. ಪುರಸತ್ತೇ ಇಲ್ಲ."

"ಪರೀಕ್ಷೆ ಹತ್ತಿರ ಬಂತು."

"ಪಾಸಾಗಬಹುದು ಸಾರ್."

"ನೀವು ಮೂವ್ವರೂ ಒಟ್ಟಿಗೆ ಓದಿಕೊಂಡರೆ ಆಗುವುದಿಲ್ಲವೇ !"

"ಆಗದೆ ಏನು ?"

ಎಂದು ಮಹಾಬಲ ಹೇಳಿದ. ಅವನ ಮುಖವನ್ನೊಮ್ಮೆ ಉಮಾಪತಿ ನೋಡಿದ.

"ನೀನೇನು ಹೇಳುವೆ ಉಮಾಪತಿ."

"ನಾನೇನು ಬೇಡವೆನ್ನುವುದಿಲ್ಲ ಸಾರ್. ಆದರೆ ಒಬ್ಬರಿಗೆ ಒಂದೊಂದು ವೇಳೆ ಅನುಕೂಲ."

"ನೀನೂ ಮಹಾಬಲ ಸ್ವತಂತ್ರರಾಗಿದ್ದೀರಿ. ನೀವಿಬ್ಬರೂ ನಾಣಿಯ ಅನುಕೂಲಕ್ಕೆ ಹೊಂದಿಕೊಂಡರಾಯಿತು. ದಿನವೂ ಇಲ್ಲಿಗೇ ಬಂದುಬಿಡಿ."

ನಾಣಿ ಏನೋ ಹೇಳಬೇಕೆಂದು ಪ್ರಯತ್ನಿಸಿ ಮಾತನ್ನು ನುಂಗಿಕೊಂಡ. ಉಮಾಪತಿ ಅನುಮಾನಿಸುತ್ತಿದ್ದುದನ್ನು ಕಂಡು ಚೌಡಪ್ಪನವರು.

"ನಿನಗೆ ಇಷ್ಟವಿಲ್ಲವೇ ಉಮಾಪತಿ ?"

ಉಮಾಪತಿ ಉತ್ತರ ಹೇಳಲಿಲ್ಲ. ನಾಣಿ ವ್ಯಗ್ರತೆಯಿಂದ

"ನನ್ನ ಜತೆ ಓದುವುದಕ್ಕೆ ಅವನಿಗೆ ಇಷ್ಟವಿಲ್ಲ ಸಾರ್."

"ಏಕೆ ಉಮಾಪತಿ ?"

"ನಾನು ಬಡವ, ಅದಕ್ಕೋಸ್ಕರ"

ಎಂದು ನಾಣಿ ಹೇಳಿದ.

"ಹಾಗೇನೂ ಇಲ್ಲ"

ಎಂದು ಉಮಾಪತಿ ಮಾತು ಹಾರಿಸಲೆತ್ನಿಸಿದ. ನಾಣಿ ತಾನು ಹಿಡಿದ ಪಟ್ಟು ಬಿಡಲಿಲ್ಲ.

"ಹಿರಿಯರು ಕೇಳುತ್ತಿರುವಾಗ ಮನಸ್ಸಿನಲ್ಲಿ ಏನಿದೆ ಅದನ್ನು ಸ್ಪಷ್ಟವಾಗಿ ಹೇಳು. ಕ್ಲಾಸಿನಲ್ಲಿ ಕೂಡ ನೀನು ನನ್ನೊಂದಿಗೆ ಮಾತನಾಡಲು ಹಿಂಜರಿಯುತ್ತಿರಲಿಲ್ಲವೇ ? ನಿನ್ನ ಸರೀಕನೆಂದು ನೀನು ಮಹಾಬಲನ ಜತೆ ಸ್ನೇಹ ಬೆಳಸಲಿಲ್ಲವೇ ? ನಾನು ಬಡವ ನಿಜ—ಆದರೆ ಬಡತನವೊಂದು ಮಹಾಪರಾಧವೇ ?"

ಉಮಾಪತಿ ತುಟಿಪಿಟಕ್ಕೆನ್ನಲಿಲ್ಲ. ಚೌಡಪ್ಪನವರು ಮುಂದೆಸರಿದು

"ಉಮಾಪತಿ—ನಾನು ವಯಸ್ಸಿನಲ್ಲಾದರೂ ನಿನಗಿಂತಲೂ ದೊಡ್ಡವನು. ನಾನು ಹೇಳುವ ಮಾತನ್ನು ಸ್ವಲ್ಪ ಲಕ್ಷ್ಯವಿಟ್ಟು ಕೇಳು. ಮಹಾಬಲನಿಗೆ ನೀನೂ ನಾಣಿ ಇಬ್ಬರೂ ಸ್ನೇಹಿತರು. ನಿಮ್ಮಿಬ್ಬರ ಸ್ನೇಹವನ್ನೂ ಅವನು ಕಾಪಾಡಿಕೊಂಡೇ ಬರಬೇಕೆಂದೇ ನನ್ನ ಆಸೆ. ವರ್ಗರಾಕ್ಷಸ ಮಧ್ಯೆ ಬರುತ್ತಿರುವುದನ್ನು ನಾನು ನೋಡಿದೆ. ಒಂದು ದಿನ ನಿಮ್ಮೆಲ್ಲರನ್ನೂ ಕೂಡಿಸಿ ನಾಲ್ಕು ಮಾತು ಹೇಳಬೇಕೆಂದು ಯೋಚನೆ ಮಾಡಿಕೊಂಡೆ. ಬಾಲ್ಯ ಮನುಷ್ಯನ ಬಾಳುವೆಯ ವಸಂತಮಾಸ. ಈಗ ನೀವು ಯಾವ ಅಭಿರುಚಿ, ಚಿತ್ತವೃತ್ತಿ, ಯುಕ್ತಾಯುಕ್ತಜ್ಞಾನ ಬೆಳಸಿಕೊಳ್ಳುವಿರೋ ಅದೇ ಮುಂದೆ ನಿಮ್ಮ ಜೀವನದ ಮೈಲಿಗಲ್ಲುಗಳಾಗುತ್ತವೆ. ದೇವರ ಕೃಪೆಯಿಂದ ನೀನು ಆಗರ್ಭಶ್ರೀಮಂತರ ಮನೆಯಲ್ಲಿ ಹುಟ್ಟಿರುವೆ. ಸಂತೋಷ. ನಿನ್ನ ಸಂಪತ್ತು ನೂರ್ಮಡಿ ಬೆಳೆಯುಲಿ. ಆದರೆ ಈ ಸಂಪತ್ತನ್ನು ನೆಚ್ಚಿಕೊಂಡು ಮಾನವಸಂಬಂಧ, ಮಾನವಗುಣಗಳನ್ನು ಕಳೆದುಕೊಳ್ಳಬಾರದು. ಸಂಪತ್ತು ಎಂದಿದ್ದರೂ ಕಾಡಬೆಳದಿಂಗಳಂತೆ ಅಸ್ಥಿರ. ಮಾನವ್ಯ ಶಾಶ್ವತವಾದುದು. ಲೋಕ ಪೂಜಿಸಬೇಕಾದುದು ಮನುಷ್ಯನ ಹಣವನ್ನಲ್ಲ—ಗುಣವನ್ನು !

ನಿನಗೆ ದೇವರು ಕೊಟ್ಟಿರುವ ಸಂಪತ್ತು, ಸೌಲಭ್ಯ ನಾಲ್ಕು ಜನಕ್ಕೆ ನೆಮ್ಮದಿ ಕೊಡುವಂತೆ ವಿನಿಯೋಗವಾಗಬೇಕು. ಆಗಲೇ ಸಂಪತ್ತಿನ ಸಾರ್ಥಕ್ಯ. ಈ ವಯಸ್ಸಿನಲ್ಲಿ ನಿಮ್ಮ ಮಧ್ಯೆ ಬಡತನ—ಸಿರಿತನ ತಲೆಹಾಕಬಾರದು. ಮಧುರ ಮೈತ್ರಿ, ವಿದ್ಯಾಪ್ರಿಯತೆ, ಸರಳಜೀವನ ನಿಮ್ಮ ಬಾಳನ್ನು ತುಂಬ ಬೇಕು. ಇದು ಮನಸ್ಸು ಬೆಳೆಯುವ ಕಾಲ-ವಯಸ್ಸು. ಇದನ್ನು ನಿರರ್ಥಕ ಮಾಡಿಕೊಳ್ಳಬೇಡಿ. ಮಹಾಬಲನಿಗೆ ಇದೇ ಮಾತನ್ನು ನಾನು ಪದೇಪದೇ ಹೇಳುತ್ತಿರುತ್ತೇನೆ. ನೀವೂ ನನ್ನವರು ಎಂದು ಭಾವಿಸಿಕೊಂಡು ನಿಮಗೂ ಹೇಳಿದ್ದೇನೆ."

ಎಂದರು. ಚೌಡಪ್ಪನವರ ಉಪದೇಶ ಉಮಾಪತಿಯ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿತ್ತು.

"ನಾಳೆಯಿಂದ ನಾನೂ ಇಲ್ಲಿಗೇ ಓದಿಕೊಳ್ಳುವುದಕ್ಕೆ ಬರುತ್ತೇನೆ ಸಾರ್. ನೀವು ಹೇಳಿದಂತೆ ಮೂವ್ವರೂ ಕೂಡಿ ಓದಿಕೊಳ್ಳುತ್ತೇವೆ."

"ಬಹಳ ಸಂತೋಷ. ನಾಣಿ-ನಿನಗೇನೂ ಅಭ್ಯಂತರವಿಲ್ಲವಷ್ಟೇ ?"

"ನನಗೇನು ಅಭ್ಯಂತರ ಸಾರ್."

ಎಂದು ಹೇಳಿದ.

ಉಮಾಪತಿ ಹೊರಡಲೆದ್ದು ನಿಂತ. ಮಹಾಬಲನ ಕಡೆ ಅವನು ನೋಡಿ.

"ಬರುವುದಿಲ್ಲವೇ" ಎಂದ.

ಮಹಾಬಲ ಹೊರಡಲನುಮಾನಿಸಿದುದನ್ನು ಕಂಡು ಉಮಾಪತಿ

"ನಾನೂ, ಮಹಾಬಲ, ನಾಣಿ ಸರ್ಕಸ್ಸಿಗೆ ಹೋಗಬೇಕೆಂದು ನಿಶ್ಚಯಿ ಸಿದ್ದೇವೆ. ಹೋಗಿಬರಬಹುದೇ ?"

"ಅವಶ್ಯಕವಾಗಿ ಹೋಗಿ ಬನ್ನಿ"

ಎಂದು ಚೌಡಪ್ಪನವರು ಹೇಳಿದರು.

ನಾಣಿ ಒಲ್ಲೆನೆಂದರೂ ಕೇಳದೆ ಮಹಾಬಲ ಅವನನ್ನೂ ಎಳೆದು ಕೊಂಡು ಕಾರಲ್ಲಿ ಕರೆದುಕೊಂಡು ಹೋದ.

ಚೌಡಪ್ಪನವರು ತಾವು ಅಂದು ಮಾಡಿದ ಕಾರ್ಯಕ್ಕೆ ತಾವೇ ಸಂತೋಷಪಟ್ಟುಕೊಂಡು ಗುಂಡಪ್ಪನವರನ್ನು ಹುಡುಕಿಕೊಂಡು ಹೊರಟರು.

೮

ಚೌಡಪ್ಪನ ವರಸಂಧಾನದ ಫಲವಾಗಿ ತಾತ್ಕಾಲಿಕ ಶಾಂತಿ, ಸೌಹಾರ್ದ ಗೆಳೆಯರಲ್ಲಿ ಮೂಡಿತು. ಆದರೆ ಒಂದೇ ದಿನದಲ್ಲಿ ತನ್ನ ಸ್ವಭಾವಗುಣವನ್ನು ನೀಗಿಕೊಳ್ಳುವುದು ಉಮಾಪತಿಗೆ ಸಾಧ್ಯವಾಗಲಿಲ್ಲ. ನಾಣಿಯನ್ನವನು ಸರೀಕನೆಂದು ಭಾವಿಸುವುದು ದೂರ ಉಳಿಯಿತು. ಆದರೆ ಮಹಾಬಲನ ಮೇಲಣ ವಿಶ್ವಾಸಕ್ಕೆ ನಾಣಿಯ ಸಂಗವನ್ನು ಅವನು ಸಹಿಸಿಕೊಳ್ಳುತ್ತಿದ್ದ.

ಉಮಾಪತಿಯಲ್ಲಿ ವಿಶೇಷ ಬದಲಾವಣೆಯಾಗದಿದ್ದುದನ್ನು ನಾಣಿ ಅರಿತುಕೊಂಡ. ಜತೆಯಲ್ಲಿ ಕುಳಿತು ಓದುವ ವೇಳೆಯಲ್ಲಿ ಮಾತ್ರ ಅವನು ಮಹಾಬಲನ ಮನೆಗೆ ಬರುತ್ತಿದ್ದ. ಉಳಿದ ವೇಳೆಗಳಲ್ಲಿ ಆದಷ್ಟು ಮಹಾಬಲ, ಉಮಾಪತಿಯರಿಂದ ದೂರವಿರಲು ಪ್ರಯತ್ನಿಸುತ್ತಿದ್ದ.

ಪರೀಕ್ಷೆಯೂ ಮುಗಿಯಿತು. ಬೇಸಿಗೆಯ ರಜಾ ಕಳೆದು ಸ್ಕೂಲ್ ಬಾಗಿಲು ಮತ್ತೆ ತೆಗೆಯಿತು. ಮಹಾಬಲ, ಉಮಾಪತಿ, ನಾಣಿ ಮೂವರಿಗೂ ಮುಂದಿನ ತರಗತಿಗಳಿಗೆ ಪ್ರವೇಶ ಸಿಕ್ಕಿತು.

ಉಮಾಪತಿ ಪುನಃ ಸ್ಕೂಲಿಗೆ ಬರಲಿಲ್ಲ. ಒಂದೆರಡು ದಿನ ಅವನಿಗಾಗಿ ಕಾದು ಮಹಾಬಲ ಅವನನ್ನು ಕಾಣಲು ಹೋದ.

"ಏಕೆ ಉಮಾಪತಿ, ಸ್ಕೂಲಿಗೆ ಬರಲಿಲ್ಲ" ಎಂದು ಕೇಳಿದ.

"ಸ್ಕೂಲು ಸಾಕು ಎಂದು ನನ್ನ ತಂದೆಯವರು ಹೇಳಿದರು."

"ಏಕಯ್ಯ ?"

"ಹೆಚ್ಚು ಓದಿದರೆ ನಮಗೆ ಆಗಿ ಬರುವುದಿಲ್ಲವೆಂದು ಅವರ ನಂಬಿಕೆ."

"ನೀನು ಅವರನ್ನು ಒಪ್ಪಿಸಲಿಲ್ಲವೇ ?"

"ನನ್ನ ಮಾತು ಕೇಳುತ್ತಾರೆಯೇ ?"

"ಹಾಗಾದರೆ ಮುಂದೆ.— "

"ನಮ್ಮ ಬೆಳ್ಳಿಅಂಗಡಿ ವ್ಯವಹಾರ ಕೆಟ್ಟುಹೋಗಿದೆ. ತಂದೆಯವರು ಸದಾ ಅಂಗಡಿಯ ಮೇಲೆ ಕೂಡುವುದಕ್ಕಾಗುವುದಿಲ್ಲ, ಆದ್ದರಿಂದ ನಾನು ಆ ವ್ಯಾಪಾರ ನೋಡಿಕೊಳ್ಳಬೇಕೆಂದು ಅವರ ಇಚ್ಛೆ."

"ಇನ್ನು ನಾಲ್ಕು ವರ್ಷ ಓದಿದ್ದರೆ ವ್ಯಾಪಾರಕ್ಕೆ ಹೆಚ್ಚು ಅನುಕೂಲವಾಗುತ್ತಿರಲಿಲ್ಲವೇ ?"

"ನಾನೂ ಅದನ್ನೇ ತಂದೆಯವರಿಗೆ ಹೇಳಿದೆ."

"ಅದಕ್ಕೆ ಅವರೇನಂದರು ?"

"ನಾನು ಓದಲಿಲ್ಲ—ನಮ್ಮಪ್ಪ ಓದಲಿಲ್ಲ—ಅವರಪ್ಪ ಓದಲಿಲ್ಲ. ನಮ ಗೇನು ಕಡಿಮೆಯಾಗಿರುವುದು? ನಿನಗೆ ಬರುವಷ್ಟು ವಿದ್ಯೆ ನಮ್ಮ ವ್ಯಾಪಾರಕ್ಕೆ ಸಾಕು ಎಂದು ಹೇಳಿದರು."

"ನೀನು ಸ್ಕೂಲ್ ಬಿಡುವುದು ನನಗೆ ಬಹಳ ದುಃಖವನ್ನುಂಟುಮಾಡು ತ್ತದೆ. ನಾವಿಬ್ಬರೂ ಕಾಲೇಜಿನಲ್ಲಿ ಜತೆಯಲ್ಲಿರಬಹುದೆಂದು ಬಹಳ ಆಸೆ ಪಟ್ಟುಕೊಂಡಿದ್ದೆ."

"ನನಗೂ ಆಸೆಯಿತ್ತು. ಏನು ಮಾಡುವುದು ಹೇಳು. ಹಿರಿಯರ ಮಾತು ಮೀರುವುದು ಸಾಧ್ಯವೇ ?"

"ಇನ್ನು ನಿನ್ನ ದರ್ಶನ ದುರ್ಲಭ ?"

"ಏಕೆ ಹಾಗೆ ಹೇಳುವೆ. ನಾನು ಅಂಗಡಿಯಲ್ಲೇ ಇರುತ್ತೇನೆ. ಅಲ್ಲಿಗೇ ಬಂದು ಬಿಡು"

ಮಹಾಬಲ ತುಂಬ ಖಿನ್ನನಾದ. ಉಮಾಪತಿ ಸ್ಕೂಲಿಗೆ ಶರಣು ಹೊಡೆದ ಸುದ್ದಿ ಕೇಳಿ ನಾಣಿ ಮನಃಪೂರ್ವಕವಾಗಿ ಸಂತೋಷಪಟ್ಟು

"ಸದ್ಯ—ಮಹಾಬಲನ ಗ್ರಹಚಾರ ಬಿಡುಗಡೆಯಾಯಿತು"

ಎಂದುಕೊಂಡ.

ಉಮಾಪತಿ ಸೂಚಿಸಿದಷ್ಟು ಸುಲಭವಾಗಿ ಮಹಾಬಲ ಅವನನ್ನು ಸಂಧಿಸಲಾಗುತ್ತಿರಲಿಲ್ಲ. ಕ್ಲಾಸು, ಆಟಪಾಟಗಳಲ್ಲಿ ಮಹಾಬಲನ ಹೊತ್ತು ಹೋಗುತ್ತಿತ್ತು, ಭಾನುವಾರ ಅಂಗಡಿ ಮುಚ್ಚಿ ಉಮಾಪತಿಯೇ ಮಹಾಬಲನ ಮನೆಗೆ ಬಂದು ಅವನನ್ನು ಕಾರಲ್ಲಿ ಕರೆದುಕೊಂಡು ಹೋಗುತ್ತಿದ್ದ.

ಒಂದು ದಿನ ಸಂಜೆ ಇಬ್ಬರೂ ಕಬ್ಬನ್ ಪಾರ್ಕ್ ಬಳಿ ಹೋದರು. ಕಬ್ಬನ್ ಪಾರ್ಕ್ ರೆಸ್ಟುರಾ ಮುಂದಿದ್ದ ಸಾಲುಮರದ ಕೆಳಗೆ ಕಾರು ನಿಲ್ಲಿಸಿ ಇಬ್ಬರೂ ರೆಸ್ಟುರಾಗೆ ಹೋಗಿ ಮಸಾಲುದೋಸೆ ಹೊಡೆದು ತಿರು ಗಾಡಿಕೊಂಡು ಹೊರಟರು.

ಉಮಾಪತಿ ಲೋಕಾಭಿರಾಮವಾಗಿ ಕೇಳಿದ

"ಮುಂದೇನು ಮಾಡಬೇಕೆಂದಿರುವೆ ಮಹಾಬಲ ?"

"ಓದಬೇಕೆಂದಿದ್ದೇನೆ. ಸದ್ಯಕ್ಕೆ ಬಿ. ಎ. ಮುಗಿಸುವ ಯೋಚನೆ ಇದೆ. ಮುಂದೆ ಏನಾಗುತ್ತದೋ ನೋಡಬೇಕು ?"

"ಬಿ. ಎ. ಮುಗಿಸಿ ಏನುಮಾಡುತ್ತೀಯೆ ? ಕೆಲಸಕ್ಕೆ ಸೇರುವೆಯಾ ?"

"ಭಿಕ್ಷೆಬೇಡಿ ಜೀವನಮಾಡಿದರೂ ಚಿಂತೆಯಿಲ್ಲ. ಸರ್ಕಾರಿ ಕೆಲಸಕ್ಕೆ ಮಾತ್ರ ಸೇರಬೇಡ ಎಂದು ತಂದೆಯವರು ಹೇಳುತ್ತಿದ್ದಾರೆ."

"ಅವರು ಹೇಳುವುದು ನ್ಯಾಯವಾಗಿದೆ."

"ಏಕೆ ಕೇಳಿದೆ ಉಮಾಪತಿ ?"

"ನನ್ನ ಸ್ನೇಹಿತನ ಭವಿಷ್ಯ ನಾನು ತಿಳಿದುಕೊಳ್ಳಬೇಡವೇ ?"

"ಬೇಡವೆಂದವರು ಯಾರು ? ಆದರೆ ನೀನು ಕೇಳುವುದರಲ್ಲಿ ಏನೋ ಉದ್ದೇಶವಿದೆ."

"ಉದ್ದೇಶವಿಷ್ಟೇ—ನೀನೂ ಏಕೆ ವ್ಯಾಪಾರಮಾಡಬಾರದೆಂದು ಯೋಚಿಸುತ್ತಿದ್ದೆ."

"ನಾನೇ ! ಎಲ್ಲಿಯಾದರೂ ಉಂಟೇ ?"

"ಅದರಲ್ಲಿ ಆಶ್ಚರ್ಯವೇನು ?"

"ಅಯ್ಯಾ, ನಿನ್ನ ಮನೆಯವರು ತಲೆತಲಾಂತರಗಳಿಂದ ವ್ಯಾಪಾರಿಗಳು. ವ್ಯಾಪಾರದ ರೀತಿ ನೀತಿ ನಿನಗೆ ರಕ್ತಗತವಾಗಿ ಬಂದಿದೆ. ಅದು ನನಗೆ ಸಾಧ್ಯವೇ ?"

"ನೋಡು ಮಹಾಬಲ, ವ್ಯಾಪಾರಕ್ಕೆ ಬೇಕಾದುದು ರಕ್ತಗುಣವಲ್ಲ—ಬುದ್ಧಿ. ನೀನು ವ್ಯಾಪಾರಕ್ಕೆ ಕೈಹಾಕಿದರೆ ಜಯಶಾಲಿಯಾಗುವೆ. ಈ ವಿದ್ಯೆ, ನೌಕರಿಗಳಿಂದ ಏನೂ ಪ್ರಯೋಜನವಿಲ್ಲ. ಕೈತುಂಬ ಹಣ ಸಂಪಾದಿಸಬೇಕಯ್ಯ. ದುಡ್ಡಿದ್ದರೇ ದೊಡ್ಡಪ್ಪ. ದುಡ್ಡಿಲ್ಲದಿದ್ದರೆ ಯಾವದಕ್ಕೂ ಶೋಭೆಯಿಲ್ಲ ನೋಡು."

"ನಿಜ. ಆದರೆ ತಂದೆ ಏನು ಹೇಳುವರೋ ? ವ್ಯಾಪಾರವೆಂದರೆ ಬಂಡವಾಳಬೇಕು. ನೀನು ತಿಳಿದುಕೊಂಡಿರುವಷ್ಟು ನಾನು ಶ್ರೀಮಂತನಲ್ಲ ಉಮಾಪತಿ."

"ಬಂಡವಾಳ ಇಟ್ಟುಕೊಂಡು ವ್ಯಾಪಾರಮಾಡುವುದು ಬುದ್ಧಿವಂತಿಕೆಯಲ್ಲ ಮಹಾಬಲ. ಚಾಟಿಯಿಲ್ಲದೆ ಬಂಗರ ಆಡಿಸಬೇಕು. ಬಂಡವಾಳ

ಬೇಕಾಗುವ ಕಾಲಕ್ಕೆ ನಾನಿಲ್ಲವೇ ? ನಿನಗೆಷ್ಟು ಬೇಕು ಅಷ್ಟು ಬಂಡವಾಳ ನಾನು ಒದಗಿಸುತ್ತೇನೆ."

"ಯೋಚನೆಮಾಡುತ್ತೇನಪ್ಪಾ. ನೀನು ಹೇಳುವಷ್ಟು ಸುಲಭವಾಗಿ ನಿರ್ಧರಿಸುವುದು ನನಗೆ ಸಾಧ್ಯವಿಲ್ಲ. ತಂದೆಯುವರು ಏನು ಹೇಳುವರೋ ಕೇಳಬೇಕು."

"ಹಾಗೇ ಮಾಡು ಅವಸರವಿಲ್ಲ. ವಿಷಯ ನಿನ್ನ ತಲೆಯಲ್ಲಿರಲಿ"

ಎಂದು ಹೇಳಿದ.

ಉಮಾಪತಿ ಹೇಳಿದ ವಿಷಯ ಮಹಾಬಲನ ತಲೆಯನ್ನು ಒಂದೇ ಸಮನೆ ಕೊರೆಯುವುದಕ್ಕಾರಂಭಿಸಿತು. 'ದುಡ್ಡಿದ್ದರೆ ದೊಡ್ಡಪ್ಪ' ಎನ್ನುವ ಮಾತು ಪದೇ ಪದೇ ಅವನ ಕಿವಿಯನ್ನಪ್ಪಳಿಸುತ್ತಿತ್ತು. ತಂದೆಯುವರಲ್ಲಿ ಈ ವಿಷಯ ಪ್ರಸ್ತಾಪಿಸಬೇಕೆಂದು ಒಂದೆರಡು ಬಾರಿ ಪ್ರಯತ್ನಿಸಿ ನಿಷ್ಫಲನಾದ.

ಉಮಾಪತಿ ಇಟ್ಟಕಿಡಿ ಕ್ರಮಕ್ರಮೇಣ ಮಹಾಬಲನ ಮನಸ್ಸಿನಲ್ಲಿ ಕವರಲಾರಂಭಿಸಿತು.

೬

ಮಹಾಬಲನ ಓದುಗಾರಿಕೆ 'ಬೇಕಾಬಿಟ್ಟಿ' ಯಾಗಿ ಸಾಗಿತು. ನಾಣಿ ಹತ್ತೆಂಟು ಸಾರಿ ಸೂಕ್ಷ್ಮವಾಗಿ ಎಚ್ಚರಿಸಿದ. ಮಹಾಬಲನಿಗೆ ಅವನ ಎಚ್ಚರದ ಮಾತು ಸ್ವಲ್ಪ ಅಸಮಾಧಾನವನ್ನುಂಟುಮಾಡಿತು.

ಮಗನ ಆಲಸ್ಯ ಕಂಡು ಚೌಡಪ್ಪನವರೂ ಚಿಂತಾಕ್ರಾಂತರಾದರು.

"ಈ ಮನೆಗೂ ವಿದ್ಯೆಗೂ ಋಣಾನುಬಂಧವಿಲ್ಲವೆಂದು ಕಾಣುತ್ತದೆ. ನಮ್ಮ ವಂಶದಲ್ಲಿ ಒಬ್ಬನಾದರೂ ಬಿ. ಎ. ಮಾಡಲಿ ಎಂದರೂ ಸಾಧ್ಯವಾಗುವ ಹಾಗೆ ಕಾಣುವುದಿಲ್ಲ. ಅವರವರ ಕರ್ಮ ನಾವೇನು ಮಾಡುವುದಕ್ಕಾಗುತ್ತದೆ."

ಎಂದುಕೊಂಡರು.

ಚೌಡಪ್ಪನವರು ಟರ್ಮಿನ ಕೊನೆಗೆ ಕೈಸೇರಿದ 'ಪ್ರಾಗ್ರೆಸ್ ರಿಪೋರ್ಟ್' ಹಿಡಿದು ಮಗನನ್ನು ಕರೆದು

"ಇದೇನು ಮಹಾಬಲ,-ರಿಪೋರ್ಟ್ ಹೀಗಿದೆ?" ಎಂದು ಕೇಳಿದರು.

"ನನಗೆ ಫಿಸಿಕ್ಸ್, ಕೆಮಿಸ್ಟ್ರಿ ಎಂದರೆ ತಲೆನೋವು ಬರುತ್ತದೆ."

"ಕಷ್ಟವಾದುದನ್ನು ಸ್ವಲ್ಪ ರೂಢಿಸಿಕೊಳ್ಳಬೇಕು. ಬೇಕಾದರೆ ಅವುಗಳಿಗೆ ಒಬ್ಬ ಮೇಷ್ಟ್ರು ಗೊತ್ತುಮಾಡಿಕೋ."

"ಏನೂ ಬೇಡಪ್ಪಾ."

"ಬೇಡವೆಂದರೆ ಪರೀಕ್ಷೆಯಲ್ಲಿ ಪಾಸಾಗುವ ಬಗೆ ?"

"ನನಗದು ಬೇಡವಾಗಿದೆ."

"ನಿನ್ನ ಮಾತು ನನಗೆ ಅರ್ಥವೇ ಆಗುವುದಿಲ್ಲ ಮಹಾಬಲ. ಸ್ಕೂಲು ಬಿಡಲು ಯೋಚಿಸುತ್ತಿರುವೆಯೇನು ?"

"ಆಸಕ್ತಿಯಿಲ್ಲದ ಮೇಲೆ ಸ್ಕೂಲಿಗೆ ಹೋಗಿ ಏನು ಪ್ರಯೋಜನ."

"ಮುಂದೆ....?"

"ವ್ಯಾಪಾರ ಮಾಡುವುದು"

"ಈ ಅಭಿಪ್ರಾಯ ನಿನ್ನ ತಲೆಯಲ್ಲಿ ಹಾಕಿದವರು ಯಾರು ? ಉಮಾಪತಿಯೋ ?"

"ಅವನದೂ ಅದೇ ಅಭಿಪ್ರಾಯ."

"ತಾನು ಕೆಡೋ ಕೋತಿ ವನವೆಲ್ಲಾ ಕೆಡಸಿತು ಎಂದ ಹಾಗಾಯಿತು."

"ಇದರಲ್ಲಿ ಉಮಾಪತಿಯದೇನೂ ತಪ್ಪಿಲ್ಲಪ್ಪಾ."

"ಸರಿ. ನಿನಗೆ ಅವನ ಮಾತಿನಲ್ಲಿ ಇಷ್ಟು ಬೆಲೆಯಿದೆಯೆಂದು ನನಗೆ ಗೊತ್ತಿರಲಿಲ್ಲ."

"ನನ್ನ ಹಿತಕ್ಕಾಗಿ ಅವನು ಸೂಚನೆಯಿತ್ತುದು."

"ಅವನೊಬ್ಬನೇ ನಿನ್ನ ಹಿತೈಷಿಯಲ್ಲವೇ ?"

"ನಾನು ಎಂದಾದರೂ ಹಾಗೆ ಹೇಳಿದೆನೇ ?"

"ಈ ವರ್ಷ ಪಬ್ಲಿಕ್ ಎಕ್ಸಾಮಿನೇಷನ್. ಅದನ್ನು ಮುಗಿಸಿ, ಅದರ ಹಣೆಯಬರಹ ನೋಡಿಕೊಂಡು ಮುಂದಿನದನ್ನು ಆಲೋಚಿಸೋಣ."

ಎಂದು ಹೇಳಿದರು.

ಮಗನ ಮನಃಪ್ರವೃತ್ತಿ ನೋಡಿ ಚೌಡಪ್ಪನವರಿಗೆ ತುಂಬ ಅಸಮಾಧಾನವಾಯಿತು. ಉಮಾಪತಿ ವಿಶ್ವಾಸದ್ರೋಹಮಾಡಿದ ಎಂದವರು ಭಾವಿಸಿದರು.

ಚೌಡಪ್ಪನವರು ಹೇಳಿದುದೆಲ್ಲವನ್ನೂ ಕೇಳಿಕೊಂಡು ಗುಂಡಪ್ಪನವರು ಸಾವಕಾಶವಾಗಿ

"ಇದಕ್ಕೇನು ಪರಿಹಾರ ಹುಡುಕಿದೆ ಚೌಡಪ್ಪ" ಎಂದು ಕೇಳಿದರು.

"ನಾನು ಪರಿಹಾರ ಹುಡುಕಿದ್ದರೆ ಅವನನ್ನೂ ವರದಿಮಾಡುತ್ತಿದ್ದೆ, ನಿನ್ನ ಹತ್ತಿರ ನಾನು ಬಂದುದೇಕೆ ?"

"ಹುಡುಗರ ವಿಷಯವಪ್ಪ. ದುಡುಕಬಾರದು. ಅವರು ಹೋದ ದಾರಿಗೇ ಅವರನ್ನು ಬಿಡುವುದೊಳ್ಳೆಯದು."

"ಇರುಳು ಕಂಡ ಭಾವಿಯಲ್ಲಿ ಅವನು ಹಗಲು ಬೀಳಲು ಹೋದರೆ!"

"ಇರುಳುಕಂಡ ಭಾವಿಯಲ್ಲಿ ಬಿದ್ದರೆ ಮೊಣಕಾಲು ಮುರಿಯುತ್ತೆ. ಪ್ರಾಣ ಅಲ್ಲಿ ಹೋಗುವ ಸಂಭವವೂ ಇದೆ ಎಂದು ಎಚ್ಚರಿಸುವುದು. ಅದನ್ನು ಕೇಳದಿದ್ದರೆ ಬಿದ್ದುನೋಡು ಎಂದು ಹೇಳುವುದು. ಅವನು ಬಿದ್ದರೆ ಮೇಲಕ್ಕೆತ್ತಲು ಹಗ್ಗ, ಆಳು ಸಿದ್ಧಮಾಡಿಕೊಂಡಿರುವುದು."

"ನಿನ್ನ ಮಾತಿಗೆ ನಗಬೇಕೋ ಅಳಬೇಕೋ ನಾನು ಕಾಣೆ ಗುಂಡೂ. ಏನುಮಾಡಲಿ ಹೇಳಯ್ಯಾ."

"ಪರೀಕ್ಷೆಯಾಗುವ ತನಕ ಟೈಮಿದೆಯಲ್ಲಾ. ಈ ಸಲದ ಪರೀಕ್ಷೆಗೆ ಮಹಾಬಲ ಕೂಡುತ್ತಾನಂತೋ ಇಲ್ಲವಂತೋ ?"

"ಕೂಡುತ್ತಾನಂತೆ."

"ಸರಿ. ನಿಧಾನವಾಗಿ ಯೋಚಿಸಿದರೆ ಆಯಿತು. ಸದ್ಯಕ್ಕೆ ನೀನು ಧಾವಂತ ಪಟ್ಟುಕೊಂಡು ಮನಸ್ಸು ಹುಳಿಮಾಡಿಕೊಳ್ಳಬೇಡ."

ಗುಂಡಪ್ಪನವರ ಸಲಹೆಯಿಂದ ಚೌಡಪ್ಪನವರಿಗೆ ಹೆಚ್ಚು ಪ್ರಯೋಜನವಾಗಲಿಲ್ಲ. ಆದರೆ ಅವರ ಸಲಹೆಯನ್ನು ಅಂಗೀಕರಿಸಿ ಅದರಂತೆ ವರ್ತಿಸದೆ ವಿಧಿಯಿರಲಿಲ್ಲ. ಗೊಣಗಿಕೊಂಡೇ

"ಆಗಲಯ್ಯ—ನಿನ್ನ ಇಷ್ಟ"

ಎಂದರು.

ಮಹಾಬಲನ ಆಲಸ್ಯ ನೋಡಿ ನಾಣಿಗೂ ಬೇಸರವಾಯಿತು.

"ಹೀಗೆ ನೀನು ಓದಿದರೆ ಎಕ್ಸಾಮಿನೇಷನ್ನಿನಲ್ಲಿ ಪಾಸಾಗುವುದು ಕಷ್ಟ ಮಹಾಬಲ" ಎಂದ.

"ಪಾಸಾಗದಿದ್ದರೆ ಫೇಲಾಗುತ್ತದೆ ತಾನೇ."

"ಫೇಲಾಗುವುದು ಖಂಡಿತವೆನ್ನುವ ಹಾಗಿದ್ದರೆ ಓದುವ ಕಷ್ಟವೇಕೆ ?"

"ಆ ಕಷ್ಟ ಯಾರಿಗೆ ಬೇಕಾಗಿದೆ. ತಂದೆಯವರ ಬಲವಂತಕ್ಕೆ ಇನ್ನೂ ಸ್ಕೂಲಿಗೆ ಮಣ್ಣು ಹೊರುತ್ತಿದ್ದೇನೆ."

"ಸ್ಕೂಲು ಬಿಡುವ ಯೋಚನೆಮಾಡುತ್ತಿರುವೆಯೇನು ?"

"ನಿರ್ಧಾರಮಾಡಿದ್ದೇನೆ."

"ಮುಂದೆ....?"

"ಆಲೋಚಿಸಬೇಕು. ತಂದೆ ಒಪ್ಪುವಹಾಗಿದ್ದರೆ ಯಾವದಾದರೂ ವ್ಯಾಪಾರಮಾಡಬೇಕೆಂದಿದ್ದೇನೆ. ಉಮಾಪತಿ ಸಹಾಯಮಾಡುವುದಾಗಿ ಹೇಳಿದ್ದಾನೆ."

"ವ್ಯಾಪಾರ ನಿನಗೆ ಸಲ್ಲುತ್ತದೆಯೋ ?"

"ಏತಕ್ಕೆ ಸಲ್ಲಬಾರದು. ಉಮಾಪತಿಗೇನು ಕೋಡಿದೆಯೇ ?"

"ಡಿಗ್ರಿ ಮಾಡಿಕೊಂಡರೆ ವ್ಯಾಪಾರಕ್ಕೂ ಪ್ರಯೋಜನವಾಗುವುದಿಲ್ಲವೇ ?"

"ಮನಸ್ಸಿಲ್ಲದೆ ಓದುವುದರಲ್ಲಿ ಡಿಗ್ರಿ ದೊರೆಯುವ ಸಂಭವವುಂಟೆ?"

"ಓದು ಸಾಗದೆ ಇವನು ವ್ಯಾಪಾರ ಹಿಡಿದ ಎಂದು ಜನ ಆಡಿಕೊಳ್ಳುವುದಿಲ್ಲವೇ ?"

"ಆಡಿಕೊಳ್ಳಲಿ. ನನ್ನ ಕಷ್ಟಸುಖ ಅವರಿಗೇನು ಅರ್ಥವಾಗುತ್ತದೆ. ನಾಳೆ ನನ್ನ ಕೈತುಂಬ ಹಣವಿದ್ದರೆ ಇದೇ ಜನ ನನ್ನ ಹಿಂಬಾಲಿಸುತ್ತಾರೆ."

ಎಂದ. ಹಣದ ಪೈತ್ಯ ಮಹಾಬಲನಿಗೆ ಚೆನ್ನಾಗಿ ಹಿಡಿದಿದೆಯೆಂದು ನಾಣಿ ತಿಳಿಯಲು ಹೆಚ್ಚು ಕಾಲಬೇಕಾಗಲಿಲ್ಲ. ಇನ್ನು ಈ ವಿಷಯದಲ್ಲಿ ಮಹಾಬಲನಿಗೆ ವಿವೇಕ ಹೇಳುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದರಿತು ಸುಮ್ಮನಾದ.

## ೧೦

ಒಂದು ದಿನ ಗುಂಡಪ್ಪನವರು ತುರತಾಗಿ ಚೌಡಪ್ಪನವರಿಗೆ ಹೇಳಿ ಕಳಿಸಿದರು. ಕಾರಣ ತಿಳಿಯದೆ ಚೌಡಪ್ಪನವರು ಸ್ವಲ್ಪ ಗಾಬರಿಯಾಗಿ ಕೂಡಲೆ ಹೊರಟರು.

ಚೌಡಪ್ಪನವರ ಆತಂಕ ಕಂಡು ಗುಂಡಪ್ಪನವರು ನಕ್ಕು,

"ಎಷ್ಟು ಗಾಬರಿಯಾಗಿಬಿಟ್ಟೆಯಪ್ಪಾ" ಎಂದರು.

"ಕೂಡಲೆ ಬರಬೇಕೆಂದು ನೀನು ಹೇಳಿಕಳಿಸಿದೆ. ಗಾಬರಿಯಾಗದಿರುತ್ತದೆಯೇ ? ಏನು ಸಮಾಚಾರ ?"

"ಒಂದು ಸಂತೋಷದ ಸಮಾಚಾರ ಇದೆ. ಲಕ್ಷ್ಮೀ ನಿನ್ನ ಮನೆಗೆ ಬರುವುದಕ್ಕೆ ಆತುರಳಾಗಿದ್ದಾಳೆ."

"ಅಂಥ ದೆಸೆ ಯಾವದಪ್ಪಾ ನನಗೆ."

"ಇದೆಯಯ್ಯಾ—ಶುಕ್ರ ಮಹಾದೆಸೆ. ನೀನು ವಾಸವಾಗಿರುವ ಮನೆ ಖರೀದಿಗೆ ಬಂದಿದೆ."

"ಏಕೆ ಕೊಟ್ಟುಬಿಡುತ್ತಾನೆ."

"ಅವನದೇನೋ ತಾಪತ್ರಯ. ಈ ಮನೆಮಾರಿ ಇರುವ ಸಾಲ ತೀರಿಸಿ ಉಳಿದ ಆಸ್ತಿಯನ್ನು ಮಕ್ಕಳಿಬ್ಬರಿಗೂ ಹಂಚಿಕೊಟ್ಟು ಸುಖವಾಗಿರಬೇಕೆಂದಿದ್ದಾನೆ."

"ಎಷ್ಟಂತೆ !"

"ಇಪ್ಪತ್ತು ಸಾವಿರಕ್ಕೆ ಚಿಕ್ಕಾಸು ಕಡಿಮೆಯಾದರೂ ಆಗುವುದಿಲ್ಲವೆಂದು ಹೇಳುತ್ತಿದ್ದ. ನಾನು ಹದಿನೆಂಟಕ್ಕೆ ಕುದುರಿಸಿದ್ದೇನೆ."

"ನಾನು ಬೇರೆ ಮನೆ ನೋಡಿಕೊಳ್ಳಬೇಕಾಯಿತು."

"ಏಕೆ ?"

"ಮಾಲಿಕ ಮನೆಮಾರಿದರೆ, ಮುಂದೆ ಬರುವವನು ನನಗೆ ಬಾಡಿಗೆ ಕೊಡುತ್ತಾನೆಂದು ಹೇಗೆ ಹೇಳುವುದು ?"

"ಮುಂದಿನ ಮಾಲಿಕ ನೀನೇ ಆದರೆ !"

"ಮನೆ ನನಗೇ ಗಂಟು ಹಾಕಬೇಕೆಂದೋ ನಿನ್ನ ಸಂಚು."

"ನಿಸ್ಸಂದೇಹವಾಗಿ !"

"ಲಕ್ಷ್ಮೀ ಬರುತ್ತಾಳೆಂದೆ—ಲಕ್ಷ್ಮೀ ಹೋಗುವ ಹಾಗೆ ಕಾಣುತ್ತಿದೆಯಲ್ಲಾ."

"ಹುಚ್ಚಪ್ಪಾ—ಬೆಂಗಳೂರಿನಲ್ಲಿ ಈಗ ಒಂದು ಮನೆಕೊಂಡರೆ ಮುಂದೆ ಅದಕ್ಕೇನು ಬೆಲೆ ಬರುವುದೆಂದು ನೀನು ಕಾಣೆ. ಅಲ್ಲಿನೋಡು ಎದುರಿನ ತೋಟವೆಲ್ಲಾ ಸೈಟುಗಳಾಗುತ್ತಿವೆ. ಊರು ಯದ್ವಾತದ್ವಾ ಬೆಳೆಯುತ್ತಿದೆ. ಸಿಕ್ಕಿರುವ ಒಳ್ಳೆಯ ಅವಕಾಶ ಕಳೆದುಕೊಳ್ಳಬೇಡ. ಹೇಗೂ ನಿನ್ನ ಮಗ

ತಿರುಗಿ ಹಳ್ಳಿ ಸೇರುವ ಹಾಗಿಲ್ಲ. ಕೈನಡೆಯುವಾಗಲೇ ಒಂದು ಮನೆ ತೆಗೆದು ಕೊಂಡು ಬಿಡು."

"ಹದಿನೆಂಟು ಸಾವಿರ ಎಲ್ಲಿಂದ ತರಲಿ ಗುಂಡೂ."

"ಎಷ್ಟು ಸಾಲದು ಹೇಳು—ನಾನು ಕೊಡಿಸಿರುತ್ತೇನೆ."

"ಸಾಲಮಾಡಿ, ಅದಕ್ಕೆ ಬಡ್ಡೀತೆತ್ತು ಮನೆಕೊಳ್ಳುವುದೇ ?"

"ಬೇಡ ಒಳಗಿರುವ ಪುಟ್ಟಗಂಟು ತೆಗಿ."

ಗುಂಡಪ್ಪನವರ ಮಾತಿಗೆ ಚೌಡಪ್ಪನವರಿಗೆ ಹಿಡಿಸಲಾರದಷ್ಟು ನಗೆ ಬಂತು.

"ಒಳ್ಳೆಯ ಲಾಯರ್ ಗಂಟು ಬಿದ್ದೆಯಪ್ಪಾ"

ಎಂದರು.

"ಮನೆ ವಿಷಯ ನಿರ್ಧರಿಸಿ ಬಿಡು."

"ನಾನು ನಿರ್ಧರಿಸುವುದೇನು? ನೀನು ನಿರ್ಧಾರ ಮಾಡಿಯೇ ಇದ್ದೀಯಲ್ಲಾ."

"ನಾಳೆ ಪಾರ್ಟಿ ಬರಹೇಳುತ್ತೇನೆ. ಕೈಯಲ್ಲಿ ಹಣವಿದೆಯೋ ?"

"ಇದೆಯನ್ನು."

"ಪುಟ್ಟಗಂಟು ಬಿಚ್ಚುವುದಕ್ಕೆ ಎಷ್ಟು ಸಂಕಟಪಡುತ್ತೀಯಪ್ಪಾ."

ಚೌಡಪ್ಪನವರು ಮನೆಗೆ ಹಿಂದಿರುಗಿದ ಕೂಡಲೆ ಅತ್ತೆಗೂ ಮಗನಿಗೂ ಮನೆ ಕೊಳ್ಳುವ ವಿಷಯ ತಿಳಿಸಿದರು. ಮಹಾಬಲನ ಸಂತೋಷಕ್ಕೆ ಪಾರವೇ ಇಲ್ಲ. ತಿಮ್ಮಮ್ಮನವರು ಸಂತೋಷವ್ಯಕ್ತಮಾಡಿ ಕಣ್ಣೀರು ತಂದುಕೊಂಡು

"ಅವಳಿದ್ದಿದ್ದರೆ ಎಷ್ಟು ಹಿಗ್ಗುತ್ತಿದ್ದಳೋ"

ಎಂದು ಮಗಳನ್ನು ಜ್ಞಾಪಿಸಿಕೊಂಡರು.

ಗುಂಡಪ್ಪನವರು ಕಾಲವ್ಯಯವಾಗುವುದಕ್ಕೆ ಸ್ವಲ್ಪವೂ ಅವಕಾಶ ಕೊಡಲಿಲ್ಲ. ಮಾರನೆಯ ದಿನವೇ ಮನೆಯ ಮಾಲಿಕನನ್ನು ಬರಮಾಡಿ, ತಾವೇ ಖರೀದಿ ಪತ್ರದ ನಕಲು ಬರೆದು ಚೌಡಪ್ಪನವರಿಗೆ ತೋರಿಸಿ ಅಂದೇ ಇಬ್ಬರನ್ನೂ ಸಬ್ ರಿಜಿಸ್ಟ್ರಾರರ ಹತ್ತಿರ ಕರೆದೊಯ್ದು ಖರೀದಿಯನ್ನು ನಿಖರ ಮಾಡಿ ಹಣ ಕೊಡಿಸಿಬಿಟ್ಟರು.

ಚೌಡಪ್ಪನವರಿಂದ ಶಹಭಾಸಗಿರಿ ಪಡೆಯಲು ಗುಂಡಪ್ಪನವರು

"ನಿನಗೆ ತಿಂಗಳಿಗೆ ಐವತ್ತು ರೂಪಾಯಿ ಬಾಡಿಗೆ ಉಳಿತಾಯಮಾಡಿ ಕೊಟ್ಟಿದ್ದೀನಲ್ಲಪ್ಪಾ."

ಎಂದರು. ಗುಂಡಪ್ಪನವರ ವಿಚಿತ್ರ ಅರ್ಥಶಾಸ್ತ್ರ ನೋಡಿ ನಗುತ್ತಾ ಚೌಡಪ್ಪನವರು,

"ಹೌದು ಮಾರಾಯ. ದೊಡ್ಡ ಉಪಕಾರ ಮಾಡಿದೆ. ತಿಂಗಳಿಗೆ ಸೂರೆಂಭತ್ತು ರೂಪಾಯಿ ಖರ್ಚುಮಾಡಿಸಿ ಐವತ್ತು ರೂಪಾಯಿ ಉಳಿಸಿ ಕೊಟ್ಟೆ."

"ನೂರೆಂಭತ್ತು !"

"ಹೂ ! ಹದಿನೆಂಟು ಸಾವಿರಕ್ಕೆ ಶೇಕಡ ೧೨ ರಂತೆ ಬಡ್ಡೀ ಲೆಕ್ಕ ಹಾಕು."

"ಮಾರ್ವಾಡಿ ಬಡ್ಡೀನೇ ! ಸರಿ ಸರಿ !"

ಎಂದರು.

ಹೊರಗೆ ಉಪೇಕ್ಷೆ ತೋರುತ್ತಿದ್ದರೂ ಒಳಗೆ ಚೌಡಪ್ಪನವರಿಗೆ ಮಹದಾನಂದವಾಗಿತ್ತು.

ಗಾರೆ ಕೆಲಸದವರನ್ನು ಬರಮಾಡಿಕೊಂಡು, ಮನೆಗೆ ಹೊಸದಾಗಿ ಸುಣ್ಣ ಬಣ್ಣ ಮಾಡಿಸಿ, ಒಡೆದು ಹೋಗಿದ್ದ ಗಾಜುಗಳನ್ನು ಬದಲಾಯಿಸಿದರು.

"ಎಲ್ಲರನ್ನೂ ಕರೆದು ಗೃಹಪ್ರವೇಶ ಮಾಡಿ ಒಂದು ಭರ್ಜರಿ ಔತಣ ಮಾಡಿಸಬೇಕಪ್ಪಾ"

ಎಂದು ಮಹಾಬಲ ಸೂಚಿಸಿದ.

"ನಾನೂ ಅದೇ ಯೋಚಿಸುತ್ತಿದ್ದೆ ಮಹಾಬಲ. ಔತಣ ಮಾಡಿಸದಿದ್ದರೆ ಗುಂಡೂ ಜೀವದೊರಸೆ ನನ್ನ ಬಿಡಬೇಕಲ್ಲಾ."

"ನಾನೂ ನನ್ನ ಸ್ನೇಹಿತರನ್ನು ಕರೆಯುತ್ತೇನೆ."

"ಕರೆ. ಹಾಗೇ ನಿನ್ನ ಮೇಷ್ಟ್ರುಗಳನ್ನು ಕರೆ."

ಎಂದರು, ಸ್ನೇಹಿತರ ಜತೆಗೆ ಮೇಷ್ಟ್ರುಗಳೂ ಗಂಟುಬಿದ್ದರಲ್ಲಾ ಎಂದು ಮಹಾಬಲ ಯೋಚಿಸಿದ.

೧೧

ಔತಣದ ತಾರೀಖು ನಿಶ್ಚಯವಾಯಿತು. ಮಹಾಬಲನಿಗೆ ಸ್ವಲ್ಪವೂ ಬಿಡುವಿಲ್ಲ. ನಾಣಿ ತನ್ನೆಲ್ಲ ಕೆಲಸಗಳನ್ನು ಬದಿಗಿಟ್ಟು ಮಹಾಬಲನ ಜತೆಗೆ ನಿಂತ. ಉಮಾಪತಿ ಅಂಗಡಿ ಬಿಟ್ಟುಬರಲು ಸಾಧ್ಯವಾಗುತ್ತಿರಲಿಲ್ಲ. ಎರಡು ದಿವಸ ತನ್ನ ಕಾರು ಕಳಿಸಿಕೊಟ್ಟ.

ಮಹಾಬಲ ಉಮಾಪತೀಗೆ, ತನ್ನ ಕೆಲವು ಸಮೀಪದ ಮಿತ್ರರಿಗೆ, ಕೆಲವು ಉಪಾಧ್ಯಾಯರಿಗೆ ಆಮಂತ್ರಣ ಕೊಟ್ಟಿದ್ದ. ಚೌಡಪ್ಪನವರ ಪರವಾಗಿ ಗುಂಡಪ್ಪನವರು ತಮ್ಮ ಮಿತ್ರರಿಗೆ ಆಮಂತ್ರಣ ಕೊಟ್ಟಿದ್ದರು.

ಇಷ್ಟು ಜನರಿಗೆ ಅಡಿಗೆ ಪೂರೈಸುವುದು ತಿಮ್ಮಮ್ಮನವರಿಗೆ ಸಾಧ್ಯವಿಲ್ಲ ವೆಂದು ಚೌಡಪ್ಪನವರಿಗೆ ಗೊತ್ತು. ಇಬ್ಬರು ಉಡುಪಿ ಅಡಿಗೆಯವರನ್ನು ಬರಮಾಡಿಕೊಂಡು ಅಡಿಗೆಯ ಜವಾಬ್ದಾರಿ ಅವರಿಗೆ ವಹಿಸಿದರು. ಬೂದು ಕುಂಬಳಕಾಯಿ ಹುಳಿ, ಎರಡು ಪಲ್ಯ, ಎರಡು ಕೋಸಂಬರಿ, ಶಾವಿಗೆ ಖೀರು, ಹೀರೇಕಾಯಿ ಬೋಂಡ, ವಾಂಗೀಭಾತ್, ಕೇಸರಿಭಾತ್, ಓಂಪುಡಿ, ಖಾರಾಬೂಂದಿ, ಫೇಣಿ ಮಾಡುವುದೆಂದು ನಿಶ್ಚಯವಾಯಿತು. ಹಿಂದಿನ ರಾತ್ರಿಯೇ ಹಾಲು ತರಿಸಿ ಹೆಪ್ಪು ಹಾಕಿಸಿ ಅತಿಥಿಗಳಿಗೆ ಸೊಗಸಾದ ಮೊಸರು ಹಾಕಬೇಕೆಂದು ಚೌಡಪ್ಪನವರು ನಿಶ್ಚಯಿಸಿದರು.

ಬಸ್ಸಿನವರ ಕೈಯಲ್ಲಿ ಹಳ್ಳಿಗೆ ಒಂದು ಕಾಗದ ಬರೆದು ಕಳಿಸಿದರು. ಔತಣದ ಬೆಳಿಗ್ಗೆ ಪಟೇಲ ಹನುಮೇಗೌಡ ಬಾಳೆಯೆಲೆ, ಬಾಳೆಯ ಹಣ್ಣು ಮತ್ತು ಹಾಲು ತೆಗೆದುಕೊಂಡು ಬಂದು ರಾಯರಿಗೆ ಒಪ್ಪಿಸಿದ.

ಮನೆಯ ಅಲಂಕಾರಕ್ಕೆ ಚೌಡಪ್ಪನವರು ನೂರಾರು ರೂಪಾಯಿ ಖರ್ಚುಮಾಡಬೇಕಾಯಿತು. ತೊಟ್ಟಿಗೊಂದು ದೊಡ್ಡ ಜಮಖಾನಾ, ಆತು ಕೊಳ್ಳುವುದಕ್ಕೆ ಲೋಡುಗಳು, ಒರಗುದಿಂಬುಗಳು, ತೊಟ್ಟಿಯ ಒಂದು ಪಕ್ಕಕ್ಕೆ ಒಂದು ಸೋಫಾ ಸೆಟ್ ಬಂದಿತು. ಮಹಾಬಲ, ನಾಣಿ ಅಲಂಕಾರದ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು.

ಊಟ ರಾತ್ರಿಗೆಂದು ನಿಶ್ಚಯವಾಗಿತ್ತು. ಗುಂಡಪ್ಪನವರೇ ನಿಂತು ಕೊಂಡು ಎಲೆಹಾಕಿಸಿ ಎಂಟು ಗಂಟೆಗೆ ಬಡಿಸುವ ವ್ಯವಸ್ಥೆ ಮಾಡಿದರು. ಅತಿಥಿಗಳು ಬಂದು ಸೇರಿದ ಕೂಡಲೆ ಊಟವಾಯಿತು. ಒಂಭತ್ತೂವರೆ

ಯೊಳಗಾಗಿ ಎಲ್ಲರೂ ತಾಂಬೂಲ ಸ್ವೀಕರಿಸಿ, ಚೌಡಪ್ಪನವರ 'ಮೃಷ್ಟಾನ್ನ ಭೋಜನ'ವನ್ನು ಮನಸಾರೆ ಹೊಗಳಿ ಮನೆಗೆ ಹಿಂದಿರುಗಿದರು.

ಮಹಾಬಲನ ಅಧ್ಯಾಪಕರ ಕಣ್ಣಲ್ಲಿ ಈ ಔತಣದಿಂದ ಅವನ ಸ್ಥಾನ ಸ್ವಲ್ಪ ಮೇಲಕ್ಕೇರಿತು. ಒಬ್ಬಿಬ್ಬರು 'ಟ್ಯೂಷನ್' ಗಿಟ್ಟಿಸಿಕೊಳ್ಳ ಬೇಕೆಂದು ಪ್ರಯತ್ನಮಾಡಿಯೂ ನೋಡಿದರು.

ಔತಣದ ವಿಜೃಂಭಣೆ, ಅತಿಥಿಗಳ ಮೆಚ್ಚುಗೆಯ ಮಾತು ಮಹಾಬಲನ ಮೇಲೆ ವಿಚಿತ್ರ ಪರಿಣಾಮವನ್ನುಂಟುಮಾಡಿತು.

"ದುಡ್ಡಿರಬೇಕು. ಕೈಯಲ್ಲಿ ದುಡ್ಡಿದ್ದರೇ ಎಲ್ಲಾ ಮಾತು. ಲೋಕದಲ್ಲಿ ಗೌರವ, ಸ್ನೇಹಿತರ ವಿಶ್ವಾಸ, ನಂಟರಿಷ್ಟರ ಅಭಿಮಾನ. ದುಡ್ಡಿಲ್ಲದವನು ಲೋಕದಲ್ಲಿ ಕಸಕ್ಕಿಂತ ಕೀಳು."

ಎಂಬ ಭಾವನೆ ಅವನ ಹೃದಯದಲ್ಲಿ ನೆಟ್ಟುಬಿಟ್ಟಿತು. ಶಾಲೆಯ ಓದು ಮುಂದುವರಿಸುವ ಇಚ್ಛೆ ತನಗಿಲ್ಲವೆಂಬ ಸಂಗತಿಯಲ್ಲಿ ಪರ್ಯಾಯ ವಾಗಿ ತಂದೆಯ ಕಿವಿಯ ಮೇಲೆ ಹಾಕಿದ. ಅವರು ಅದನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ.

'ಏನು ಮಾಡುವುದು' ಎಂದು ಮಹಾಬಲ ಯೋಚನೆಮಾಡತೊಡ ಗಿದ.

ಅವನ ಬಗ್ಗೆ ಚೌಡಪ್ಪನವರೂ, ಗುಂಡೂರಾಯರೂ ಬೇರೊಂದು ಯೋಚನೆಮಾಡುತ್ತಿದ್ದರು.

ಮಹಾಬಲನಿಗೆ ಮುಂದಿನ ಶ್ರಾವಣಕ್ಕೆ ಮದುವೆಮಾಡುವುದೊಳ್ಳೆಯ ದೆಂಬ ಅಭಿಪ್ರಾಯವನ್ನು ಗುಂಡೂರಾಯರೂ ತಮ್ಮ ಗೆಳೆಯನ ಮುಂದಿ ಟ್ಟರು.

"ಇಷ್ಟುಬೇಗ ಏನವಸರ ಗುಂಡೂ" ಎಂದು ಚೌಡಪ್ಪನವರು ಕೇಳಿದರು.

"ನಿನ್ನದು ಯಾವ ಶಾಶ್ವತವಯ್ಯಾ. ನಿನ್ನ ಕಣ್ಣು ಮುಂದೆ ಮದುವೆ ಯಾಗಿ ಸೊಸೆ ಮನೆಗೆ ಬಂದು ನಾಲ್ಕು ವರ್ಷ ಸಂಸಾರಮಾಡಿದ್ದಾದರೂ ನೀನು ನೋಡಬೇಡವೇ ?"

"ಮಹಾಬಲನ ವಯಸ್ಸು ಚಿಕ್ಕದೆಂದು ಯೋಚಿಸುತ್ತಿದ್ದೆ."

"ಈಗಿನ ಕಾಲದ ಸುಧಾರಕನ ಹಾಗೆ ಮಾತನಾಡುವೆಯಲ್ಲಾ ಚೌಡಪ್ಪ. ಮದುವೆಯಾದ ಕೂಡಲೆ ಪ್ರಸ್ತವೂ ಮಾಡಿಬಿಡಬೇಕೆಂದು ಕಡ್ಡಾಯವಿದೆಯೇನು? ಮದುವೆ ಈಗ ಆಗಲಿ. ಇನ್ನೂ ಎರಡು-ಮೂರು ವರ್ಷ ಬಿಟ್ಟು ಪ್ರಸ್ತದ ಶಾಸ್ತ್ರಮಾಡಿದರಾಯಿತು."

"ಮೊದಲೇ ಮಹಾಬಲನಿಗೆ ಓದುವ ಮನಸ್ಸಿಲ್ಲ."

"ಏಕಂತೆ?"

"ಅವನು ವ್ಯಾಪಾರಮಾಡಬೇಕಂತೆ. ಉಮಾಪತಿ ಗಾಳಿ ತಟ್ಟಿದ ಹಾಗೆ ಕಾಣುತ್ತದೆ."

"ಏನು ವ್ಯಾಪಾರಮಾಡುತ್ತಾನಂತೆ!"

"ಅದು ಅವನಿಗೇ ನಿಶ್ಚಯವಾಗಿಲ್ಲ. ವ್ಯಾಪಾರಮಾಡಬೇಕು—ತುಂಬ ಹಣ ಗಳಿಸಬೇಕು ಎಂದು ನಿರ್ಧರಿಸಿಕೊಂಡಿದ್ದಾನೆ."

"ಅವನ ಇಚ್ಛೆ ಅಷ್ಟು ಉತ್ಕಟವಾಗಿದ್ದರೆ ಸುಮ್ಮನೆ ಶಾಲೆಗೆ ಹಾಕಿ ಓದಿಸಿ ಅವನ ಆಯುಷ್ಯ ಹಾಳುಮಾಡುವುದರಲ್ಲೇನು ಪ್ರಯೋಜನ?"

"ಇದೇನು ಗುಂಡೂ, ನೀನು ಹೀಗೆ ಹೇಳುತ್ತೀಯಲ್ಲಾ. ವ್ಯಾಪಾರವೆಂದರೆ ಹುಡುಗಾಟಿಕೆಯಾಗಿ ಹೋಯಿತೇ? ಏನು ಅನುಭವವಿಲ್ಲದ ಹುಡುಗನ ಕೈಗೆ ಸಾವಿರಾರು ರೂಪಾಯಿ ಕೊಡುವುದು ಹೇಗೆ?"

"ನೋಡು ಚೌಡಪ್ಪ. ಇದು ನಿನ್ನ—ನನ್ನ ಕಾಲವಲ್ಲ; ನಮ್ಮ ಮಕ್ಕಳ ಕಾಲ. ಮಹಾಬಲನ ವಯಸ್ಸಿನಲ್ಲಿ ನಾವು ತಂದೆತಾಯಿಗಳ ಕೈಯಲ್ಲಿ ನಲಿಯುತ್ತಿದ್ದ ಮಕ್ಕಳು-ಅವನು ಪ್ರೌಢ ತರುಣ. ಕಾಲಾಯತಸ್ಮೈನಮಃ. ಅದಕ್ಕೆ ಸರಿಯಾಗಿ ಹೊಂದಿಕೊಳ್ಳುವುದು ನಮ್ಮ ಧರ್ಮ."

"ಇರುವುದು ನಾಲ್ಕುಕಾಸು. ಹುಡುಗ ಅವಿವೇಕದಿಂದ ಕಳೆದು ಕೊಂಡುಬಿಟ್ಟರೆ ಮುಂದೆ ಗತಿ?"

"ನೋಡು ಚೌಡಪ್ಪಾ—ವ್ಯಾಪಾರದ ಕಡೆ ಅವನ ಲಕ್ಷ್ಯ ಹೋಗಬೇಕಾದರೆ ಹಣ ಮಾಡಬೇಕೆಂಬ ಆಸಕ್ತಿ ಅವನಲ್ಲಿ ಹುಟ್ಟಿರುವುದು ಸ್ವತಃಸ್ಸಿದ್ಧ. ಹಣ ಮಾಡಬೇಕೆಂದಿರುವವನು ಕಳೆದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆಯೇ?"

"ಹಾಗಾದರೆ ಓದಿಗೆ ಇತಿಶ್ರೀಯಾದಂತೆಯೇ?"

"ಅದಕ್ಕೇನು ಮಾಡುವುದಕ್ಕಾಗುತ್ತದೆ ಹೇಳು. ಎದುರಿಗೆ ಅನ್ನವಿರಬಹುದು—ಅದನ್ನು ಬಾಯೊಳಗೆ ಗಿಡಿಯುವುದಕ್ಕಾಗುತ್ತದೆಯೇ ?—ಯಾರ ಯಾರ ಲಭ್ಯ ಎಷ್ಟೆಷ್ಟಿದೆಯೋ ?"

"ಯೋಚನೆಮಾಡಬೇಕಾದ ವಿಷಯ ಇದು ಗುಂಡೂ—ಹುಡುಗನ ಭವಿಷ್ಯಕ್ಕೆ ಸಂಬಂಧಪಟ್ಟ ಪ್ರಶ್ನೆ. ಈಗ ಹುಡುಗನ ಮನಸ್ಸು ನೋಯಿಸಬಾರದೆಂದು ಪ್ರಯತ್ನಿಸಿ ನಾನೇ ಅವನ ತಲೆಯಮೇಲೆ ಕಲ್ಲು ಎತ್ತಿ ಹಾಕಿದ ಹಾಗೆ ಆಗಬಾರದು."

"ನಿನ್ನದು ಬಹಳ ಅನುಮಾನಪ್ರಕೃತಿ ಚೌಡಪ್ಪ. ಅನುಮಾನ ಬಿಟ್ಟು ನಿಶ್ಚಲವಾಗಿ ಒಂದಾದರೂ ಕೆಲಸಮಾಡು."

ಎಂದು ಗುಂಡೂರಾಯರು ಹೇಳಿದರು.

ಗುಂಡೂರಾಯರ ವಾದಸರಣಿ ಚೌಡಪ್ಪನವರಿಗೆ ಆಪ್ಯಾಯಮಾನವಾಗಲಿಲ್ಲ. ಆದರೆ ಅದಕ್ಕೆ ಶರಣುಹೋಗದೆ ಬೇರೆ ಮಾರ್ಗವೇ ಇರಲಿಲ್ಲ.

## ೧೨

ಗುಂಡೂರಾಯರು ಎತ್ತಿದ್ದ ಎರಡು ಪ್ರಶ್ನೆಗಳಿಗೂ ಚೌಡಪ್ಪನವರಿಗೆ ಎರಡು ಸಮಸ್ಯೆಗಳಾಗಿ ಪರಿಣಮಿಸಿದವು. ಮಹಾಬಲನನ್ನು ವ್ಯಾಪಾರಕ್ಕೆ ಹಚ್ಚುವುದರಿಂದ ಅವನ ವಿದ್ಯಾಭ್ಯಾಸ ನಿಂತುಹೋಗುವುದು — ತಮ್ಮ ಮನೆಯಲ್ಲಿ ಯಾರಾದರೂ ಡಿಗ್ರಿ ತೆಗೆದುಕೊಳ್ಳಲಿ ಎಂಬ ತಮ್ಮ ಕನಸು ನುಚ್ಚುನೂರಾಗುವುದು. ಹೋಗಲಿ. ತಮ್ಮ ಕನಸೇನೂ ದೊಡ್ಡ ವಿಷಯವಲ್ಲ. ಹುಡುಗನ ಭವಿಷ್ಯ ಮುಖ್ಯ. ಇದರಿಂದ ಅವನಿಗಾದರೂ ಹಿತವಾಗುವುದೇ ? ಉಮಾಪತಿ ಗಟ್ಟಿಗ—ಅವನ ತಂದೆ ತಾತಂದಿರು ವ್ಯಾಪಾರದಲ್ಲಿ ಖದೀಮರು. ಅವನ ದಾರಿ ಮಹಾಬಲ ಹಿಡಿದರೆ ಯಶ ದೊರಕುವುದೆಂದು ಹೇಗೆ ಹೇಳಲು ಸಾಧ್ಯ ?

ಮಹಾಬಲನಿಗೆ ಈಗಲೇ ಮದುವೆಮಾಡುವುದೇನೋ ಯೋಗ್ಯವಾದದ್ದೇ. ತಿಮ್ಮಮ್ಮನವರಿಗೂ ವಯಸ್ಸಾಗುತ್ತ ಬಂತು. ಕಣ್ಣು ಕಾಣದೆ ಇದ್ದರೂ ಮುದುಕಿ ನೆಪ್ಪಿನ ಮೇಲೆ ಕೆಲಸಮಾಡಿಕೊಂಡು ಹೋಗುತ್ತಿತ್ತು. ಇನ್ನು ಆಕೆ ಎಷ್ಟು ದಿವಸ ಬದುಕಿರಬಹುದು-ಆಕೆ ಬದುಕಿರು

ವಾಗಲೇ ಮನೆಗೆ ಸೊಸೆ ಬಂದರೆ ಅವಳು ಕೆಲಸಕಾರ್ಯ ಕಲಿತು ಮನೆಯ ಜವಾಬ್ದಾರಿ ಹೊರಲು ಅನುಕೂಲವಾಗುವುದು. ಆದರೆ ಇಷ್ಟು ಚಿಕ್ಕ ವಯಸ್ಸಿನಗೇ ಮಹಾಬಲನಿಗೆ ಮದುವೆಮಾಡಿ ಅವನ ಮೇಲೆ ಸಂಸಾರದ ಹೊರೆಯನ್ನು ಹೇರುವುದೇ ? ಈ ವಿಷಯದಲ್ಲಿ ಮಹಾಬಲ ಏನು ಹೇಳುತ್ತಾನೆ ನೋಡುವ ಎಂದು ಕುತೂಹಲದಿಂದ ಚೌಡಪ್ಪನವರು ಅವನನ್ನು ಕರೆದು ಕೇಳಿದರು.

"ಗುಂಡೂ ಏನೋ ಒಂದು ಮಾತು ಹೇಳಿದ ಮಹಾಬಲ. ನಿನ್ನ ಕೇಳಿ ಮುಂದಿನ ಯೋಚನೆ ಮಾಡುವ ಎಂದು ಸುಮ್ಮನಿದ್ದೆ."

"ಏನು ಹೇಳಿದರು."

"ನನಗೂ ವಯಸ್ಸಾಗುತ್ತ ಬಂತು. ತಿಮ್ಮಮ್ಮನವರ ಜೀವಿತವೂ ಶಾಶ್ವತವಲ್ಲ."

"ಇಂಥ ಯೋಚನೆ ಏಕೆ ಮಾಡುವೆ ? "

"ನಿನಗೆ ತಾಯಿಯಿದ್ದಿದ್ದರೆ ನಾನು ಯೋಚನೆಮಾಡುತ್ತಿರಲಿಲ್ಲ ಮಹಾಬಲ. ಈಗ ಎಲ್ಲ ಜವಾಬ್ದಾರಿಯೂ ನನ್ನ ಮೇಲೆ ಬಿದ್ದಿದೆ. ಅದನ್ನು ನಾನು ಯುಕ್ತಕಾಲದಲ್ಲಿ ನಿರ್ವಹಿಸದಿದ್ದರೆ ನೋಡಿದವರು ಏನನ್ನುತ್ತಾರೆ ?"

"ಯೋಚನೆ ಏನು ಎಂದು ಹೇಳಲಿಲ್ಲವಲ್ಲಣ್ಣಾ."

"ನಿನಗೆ ಮದುವೆ ಮಾಡುವುದು ಒಳ್ಳೆಯದೆಂದು ಗುಂಡೂ ಸೂಚಿಸಿದ್ದಾನೆ."

ಮಹಾಬಲನ ಮುಖ ಪೆಚ್ಚಾಯಿತು. ಯಾವ ಕಾರಣಕ್ಕೆ ಗುಂಡೂರಾಯರು ಈ ಸಲಹೆಯನ್ನು ತಂದೆಗಿತ್ತರೆನ್ನುವುದು ಅವನಿಗೆ ಸರಿಯಾಗಿ ಅರ್ಥವಾಗಲಿಲ್ಲ. ತಂದೆಯ ಕಡೆ ಅರ್ಥಗರ್ಭಿತವಾದ ನೋಟ ಬೀರಿ

"ನಾನು ದಾರಿತಪ್ಪಿ ನಡೆಯುತ್ತಿಲ್ಲವಲ್ಲಾ."

"ಅದಕ್ಕಲ್ಲಪ್ಪಾ. ಗುಂಡೂನೂ ಹಾಗೆ ಹೇಳಲಿಲ್ಲ. ನೀನು ಮದುವೆಯಾಗಿ ಸುಖವಾಗಿರುವುದನ್ನು ನಾನು ಕಣ್ತುಂಬ ನೋಡಬೇಡವೇ ? ತಿಮ್ಮಮ್ಮನವರು ನೋಡಬೇಡವೇ ?"

"ನನಗೆ ಈಗಲೇ ಮದುವೆಗೇನು ಅವಸರ ?"

"ನಿನಗೆ ಅವಸರವಾಗಿದೆಯೆಂದಲ್ಲ—ನಮಗೆ ಅವಸರವಾಗಿದೆ. ನನ್ನ ಬಾಳಹಣತೆಯಲ್ಲಿ ಇನ್ನು ಸ್ವಲ್ಪವೇ ಎಣ್ಣೆ ಮಿಕ್ಕಿರುವುದು."

"ನೀನು ಹೀಗೆ ಮಾತನಾಡಿದರೆ ನನಗೆ ತುಂಬ ದುಃಖವಾಗುತ್ತದೆ ಅಣ್ಣಾ."

"ಯೋಚನೆ ಮಾಡು. ಬೇಕಾದರೆ ನಾಳೆ, ಉಮಾಪತಿಯನ್ನು ಕೇಳು. ನೀನು ಉತ್ತರಕೊಟ್ಟ ಮೇಲೆ ನಾನೂ ಗುಂಡೂ ಮುಂದಿನ ವಿಷಯ ಆಲೋಚಿಸುತ್ತೇವೆ."

ಮಹಾಬಲನ ಮನಸ್ಸಿಗೆ 'ಮದುವೆ' ಶಬ್ದದ ಪೂರ್ಣಾರ್ಥ ಹೊಳೆದಿರಲಿಲ್ಲ. ಅದು ದೊಡ್ಡವರು ಮಕ್ಕಳನ್ನು ಕೂಡಿಸಿ ಆಡುವ ಒಂದು ಆಟವೆಂಬ ಭಾವನೆಗಿಂತ ಹೆಚ್ಚಿನ ಭಾವನೆ ಅವನ ಮನಸ್ಸಿನಲ್ಲಿ ಬರಲು ಸಾಧ್ಯವಿರಲಿಲ್ಲ. ಆದರೆ 'ಮದುವೆ' ಏನೊ ಒಂದು ವಿಚಿತ್ರ ಆಕರ್ಷಣೆಯನ್ನೊಡ್ಡಿತ್ತು. ತಂದೆಯ ಬಾಯಲ್ಲಿ ಆ ಮಾತು ಕೇಳಿದಾಗ ಅನಿರೀಕ್ಷಿತವಾಗಿ ಮಹಾಬಲನ ಮನಸ್ಸು ಮುದಗೊಂಡಿತ್ತು.

ಕೆಲವು ದಿವಸ ಅವನ ತಲೆಯಲ್ಲಿ ತಂದೆಯ ಸೂಚನೆ ಸುಳಿದಾಡಿತು. ಮಹಾಬಲನ ಮನಸ್ಸಿನಲ್ಲಿ ಬಿರುಗಾಳಿ ಎದ್ದಿದೆ ಎಂಬುದನ್ನು ನಾಣಿ ಅರಿಯಲು ಸಾಧ್ಯವಾಯಿತು. ಅದು ಏನು ಎಂದು ಅವನಿಗೂ ಸ್ಪಷ್ಟವಾಗಿರಲಿಲ್ಲ.

"ಬಹಳ ಚಿಂತೆ ಮಾಡುತ್ತಿರುವ ಹಾಗಿದ್ದೀಯಲ್ಲಾ ಮಹಾಬಲ. ಏನದು ಚಿಂತೆ. ತಂದೆ ಏನಾದರೂ ಅಂದರೇ ?"

"ಛೀ ಪಾಪ! ಅವರನ್ನು ನಾನು ಏತಕ್ಕೂ ಆಕ್ಷೇಪಿಸುವಂತಿಲ್ಲ."

"ಆ ವಿಷಯದಲ್ಲಿ ನೀನು ಮಹಾ ಭಾಗ್ಯಶಾಲಿ."

"ತಂದೆ ಒಂದು ಸೂಚನೆಯಿತ್ತಿದ್ದಾರೆ ನಾಣಿ. ಅದು ನನ್ನನ್ನು ಬಹಳ ಕಾಡುತ್ತಿದೆ."

"ಏನದು ಹೇಳಬಾರದೇ ?"

"ಅವರೂ ಗುಂಡೂರಾಯರೂ ನನ್ನ ಮದುವೆ ಪ್ರಯತ್ನದಲ್ಲಿ ಇರುವ ಹಾಗೆ ಕಾಣುತ್ತದೆ."

"ನಿನ್ನ ಮದುವೆಯೇ !—ಈಗಲೇ !!"

"ಹೂ ! ಆಗಬಾರದೇ ?"

"ಬೇಡವೆಂದವರು ಯಾರು ?"

"ಆಶ್ಚರ್ಯ ಸೂಚಿಸಿದೆ."

"ಆಶ್ಚರ್ಯವಾಯಿತು."

"ಏಕೆ ?"

"ಹಿರಿಯರ ಮಾತು ಜ್ಞಾಪಕಕ್ಕೆ ಬಂತು."

"ಸ್ಪಷ್ಟವಾಗಿ ಹೇಳು ಮಾರಾಯ."

"ವಿವಾಹೇ ವಿದ್ಯನಾಶಾಯ."

"ಸ್ಕೂಲಿಗೆ ನಮಸ್ಕಾರ ಹಾಕಬೇಕೆಂದು ನಾನು ಎಂದಿನಿಂದಲೋ ಯೋಚಿಸುತ್ತಿದ್ದೇನೆ."

"ಹಾಗಾದರೆ ಮದುವೆಯಾಗಲು ಯಾವ ಅಡ್ಡಿಯೂ ಇಲ್ಲ."

"ನಿನ್ನ ಮನಸ್ಸಿನಲ್ಲೇನಿದೆ ಹೇಳಬಾರದೆ ನಾಣಿ."

"ನಿನ್ನ ಮನಸ್ಸಿನಲ್ಲಿರುವುದನ್ನೇ ಹೇಳಬೇಕೆಂದು ನಿರೀಕ್ಷಿಸುತ್ತಿರುವೆಯೋ ?"

"ಇಲ್ಲ. ನಿನಗೆ ತೋರಿದುದನ್ನು ಸ್ಪಷ್ಟವಾಗಿ ಹೇಳಬಹುದು."

"ಮದುವೆಯಾಗಿ ಮನುಷ್ಯ ಗೃಹಸ್ಥನಾಗಬೇಕಾದುದು ಅವನ ಕರ್ತವ್ಯ. ಆದರೆ ಅದಕ್ಕೂ ವಯಸ್ಸು, ಕಾಲ ನೋಡಬೇಕು. ನಿನಗೆ ಈಗ ಮದುವೆಯ ವಯಸ್ಸಾಗಿಲ್ಲ. ಇನ್ನೂ ನಾಲ್ಕುವರ್ಷ ಹೋದರೆ ಒಳ್ಳೆಯದೆಂದು ನನಗೆ ತೋರುತ್ತದೆ."

"ನೀನು ಹೇಳುವುದು ಸರಿ. ಆದರೆ ತಂದೆಯವರು ಏನು ಯೋಚಿಸಿದ್ದಾರೆಯೋ ?"

"ಅವರು ನಿನ್ನ ಮನಸ್ಸಿನ ವಿರುದ್ಧವಾಗಿ ಯಾವ ಕೆಲಸವನ್ನೂ ಮಾಡುವವರಲ್ಲ. ನಿನಗೆ ಈಗ ಮದುವೆ ಬೇಕೇ ಬೇಡವೇ ನಿರ್ಧರಿಸಿಕೋ."

ಎಂದು ಹೇಳಿದ. ಮಹಾಬಲ ನಿರ್ಧಾರಮಾಡುವುದು ಸುಲಭ ಸಾಧ್ಯವಾಗಿರಲಿಲ್ಲ. ತನಗಾಗಿ ಯಾರಾದರೂ ನಿರ್ಧಾರಮಾಡಲಿ ಎನ್ನುವುದು ಅವನ ಆಕಾಂಕ್ಷೆಯಾಗಿತ್ತು.

ಉಮಾಪತಿ ನಾಣಿಯ ಅಭಿಪ್ರಾಯಕ್ಕೆ ತೀರ ಭಿನ್ನವಾದ ಅಭಿಪ್ರಾಯ ವ್ಯಕ್ತಪಡಿಸಿದ.

"ನನಗೂ ಈ ವರ್ಷ ಮದುವೆ ಮಾಡುತ್ತಾರಂತೆ ಮಹಾಬಲ. ನೀನೂ ನಾನೂ ಒಟ್ಟಿಗೆ ಮದುವೆಯಾದರೆ ಚೆನ್ನಾಗಿರುತ್ತದೆ ನೋಡು."

ಎಂದು ಅವನು ಹೇಳಿದ.

ಮಹಾಬಲನ ಮನಸ್ಸು ಎರಡು ಕಡೆಗೂ ತುಯ್ಯತೊಡಗಿತು.

ಕೆಲವು ದಿವಸಗಳ ತರುವಾಯ ಚೌಡಪ್ಪನವರು ಕೇಳಿದಾಗ ಗೆಳೆಯರ ಅಭಿಪ್ರಾಯವನ್ನು ಅವರ ಮುಂದಿಟ್ಟ.

"ನಿನ್ನ ಅಭಿಪ್ರಾಯವೇನು—ಅದನ್ನು ಹೇಳು" ಎಂದವರು ಕೇಳಿದರು.

"ನನಗೇನೂ ತೋರುವುದಿಲ್ಲ. ದೊಡ್ಡವನು ನೀನು, ನೀನು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ"

ಎಂದು ತಂದೆಯ ಮೇಲೆ ಜವಾಬ್ದಾರಿ ಹೇರಿ ನಿಶ್ಚಿಂತನಾದ.

ಚೌಡಪ್ಪನವರ ಸಮಸ್ಯೆ ಬಗೆಹರಿಯಲಿಲ್ಲ. ಜತೆಗೆ ಗುಂಡೂರಾಯರಿಗೆ ಏನು ಹೇಳುವುದು ಎಂಬ ಯೋಚನೆ ಅವರನ್ನು ಕಾಡ ತೊಡಗಿತು. ಗುಂಡೂರಾಯರು ಹಟವಾದಿಗಳಾಗಿರಲಿಲ್ಲ. ತಾವು ಹೇಳಿದ ಮಾತನ್ನು ಇತರರು ಸ್ವಲ್ಪವೂ ವ್ಯತ್ಯಾಸವಾಗದಂತೆ ನಡೆಸಬೇಕೆಂಬ ಛಲವಿರಲಿಲ್ಲ. ಆದರೂ ಚೌಡಪ್ಪನವರ ಮನಸ್ಸಿನಲ್ಲಿ ಅಳಕು. ಗುಂಡೂರಾಯರಿಗೆ ಎಲ್ಲಿ ಅಸಮಾಧಾನವಾಗುತ್ತದೋ ಎಂಬ ಭಯ.

ಲೌಕಿಕ ಚೆನ್ನಾಗಿ ಬಲ್ಲ ಗುಂಡೂರಾಯರು ಪುನಃ ಈ ಪ್ರಸ್ತಾಪ ಮಾಡಲು ಹೋಗಲಿಲ್ಲ.

ಒಂದು ಸಂಜೆ ವಾಕಿಂಗ್ ಮುಗಿಸಿ ಬಸವನಗುಡಿ ಗುಡ್ಡದಮೇಲೆ ಕುಳಿತಿದ್ದಾಗ ಚೌಡಪ್ಪನವರು

"ನೀನು ಕೊಟ್ಟ ಸಲಹೆ ವಿಚಾರಮಾಡಿದೆ ಗುಂಡೂ. ಮಹಾಬಲನನ್ನೂ ಕೇಳಿ ನೋಡಿದೆ."

"ಅವನು ಏನು ಹೇಳಿದ."

"ಏನು ಹೇಳುತ್ತಾನೆ ಪಾಪ. ಹಿರಿಯರು ನೀವು ಹೇಗೆ ಹೇಳಿದರೆ

ಹಾಗೆ ಮಾಡುತ್ತೇನೆ ಎಂದ. ಮುಂದಿನ ವರ್ಷ ಮದುವೆ ಯೋಚನೆ ಮಾಡುವುದು ಒಳ್ಳೆಯದೆಂದು ನನಗೆ ತೋರಿದೆ. ಅವನ ಪರೀಕ್ಷೆಯ ಫಲಿತಾಂಶವೂ ಹೊರಬೀಳುತ್ತದೆ. ಮುಂದೆ ಓದುವ ಇಷ್ಟ ಅವನಿಗೆ ಸ್ವಲ್ಪವೂ ಇಲ್ಲದಿದ್ದರೆ ವ್ಯಾಪಾರಕ್ಕೆ ಹಾಕುವುದೇ ಯೋಗ್ಯಮಾರ್ಗ.''

"ಸರಿ—ಹಾಗೇ ಮಾಡು."

"ಒಳ್ಳೆಯ ಸಂಬಂಧ ಯಾವದಾದರೂ ಇದ್ದರೆ ಈಗಿನಿಂದ ನೋಡಿರುವುದಕ್ಕೇನು ಅಡ್ಡಿ. ಮದುವೆಬೇಕಾದರೆ ಮುಂದಕ್ಕೆ ಹಾಕಬಹುದು. ಹೆಣ್ಣನ್ನು ನಿಶ್ಚಯಮಾಡುವುದಕ್ಕೇನೂ ಅಭ್ಯಂತರವಿಲ್ಲ. ಹೆಣ್ಣಿನ ಕಡೆಯವರಿಗೂ ಸಾಮಾನು ಸರಂಜಾಮು ಒದಗಿಸಿಕೊಳ್ಳುವುದಕ್ಕೆ ವೇಳೆ ಸಿಕ್ಕಿದಂತಾಗುತ್ತದೆ."

"ಆಗಬಹುದು. ನಿಮ್ಮ ಜನ ನನಗೆ ತುಂಬ ಬೇಕಾದವರು ಅಕ್ಕೀಹೆಬ್ಬಾಳು ಶ್ರೀಕಂಠಯ್ಯನವರಿದ್ದಾರೆ. ಅವರ ಕಿವಿಗೆ ಒಂದು ಮಾತು ಹಾಕಿರುತ್ತೇನೆ. ಸರಿಯಾದ ಸಂಬಂಧ ಅವರು ಕುದುರಿಸಿ ಕೊಡುತ್ತಾರೆ."

"ನಿನಗೆ ಹೇಗೆ ಬೇಕೋ ಹಾಗೆ ಮಾಡಪ್ಪ. ನಾನು ಹೇಳುವುದೇನಿದೆ ? "

"ಇನ್ನೊಂದು ವಿಷಯ ಈಗಲೇ ಸ್ಪಷ್ಟಮಾಡಿಕೊಂಡು ಬಿಡುತ್ತೇನೆ ಚೌಡಪ್ಪ—ವರದಕ್ಷಿಣೆಯ ನಿರೀಕ್ಷಣೆ ಏನಾದರೂ ಇದೆಯೋ ?"

"ಯಾರಿಗೆ ? ನನಗೋ—ಮಹಾಬಲನಿಗೋ ?"

"ಅವನು ವ್ಯಾಪಾರ ಸಾಪಾರ ಮಾಡುವುದಕ್ಕೆ ಹೊರಡುವವನಿದ್ದಾನೆ."

"ನನ್ನ ಮಗನ ವ್ಯಾಪಾರಕ್ಕೆ ಹಣ ಒದಗಿಸಲಾರದಷ್ಟು ದರಿದ್ರನೇ ನಾನು. ಕಂಡವರ ನಾಲ್ಕುಕಾಸು ತೆಗೆದುಕೊಂಡು ನನ್ನ ಮಗನ ಸಂಸಾರ ಬೆಳಸಬೇಕೇ ? ಈ ದುಶ್ಚಟಗಳೆಲ್ಲಾ ನಮ್ಮ ವಂಶಕ್ಕೇ ಬಂದಿಲ್ಲ ಗುಂಡೂ. ಲಕ್ಷಣವಾಗಿ ಮದುವೆ ಮಾಡಿಕೊಡಲಿ—ದೇವರು ಅವರಿಗೇನು ಅನುಕೂಲಮಾಡಿಕೊಟ್ಟಿದ್ದಾನೋ ಅದರಲ್ಲಿ ಹಿಂಸೆಪಟ್ಟುಕೊಳ್ಳದೆ ವರನ ಉಡುಗೆತೊಡಿಗೆ ನೋಡಿಕೊಳ್ಳಲಿ. ನಾವೂ ಶಕ್ತ್ಯಾನುಸಾರ ವಧುವನ್ನು ಸಿಂಗರಿಸುತ್ತೇವೆ."

"ಆಗಬಹುದು. ಸಂತೋಷ. ನಾನು ಸ್ಪಷ್ಟವಾಗಿ ಕೇಳಿದೆನೆಂದು ಬೇಸರಪಟ್ಟುಕೊಳ್ಳಬೇಡ. ಈ ವಿಷಯಗಳಲ್ಲಿ ಒಬ್ಬರ ಮನಸ್ಸು ಒಬ್ಬರು ಖಚಿತವಾಗಿ ತಿಳಿದುಕೊಳ್ಳುವುದು ಲೇಸು. ಮುಂದೆ ವಿನಾ ಕಾರಣ ಮನಸ್ತಾಪ ಬರಬಾರದು."

"ಯಾವ ಕಾರಣಕ್ಕೂ ಮನಸ್ತಾಪ ಬರಬಾರದು ಗುಂಡೂ. ನಮ್ಮ ಮನೆಗೆ ಹೆಣ್ಣು ಕೊಟ್ಟು ಅದನ್ನು ಬೆಳಗಿಸುವವರು 'ಅಯ್ಯೋ' ಎಂದುಕೊಳ್ಳಬಾರದು. ಬಡವರ ಮನೆಯ ಹುಡುಗಿಯಾದರೂ ಚಿಂತೆಯಿಲ್ಲ. ಹುಡುಗಿ ಲಕ್ಷಣವಾಗಿ, ಸಂಭಾವಿತಳಾಗಿ, ಉತ್ತಮ ಕುಲಸ್ಥಳಾಗಿದ್ದರೆ ಸಾಕು."

ಚೌಡಪ್ಪನವರ ಮಾತಿನ ಹಿರಿಮೆ ಗುಂಡೂರಾಯರಿಗೆ ಮನದಟ್ಟಾಯಿತು. ತಮ್ಮ ಗೆಳೆಯನ ಸಂಸ್ಕೃತಿಯ ಮಟ್ಟ ಕಂಡು ಅವರು ಬೆರಗಾದರು.

೧೩

ಪರೀಕ್ಷೆಗೆ ಎರಡು ತಿಂಗಳ ಮುನ್ನ ಚೌಡಪ್ಪನವರು ಮಗನ ವಿದ್ಯಾಭ್ಯಾಸದ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸಿದರು. ಇಂಗ್ಲೀಷು ಗಣಿತ ಎರಡರಲ್ಲಿಯೂ ಅವನು ದುರ್ಬಲನಾಗಿದ್ದ. ಅವುಗಳಿಗೆ ಪ್ರತ್ಯೇಕ ಉಪಾಧ್ಯಾಯರನ್ನು ಗೊತ್ತುಮಾಡಿದರು.

ರಾತ್ರಿಯೇ ಹೆಚ್ಚು ಹಾಲನ್ನು ತೆಗೆದಿಟ್ಟುಕೊಂಡು, ಬೆಳಿಗ್ಗೆ ಐದು ಗಂಟೆಗೆ ಮಗನನ್ನೆಬ್ಬಿಸಿ ಓದುವುದಕ್ಕೆ ಕೂಡಿಸಿ, ಅವನಿಗೆ ತಾವೇ ಕಾಫಿ ಮಾಡಿಕೊಡುತ್ತಿದ್ದರು. ಜತೆಯಲ್ಲಿ ಓದುವುದಕ್ಕೆ ನಾಣಿಯೂ ಆಗಾಗ್ಗೆ ಬರುತ್ತಿದ್ದ. ಪರೀಕ್ಷೆ ಮುಗಿಯಿತು.

ಪರೀಕ್ಷೆಯ ಬೇಸರ ಕಳೆಯಲು ನಾಣಿಯ ಜತೆಮಾಡಿ ಮಹಾಬಲನನ್ನು ಕನ್ನಂಬಾಡಿ, ಬೇಲೂರು, ಶ್ರವಣಬೆಳಗೊಳ, ಜೋಗದ ಜಲಪಾತ ನೋಡಿ ಬರಲು ಕಳುಹಿಸಿಕೊಟ್ಟರು.

ಮಹಾಬಲ ಪ್ರವಾಸದಲ್ಲಿದ್ದಾಗ ಅಕ್ಕೀಹೆಬ್ಬಾಳು ಶ್ರೀಕಂಠಯ್ಯನವರು ಗುಂಡೂರಾಯರ ಕಾಗದ ನೋಡಿ ಬೆಂಗಳೂರಿಗೆ ಬಂದರು. ಅವರನ್ನು ಜತೆಯಲ್ಲಿಯೇ ಕರೆದುಕೊಂಡು ಗುಂಡೂರಾಯರು ಚೌಡಪ್ಪನವರ ಮನೆಗೆ ಬಂದರು.

ಕುಶಲವಾರ್ತೆಯಾಯಿತು. ಪಾನಕ ಪಣ್ಯಾರವಾಯಿತು. ಪರಸ್ಪರ ಪರಿಚಯವೂ ಆಯಿತು. ಶ್ರೀಕಂಠಯ್ಯನವರು ಹಳೆಯ ಸಂಬಂಧವನ್ನೂ ಹುಡುಕಿದರು. ಗುಂಡೂರಾಯರು ಕೇಳಿದರು.

"ಹೆಣ್ಣು ನೋಡಿರುವಿರಾ?"

"ಒಂದೇಕೆ? ನಾಲ್ಕು ನೋಡಿದ್ದೇನೆ. ನೀವು ಹೂ ಎಂದರೆ ಇಲ್ಲಿಗೇ ಕರೆಸುತ್ತೇನೆ."

"ನಮ್ಮ ಹುಡುಗ ಊರಿನಲ್ಲಿಲ್ಲವಲ್ಲಾ!"



"ಯಾವಾಗ ಬರುತ್ತಾನೆ."

"ಇನ್ನು ಒಂದು ವಾರವಾಗಬಹುದು."

"ಮುಂದಿನವಾರ ಅವರನ್ನು ಕರೆದುಕೊಂಡು ನಾನೇ ಬರುತ್ತೇನೆ. ಹುಡುಗನ ಜಾತಕ ಕೊಟ್ಟಿದ್ದರೆ ಆಗಿತ್ತು."

"ಅವಶ್ಯಕವಾಗಿ ಕೊಡುತ್ತೇನೆ. ನೋಡಿ ಶ್ರೀಕಂಠಯ್ಯನವರೇ-ನಮ್ಮ ಸ್ಥಿತಿಗತಿಯೆಲ್ಲಾ ನಿಮಗೆ ತಿಳಿದೇ ಇದೆ. ಗುಂಡೂರಾಯರು ಎಲ್ಲಾ ಹೇಳಿಯೇ ಇದ್ದಾರೆ. ಸರಿಯಾದ ಮನೆತನಸ್ಥರ ಮನೆ ಹುಡುಗಿಯನ್ನು ಗೊತ್ತುಮಾಡಿ."

"ನನ್ನ ಹತ್ತಿರದ ಸಂಬಂಧ—ಹುಡುಗಿ ತಂದೆ ಅನಂತರಾಮಯ್ಯನವರು ಹಾಸನದ ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಹೆಡ್ ಗುಮಾಸ್ತರಾಗಿದ್ದಾರೆ. ತಕ್ಕಮಟ್ಟಿಗೆ. ಅನುಕೂಲಸ್ಥರು. ಈಗ ಮದುವೆಗೆ ನಿಂತಿರುವ ಹುಡುಗಿ ಸರಸೂ—ಅವರ ಎರಡನೆಯ ಮಗಳು."

"ಅವರಿಗೆಷ್ಟು ಜನ ಮಕ್ಕಳು."

"ಇಬ್ಬರು ಹೆಣ್ಣು ಮಕ್ಕಳು. ಇಬ್ಬರು ಗಂಡುಮಕ್ಕಳು. ದೊಡ್ಡ ಹುಡುಗಿಗೆ ಮದುವೆಯಾಗಿದೆ. ದೊಡ್ಡ ಮಗ ಹೈಸ್ಕೂಲಿನಲ್ಲಿ ಓದುತ್ತಿದ್ದಾನೆ. ಸರಸೂ ಲೋವರ್‌ಸೆಕೆಂಡರಿ ಪಾಸುಮಾಡಿದಳು. ಮುಂದೆ ಹೆಣ್ಣು ಮಕ್ಕಳಿಗೇಕೆ ಹೈಸ್ಕೂಲು ವಿದ್ಯೆ ಎಂದು ಸ್ಕೂಲು ಬಿಡಿಸಿದರು. ಹುಡುಗಿ ಲಕ್ಷಣವಾಗಿದ್ದಾಳೆ ತುಂಬ ಜಾಣೆ."

"ಸಂತೋಷ ಸ್ವಾಮಿ. ದಯವಿಟ್ಟು ಅವರನ್ನು ಕರೆದುಕೊಂಡು ಬನ್ನಿ. ನಮ್ಮ ಹುಡುಗ ಊರಿಗೆ ಬರುತ್ತಲೇ ಜಾತಕ ಗುರುತು ಹಾಕಿಸಿ ಕಳಿಸಿಕೊಡುತ್ತೇನೆ."

"ಅಷ್ಟೇಕೆ ತೊಂದರೆ. ಕೊಟ್ಟರೆ ನಾನೇ ಗುರುತು ಹಾಕಿಕೊಂಡು ಹೋಗುತ್ತೇನೆ,"

"ಆಗಬಹುದು."

ಎಂದು ಚೌಡಪ್ಪನವರು ತಮ್ಮ ಜಾತಕದ ಪುಸ್ತಕ ತೆಗೆದು ಶ್ರೀಕಂಠಯ್ಯನವರ ಕೈಯಲ್ಲಿಟ್ಟರು. ಶ್ರೀಕಂಠಯ್ಯನವರು ಮಹಾಬಲನ ಜಾತಕ ಗುರುತು ಹಾಕಿಕೊಂಡು ಪುಸ್ತಕವನ್ನು ಅಲ್ಲಿಯೇ ಹಿಂದಿರುಗಿಸಿದರು.

"ಈ ಸಂಬಂಧ ಕೂಡಿದರೆ ನನಗೆ ಬಹಳ ಸಂತೋಷವಾಗುತ್ತದೆ."

"ಆಗಲಿ. ಎಲ್ಲಾ ದೈವೇಚ್ಛೆ. ಋಣಾನುಬಂಧ ಹೇಗಿದೆಯೋ ನೋಡೋಣ."

ಎಂದು ಚೌಡಪ್ಪನವರು ಹೇಳಿದರು.

ಮಹಾಬಲ ಪ್ರವಾಸ ಮುಗಿಸಿಕೊಂಡು ಹುರುಪಿನಿಂದ ಹಿಂದಿರುಗಿದ. ಅವನು ಊರಿಗೆ ಬಂದ ಮಾರನೆಯ ದಿನವೇ ಗುಂಡೂರಾಯರು ಶ್ರೀಕಂಠಯ್ಯನವರಿಗೆ ಕಾಗದ ಬರೆದು ಹಾಕಿದರು.

ಪ್ರತಿದಿನ ಗುಂಡೂರಾಯರು ಶ್ರೀಕಂಠಯ್ಯನವರ ಮಾರುತ್ತರ ನಿರೀಕ್ಷಿಸುವುದಕ್ಕಾರಂಭಿಸಿದರು. ಒಂದು ವಾರ ಕಳೆದುಹೋಗಿದ್ದರೂ ಉತ್ತರ ಬಂದಿರಲಿಲ್ಲ.

ಒಂದು ಮಧ್ಯಾಹ್ನ ಗುಂಡೂರಾಯರ ಕೈಗೆ ತಾರು ಬಂತು. ಅನಂತ ರಾಮಯ್ಯನವರೊಂದಿಗೆ ಅದೇ ರಾತ್ರಿ ಹೊರಟು ಮಾರನೆಯ ಬೆಳಿಗ್ಗೆ ಬೆಂಗಳೂರು ತಲಪುವುದಾಗಿ ಶ್ರೀಕಂಠಯ್ಯನವರು ತಿಳಿಸಿದ್ದರು.

ಗುಂಡೂರಾಯರು ತಾರಿನ ಸುದ್ದಿ ಹೇಳುವುದಕ್ಕೆ ಬಂದಾಗ ಚೌಡಪ್ಪನವರು

"ಗುಂಡೂ, ಅವರು ಇಳಿದುಕೊಳ್ಳುವುದಕ್ಕೆ ವ್ಯವಸ್ಥೆ."

"ನನ್ನ ಮನೆಯಲ್ಲಿ ಇಳಿಸಿಕೊಳ್ಳುತ್ತೇನೆ."

"ಸರಿ. ಅವರನ್ನು ಮಧ್ಯಾಹ್ನಾನಂತರ ಕರೆದುಕೊಂಡು ಬರುವೆಯಷ್ಟೆ."

"ಮೂರುಗಂಟೆ ತನಕ ರಾಹುಕಾಲವಿದೆ. ಅದು ಕಳೆದಮೇಲೆ ನಾಲ್ಕು—ನಾಲ್ಕುವರೆಗೆ ಕರೆದುಕೊಂಡು ಬರುತ್ತೇನೆ."

"ನನ್ನ ಮನೆಯಲ್ಲಿ ಹೆಣ್ಣುದಿಕ್ಕೇ ಇಲ್ಲವಲ್ಲಯ್ಯಾ. ಸೊಸೆ, ಬೀಗಿತ್ತಿ ಬಂದರೆ ಅವರನ್ನು ಸ್ವಾಗತಿಸುವವರು ಯಾರು ?"

"ನಮ್ಮ ಮನೆಯವರನ್ನು, ನನ್ನ ಸೊಸೆಯನ್ನ ಕಳಿಸಿಕೊಡುತ್ತೇನೆ."

"ಎಲ್ಲಾದಕ್ಕೂ ನಿನ್ನೇ ಹಿಂಸೆ ಮಾಡಬೇಕಪ್ಪಾ."

"ಇಂಥ ಹಿಂಸೆ ನೂರಾದರೂ ಚಿಂತೆಯಿಲ್ಲ ಮಾರಾಯ."

ಎಂದು ಹೇಳಿದರು.

ಚೌಡಪ್ಪನವರಿಗೆ ಅಷ್ಟರಿಂದಲೇ ತೃಪ್ತಿಯಾಗಲಿಲ್ಲ. ಸಂಜೆ ತಾವೇ ಗುಂಡೂರಾಯರ ಮನೆಗೆ ಹೋಗಿ ಅವರ ಕುಟುಂಬಕ್ಕೆ ವಿನಂತಿ ಮಾಡಿಕೊಂಡರು.

ಯಾವ ಕೆಲಸವನ್ನೂ ಅರೆಮನಸ್ಸಿನಿಂದ ಮಾಡುವುದು ಗುಂಡೂರಾಯರ ಜಾಯಮಾನಕ್ಕೇ ಬಂದಿರಲಿಲ್ಲ. ಬೆಳಿಗ್ಗೆ ತಾವೇ ಬೇಗ ಎದ್ದು ಒಲೆ ಉರಿಹಾಕಿ ನೀರು ಕಾಯಿಸಿ, ಮಗನನ್ನು ಸ್ಟೇಷನ್ನಿಗೆ ಕಳುಹಿಸಿ ಅತಿಥಿಗಳ ದಾರಿ ನೋಡುತ್ತ ನಿಂತರು.

ಶ್ರೀಕಂಠಯ್ಯನವರು ತಾರು ಕೊಟ್ಟಿದ್ದಂತೆ ಅನಂತರಾಮಯ್ಯ, ಅವರ ಹೆಂಡತಿ, ಮಗಳೂ, ಚಿಕ್ಕ ಮಗನೊಂದಿಗೆ ಬಂದಿಳಿದರು. ಅತಿಥಿಗಳ ಪರಿಚಯವಾಯಿತು. ಗುಂಡೂರಾಯರು ನಿಂತುಕೊಂಡು ಉಪಚರಿಸಿ ಅನಂತರಾಮಯ್ಯನವರ ಸ್ನಾನ, ಉಪಾಹಾರಾದಿ ವ್ಯವಸ್ಥೆ ನೋಡಿಕೊಂಡರು.

"ಜಾತಕ ತೋರಿಸಿದಿರಾ ಶ್ರೀಕಂಠಯ್ಯನವರೇ"

ಎಂದು ಗುಂಡೂರಾಯರು ಕೇಳಿದರು.

"ತೋರಿಸಿದೆ. ಸೊಗಸಾಗಿದೆ. ಆದರ್ಶದಾಂಪತ್ಯವಾಗುತ್ತದೆಂದು ಜ್ಯೋತಿಷ್ಕರು ಹೇಳಿದರು. ಸಂಪ್ರದಾಯಾನುಸಾರವಾಗಿ ಈ ಮಾತು ಹೇಳುತ್ತಿದ್ದೇನೆಂದು ಭಾವಿಸಬೇಡಿ. ಹೆಣ್ಣಿನ ಜಾತಕ ತಂದಿದ್ದೇನೆ—ನೀವೇ ನೋಡಿಸಿ ತಿಳಿದುಕೊಳ್ಳಿ."

"ನಿಮ್ಮ ಮಾತಿನಲ್ಲಿ ನಮಗೆ ಅಪನಂಬಿಕೆಯಿದ್ದರಲ್ಲವೇ ನಾವು ಬೇರೆಯವರಿಗೆ ಜಾತಕ ತೋರಿಸುವುದು."

"ಹಾಗಲ್ಲ ಸ್ವಾಮಿ. ನಿಮ್ಮ ಮನಸ್ಸಿಗೂ ತೃಪ್ತಿಯಾಗಬೇಕು."

"ನೋಡಿ ಸ್ವಾಮಿ. ಹೆಣ್ಣಿನವರು ಗಂಡಿನವರು ಮನಸ್ಸು ಶುದ್ಧವಾಗಿ

ಟ್ಟುಕೊಂಡು ಸಂಬಂಧ ಬೆಳಸಿದರೆ ದೈವಸಹಾಯ ತಾನಾಗಿ ಒದಗುತ್ತದೆ. ನಮ್ಮ ನಮ್ಮ ಆತ್ಮ ಸಂಸ್ಕೃತಿ ಮಾಡಲಾಗದುದನ್ನು ಜಾತಕ ಮಾಡಬಹುದೇ ಹೇಳಿ. ಅದೂ ಅಲ್ಲದೆ ನೂರಕ್ಕೆ ತೊಂಭತೊಂಭತ್ತು ಜಾತಕಗಳು ತಪ್ಪು ಬರೆಯಲ್ಪಟ್ಟಿರುತ್ತವೆ. ಅದನ್ನೇಕೆ ಅವಲಂಬಿಸಬೇಕು."

"ಚೌಡಪ್ಪನವರು ಏನು ಅಪ್ಪಣೆಕೊಡಿಸುತ್ತಾರೋ ?"

"ದೇವರಂಥ ಮನುಷ್ಯ. ಸಣ್ಣಪುಟ್ಟ ವಿಷಯಗಳಿಗೆ ಅವರು ತಲೆ ಕೆಡಿಸಿಕೊಳ್ಳುವುದೇ ಇಲ್ಲ."

"ನಮ್ಮ ಮಗೂ ಒಳ್ಳೆಯ ಮನೆ ಸೇರತ್ತೇಂತ ನಮಗೆ ತೃಪ್ತಿ."

"ಆದರಲ್ಲಿ ಏನೂ ಸಂದೇಹವೇ ಇಲ್ಲ ಸ್ವಾಮಿ. ಹುಡುಗನೂ ತುಂಬ ಸಂಭಾವಿತ."

"ವರೋಪಚಾರದ ವಿಷಯ ಹೇಳಲೇ ಇಲ್ಲವಲ್ಲಾ. ನಾನು ಬಡವ. ಚೌಡಪ್ಪನವರ ಘನತೆಗನುಗುಣವಾಗಿ ಮಾಡುವ ಯೋಗ್ಯತೆ ದೇವರು ಕೊಟ್ಟಿಲ್ಲ. ಆದರೆ ನಾನು ಯಾವದಕ್ಕೂ ಕಡಿಮೆಮಾಡಬೇಕೆಂದಿಲ್ಲ. ನನ್ನ ಶಕ್ತಿ ತಿಳಿದುಕೊಂಡು ತಾವು ಏನು ಹೇಳಿದರೂ ಮಾಡುವುದಕ್ಕೆ ಸಿದ್ಧನಾಗಿದ್ದೇನೆ."

ಎಂದು ಅನಂತರಾಮಯ್ಯನವರು ಹೇಳಿದರು. ಗುಂಡೂರಾಯರು ಸ್ವಲ್ಪ ವಿಚಾರಮಾಡಿ

"ಅನಂತರಾಮಯ್ಯನವರೇ, ಚೌಡಪ್ಪನವರ ಪರಿಚಯ ನಿಮಗಿಲ್ಲ. ಈಗಾಗುತ್ತದೆ—ನಿಮಗೇ ತಿಳಿಯುತ್ತದೆ. ವರೋಪಚಾರ—ವರದಕ್ಷಿಣೆ ಸುದ್ದಿ ಎತ್ತಿದರೆ ಅವರು ಕಿಡಿಕಿಡಿಯಾಗುತ್ತಾರೆ. ನಿಮಗೆ ಏನು ಸಂತೋಷವೋ ಅದನ್ನು ನೀವು ಮಾಡಿ, ಅವರಿಗೇನು ಸಂತೋಷವೋ ಮಾಡುತ್ತಾರೆ. ಅಲ್ಪವಾದ ಹಣಕಾಸಿನ ಮಾತು ಬಂದು ಮಧುರಬಾಂಧವ್ಯಕ್ಕೆ ಅಡ್ಡಿಯಾಗದಿರಲಿ."

ಅನಂತರಾಮಯ್ಯನವರ ಆನಂದಕ್ಕೆ ಪಾರವೇ ಇಲ್ಲ. ದೊಡ್ಡ ಮಗಳ ಮದುವೆಯಲ್ಲಾದ ಹಗರಣ, ಬೀಗರ ಸುಲಿಗೆಸ್ವಭಾವ ಕಂಡು ಅವರ ಮೈಯ್ಯಲ್ಲಿ ನಡುಕಹುಟ್ಟಿತ್ತು. ಗುಂಡೂರಾಯರ ಆಶ್ವಾಸನ ಅವರಿಗೆ ಧೈರ್ಯ, ಶಕ್ತಿಗಳನ್ನಿತ್ತವು.

ಅನಂತರಾಮಯ್ಯನವರನ್ನು ಕರೆದುಕೊಂಡು ಶ್ರೀಕಂಠಯ್ಯನವರು ಪೇಟೆಕಡೆ ಸುತ್ತಾಡಿಕೊಂಡು ಬಂದರು. ಅವರು ಬರುವ ವೇಳೆಗೆ ಎಲೆ ಹಾಕಲಾಗಿತ್ತು. ಇಬ್ಬರೂ ಸ್ನಾನಮಾಡಿದರು. ಪುಷ್ಕಳ ಭೋಜನವೂ ಆಯಿತು. ಗುಂಡೂರಾಯರ ಹೆಂಡತಿ ಅಂಬುಜಮ್ಮ ಶುಭಸೂಚಕವಾಗಿ ಪಾಯಸದ ಅಡಿಗೆ ಮಾಡಿ ಬಡಿಸಿದ್ದರು.

ಅಂಬುಜಮ್ಮ ಊಟಮುಗಿಸಿಕೊಂಡು ಸೊಸೆಯೊಂದಿಗೆ ಚೌಡಪ್ಪ ನವರ ಮನೆಗೆ ಹೋದರು.

ರಾಹುಕಾಲ ಕಳೆದ ಮೇಲೆ ಗುಂಡೂರಾಯರು ಎಲ್ಲರನ್ನೂ ಕರೆದು ಕೊಂಡು ಚೌಡಪ್ಪನವರ ಮನೆಗೆ ಹೋದರು.

ಪರಸ್ಪರ ಪರಿಚಯವಾಯಿತು. ಚೌಡಪ್ಪನವರು ಅತಿಥಿಗಳಿಗೆ ಹಾರ್ದಿ ಕವಾಗಿ ಸ್ವಾಗತ ಬಯಸಿದರು.

ತೊಟ್ಟಿಯಲ್ಲಿ ಜಮಖಾನಾ ಹಾಸಿ, ದಿಂಬುಗಳನ್ನಿಟ್ಟು ಕೂಡುವ ವ್ಯವಸ್ಥೆ ಮಾಡಲಾಗಿತ್ತು. ಅಂದಿನ ವ್ಯವಸ್ಥೆಯ ಜವಾಬ್ದಾರಿ ನಾಣಿ ವಹಿಸಿಕೊಂಡಿದ್ದ.

ಅಂಬುಜಮ್ಮ ಅನಂತರಾಮಯ್ಯನವರ ಹೆಂಡತಿ ಮಗಳನ್ನು ಒಳಕ್ಕೆ ಕರೆದುಕೊಂಡು ಹೋದರು. ಅವರ ಕೊನೆಯ ಮಗ ಕೇಶವ ಬಂದು ತಂದೆಯ ಬಳಿ ಕುಳಿತ.

ಲೋಕಾಭಿರಾಮವಾಗಿ ಮಾತುಕತೆಯಾಯಿತು. ಸ್ವಲ್ಪ ಹೊತ್ತು, ಹೋದ ಮೇಲೆ ಗುಂಡೂರಾಯರು

"ಏನಯ್ಯಾ—ಕಾಫಿಗೀಫಿ ಕೊಡುತ್ತೀಯೋ,—ಬರೀ ಬಾಯಿ ಉಪಚಾರದಲ್ಲಿ ಎಲ್ಲಾ ಮುಗಿಸಿಬಿಡುತ್ತೀಯೋ."

ಎಂದರು.

ನಾಣಿ ಎಲ್ಲರಿಗೂ ತಿಂಡಿ ಕಾಫಿ ತಂದುಕೊಟ್ಟ. ಒಳಗೆ ಉಪಚಾರ ಮಾಡಿ ಅಂಬುಜಮ್ಮ, ಶಂಕರಮ್ಮನವರಿಗೂ ಸರಸೂಗೂ ಉಪಹಾರ ಮಾಡಿಸಿದರು.

ಗುಂಡೂರಾಯರು ಮಹಾಬಲನನ್ನು ಹತ್ತಿರ ಕರೆದು ಕೂಡಿಸಿ ಕೊಂಡು

"ಇವನೇ ಸ್ವಾಮಿ—ನಿಮ್ಮ ಅಳಿಯ ಆಗುವವನು ಮಹಾಬಲ."

ಎಂದರು. ಮಹಾಬಲ ಅನಂತರಾಮಯ್ಯನವರಿಗೆ ಕೈಮುಗಿದ.

ಅಂಬುಜಮ್ಮ ಬಾಗಿಲಿನಲ್ಲಿಯೇ ನಿಂತುಕೊಂಡು ತಮ್ಮ ಸೊಸೆಯ ಜತೆಮಾಡಿ ನರಸುವನ್ನು ಹೊರಗೆ ಕಳುಹಿಸಿಕೊಟ್ಟರು. ಇಬ್ಬರೂ ಒಂದೆಡೆ ಕುಳಿತಮೇಲೆ ಗುಂಡೂರಾಯರು

"ಏನಾದರೂ ಹಾಡು ಹೇಳೇ ತಾಯಿ"

ಎಂದರು. ನರಸೂ ಒಂದೆರಡು ಕೀರ್ತನೆ ಹಾಡಿದಳು. ಗುಂಡೂರಾಯರು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ

"ಸಂಗೀತಪಾಠ ಮಾಡಿಸಿದ್ದೀರಿ."

"ಏನೋ ಅಲ್ಪ ಸ್ವಲ್ಪ."

"ಚೆನ್ನಾಗಿಯೇ ಹಾಡುತ್ತಾಳಲ್ಲಾ ಸ್ವಾಮಿ. ಶ್ರುತಿಬದ್ಧವಾದ ಶಾರೀರ."

"ಸರಿಯಾಗಿ ಪಾಠ ಹೇಳಿಸಲು ಹಾಸನದಲ್ಲಿ ಅವಕಾಶವಿಲ್ಲ. ಒಳ್ಳೆಯ ಸಂಗೀತ ಉಪಾಧ್ಯಾಯರು ಸಿಕ್ಕುವುದಿಲ್ಲ."

ಗುಂಡೂರಾಯರು ನರಸು ಕೈಯಲ್ಲಿ ಇನ್ನು ಎರಡು ಕೀರ್ತನೆ, ಒಂದು ದೇವರನಾಮ ಹಾಡಿಸಿದರು.

ಹಾಡಿದ್ದು ಮುಗಿಯಲು ಅನಂತರಾಮಯ್ಯನವರು ಮಗಳನ್ನು ಹತ್ತಿರ ಕರೆದು

"ಎಲ್ಲರಿಗೂ ನಮಸ್ಕಾರ ಮಾಡಮ್ಮಾ"

ಎಂದರು.

ನರಸು ಮೊದಲು ಚೌಡಪ್ಪನವರಿಗೆ ನಮಸ್ಕಾರಮಾಡಿ ತರುವಾಯ ಉಳಿದವರಿಗೆ ನಮಸ್ಕಾರಮಾಡಿದಳು. ಗುಂಡೂರಾಯರು ಅವಳನ್ನು ದ್ದೇಶಿಸಿ

"ಬಲು ಜಾಣೆ ಕಣೇ ತಾಯಿ ನೀನು. ಮೊದಲು ನಿನ್ನ ಮಾವನವರಿಗೇ ನಮಸ್ಕಾರ ಮಾಡಿದೆಯಲ್ಲಾ"

ಎಂದರು. ನರಸು ನಸುನಾಚಿ ಒಳಕ್ಕೆ ಹೋದಳು.

ನಾಣಿ ಎಲ್ಲರಿಗೂ ತಾಂಬೂಲ ತಂದಿತ್ತ.

ಅನಂತರಾಮಯ್ಯನವರು

"ದೊಡ್ಡ ಮನಸ್ಸುಮಾಡಿ ನನ್ನ ಮಗುವನ್ನು ತಮ್ಮ ಮಗು ಮಾಡಿಕೊಂಡು ನನ್ನ ಕನ್ಯಾಸೆರೆ ಬಿಡಿಸಬೇಕು"

ಎಂದರು. ಚೌಡಪ್ಪನವರು ಅವರಿಗೆ ಉತ್ತರ ಕೊಡಲಿಲ್ಲ. ಅವರ ಹೃದಯದಲ್ಲಿ ಬಗೆಬಗೆಯ ಭಾವನೆಗಳು ಲಾಸ್ಯವಾಡತೊಡಗಿದವು.

ಅತಿಥಿಗಳನ್ನು ಕರೆದುಕೊಂಡು ಗುಂಡೂರಾಯರು ಮನೆಗೆ ಹಿಂದಿರುಗಿದರು.

ಅನಂತರಾಮಯ್ಯನವರಿಗೂ, ಶ್ರೀಕಂಠಯ್ಯನವರಿಗೂ ಕಳವಳ. 'ಚೌಡಪ್ಪನವರು ಏನು ಹೇಳುತ್ತಾರೆಯೋ ?—ಸದ್ಯಕ್ಕೆ ಬೇಡ ಎಂದರೆ ಏನುಮಾಡುವುದು.'

ಶ್ರೀಕಂಠಯ್ಯನವರು ಸೂಕ್ಷ್ಮವಾಗಿ ಗುಂಡೂರಾಯರನ್ನು ಕೇಳಿದರು.

"ನಾವು ಯಾವಾಗ ಪ್ರಯಾಣ ಮಾಡಬಹುದು."

"ಇನ್ನೂ ಬರುವುದಕ್ಕೇ ಇಲ್ಲ-ಹೊರಡುವುದಕ್ಕೆ ಇಷ್ಟು ಅವಸರವೇ?"

"ನನಗೆ ರಜವಿಲ್ಲ ಸ್ವಾಮಿ. ಎರಡು ದಿವಸ ಮಾತ್ರ ರಜಾ ತೆಗೆದುಕೊಂಡು ಬಂದಿದ್ದೇನೆ. ಬೇಗ ಕಳುಹಿಸಿಕೊಟ್ಟರೆ ಅನುಕೂಲವಾಗುತ್ತದೆ. ಸರ್ಕಾರಿ ತಾಪೇದಾರಿ, ಸ್ವಲ್ಪ ಹೆಚ್ಚು ಕಡಿಮೆಯಾದರೂ ಪ್ರಾಣಕ್ಕೇ ಬರುತ್ತದೆ."

"ಅನಂತರಾಮಯ್ಯನವರೇ, ನಿಮ್ಮ ಮಗಳ ಅಭಿಪ್ರಾಯ ಕೇಳಲೇ ಇಲ್ಲವಲ್ಲಾ."

"ಮಗು. ಅದಕ್ಕೇನು ಗೊತ್ತಾಗುತ್ತೆ ಸ್ವಾಮಿ."

"ಆ ತಪ್ಪು ಮಾತ್ರ ಮಾಡಬೇಡಿ. ಈ ಕಾಲದ ಮಕ್ಕಳಿಗೆ ಗೊತ್ತಾಗುವಷ್ಟು ಹಿಂದಿನಕಾಲದ ಹಿರಿಯರಿಗೆ ಗೊತ್ತಾಗುವದಿಲ್ಲ. ನಾಳೆ ಮಹಾಬಲನ ಜತೆ ಸಂಸಾರ ಮಾಡುವವಳು ಅವಳು. ಅವಳ ಮನಸ್ಸು ಹೇಗಿದೆಯೆಂದು ತಿಳಿದುಕೊಳ್ಳಬೇಕಾದುದು ನಮ್ಮ ಕರ್ತವ್ಯ."

"ಆಗಲಿ—ಕೇಳಿ ನೋಡುತ್ತೇನೆ."

ಎಂದು ತಾವು ಇಳಿದುಕೊಳ್ಳಲು ಗುಂಡೂರಾಯರು ಕೊಟ್ಟಿದ್ದ ರೂಮಿನಲ್ಲಿ ಕುಳಿತುಕೊಂಡು ಹೆಂಡತಿ, ಮಗಳನ್ನು ಕರೆಸಿದರು.

"ಏನು ಹೇಳುತ್ತೀ."

"ನಾನೇನು ಹೇಳಲಿ." ಎಂದರು ಶಂಕರಮ್ಮಾ.

"ಅಳಿಯ ಒಪ್ಪೊ ನಿನಗೆ"

"ಲಕ್ಷಣವಾಗಿದ್ದಾರೆ. ಜನ ತುಂಬ ಒಳ್ಳೆಯವರ ಹಾಗೆ ಕಾಣು ತ್ತಾರೆ. ಮನೆಯಲ್ಲಿ ಅತ್ತಿಗೆ ನಾದಿನಿಯರ ಕಾಟವೂ ಇಲ್ಲ."

"ಏನೇ ತಾಯೀ—ನರಸೂ, ನೀನು ಏನು ಹೇಳುತ್ತೀಯಮ್ಮ."

"ಹೋಗಣ್ಣಾ"

ಎಂದು ನಾಚಿ ನರಸು ಒಳಕ್ಕೆ ಓಡಿಹೋದಳು.

"ನರಸೂನ ಕೇಳಿದೆಯಾ ?"

"ಅವಳಿಗೆ ಮನಸ್ಸಿದೆ. ಉತ್ತರ ಈಗಲೇ ಹೇಳುತ್ತಾರಂತೋ, ನಾವು ಊರಿಗೆ ಹೋದ ಮೇಲೆ ಬರೆದು ತಿಳಿಸುತ್ತಾರಂತೋ ?"

"ನಾಳೆ ಬೆಳಿಗ್ಗೆ ಎಲ್ಲಾ ಗೊತ್ತಾಗಬಹುದು. ನಾಳೆ ರಾತ್ರಿಗೇ ನಾವು ಪ್ರಯಾಣ ಮಾಡೋಣ."

"ಪೇಟೆಕಡೆ ಬೆಳಿಗ್ಗೆ ನೀವು ಸ್ವಲ್ಪ ಹೋಗಿಬರಬೇಕು."

"ಏಕೆ ?"

"ಅಂಬುಜಮ್ಮನವರಿಗೆ, ಅವರ ಸೊಸೆಗೆ ಒಂದೊಂದು ಕಣ ಕೊಡ ಬೇಡವೇ ?"

"ತಂದುಕೊಡುತ್ತೇನೆ. ಬೀಗರಮನೆಗೆ ನಾವು ಏನಾದರೂ ತೆಗೆದು ಕೊಂಡು ಹೋಗಬೇಕೇನು ?"

"ಈಗೇನೂ ಇಲ್ಲ. ಲಗ್ನಪತ್ರಿಕೆ ಮಾಡಿಸುವಾಗ ಪಂಚೆ ಕೊಡ ಬೇಕಾಗುತ್ತದೆ."

"ಚೌಡಪ್ಪನವರ ಮನೆಯಲ್ಲಿಯೂ ಇದೇ ಮಾತುಕತೆ ನಡೆಯು ತ್ತಿತ್ತು. ನಾಣಿಯ ಅಭಿಪ್ರಾಯವೇನೆಂದು ಮಹಾಬಲ ಕೇಳಿದ.

"ನಾನೇನು ಹೇಳಲಯ್ಯ. ಮದುವೆಯಾಗೋನು ನೀನು."

"ಇರಲಿ ಹೇಳೋ. ಇಲ್ಲದ ಜಂಬ ಮಾಡಬೇಡ."

"ಮದುವೆ ಮಾಡಿಕೊಳ್ಳುವುದು ಖಂಡಿತವಾದರೆ ಈ ಹುಡುಗಿ ಏನೂ ಅಡ್ಡಿಯಿಲ್ಲ. ಜನರೂ ತುಂಬ ಒಳ್ಳೆಯವರ ಹಾಗೆ ಕಾಣುತ್ತಾರೆ."

ನಾಣಿಯ ಮೂಲಕ ಚೌಡಪ್ಪನವರು ಮಗನ ಅಭಿಪ್ರಾಯ ತಿಳಿದು, ಬೆಳಿಗ್ಗೆ ಎಲ್ಲರೂ ತಮ್ಮ ಮನೆಗೇ ಉಪಹಾರಕ್ಕೆ ಬರಬೇಕೆಂದು ಹೇಳಿಕಳಿಸಿದರು.

ಬೆಳಿಗ್ಗೆ ಏನು ಉತ್ತರ ದೊರೆಯುವುದೋ ಎಂದು ಅನಂತರಾಮಯ್ಯನವರೂ ಶಂಕರಮ್ಮನವರೂ ಯೋಚಿಸಿದರು.

ಅತಿಥಿಗಳನ್ನು ಕರೆದುಕೊಂಡು ಬರಲು ಬೆಳಿಗ್ಗೆ ಚೌಡಪ್ಪನವರು ನಾಣಿಯನ್ನು ಕಳಿಸಿದರು. ಅವನ ಜತೆಗೆ ಗುಂಡೂರಾಯರೂ ಶ್ರೀಕಂಠಯ್ಯನವರೂ, ಅನಂತರಾಮಯ್ಯನವರೂ ಅವರ ಮಗ ಹೊರಟರು.

ಕಾಫಿ, ಉಪ್ಪಿಟ್ಟು, ಬಾಳೆಯಹಣ್ಣಿನ ಸಮಾರಾಧನೆಯಾಯಿತು.

ಗುಂಡೂರಾಯರು ಮಾತು ಆರಂಭಿಸಿ

"ಚೌಡಪ್ಪ, ಅನಂತರಾಮಯ್ಯನವರು ಸರಕಾರಿ ಅಧಿಕಾರದಲ್ಲಿದ್ದಾರೆ. ಅವರಿಗೆ ರಜಾ ಸಿಕ್ಕುವುದು ಕಷ್ಟ. ರಾತ್ರೀಗೆ ಪ್ರಯಾಣ ಮಾಡಬೇಕೆಂದು ಇದ್ದಾರೆ."

"ಹೇಗೆ ಸ್ವಾಮಿ ಆಗುತ್ತೆ. ನಮ್ಮ ಮನೆಯಲ್ಲಿ ಒಪ್ಪತ್ತು ಊಟ ಮಾಡಿಕೊಂಡು ಹೋಗಬೇಡವೇ ?"

"ಊಟ ಆಗುತ್ತೆ. ತಮ್ಮ ವಿಶ್ವಾಸ ಮುಖ್ಯ"

ಎಂದು ಅನಂತರಾಮಯ್ಯನವರು ನುಡಿದರು.

"ಮಹಾಬಲ ಮನೆಯಲ್ಲಿಲ್ಲವೇ" ಎಂದು ಗುಂಡೂರಾಯರು ಕೇಳಿದರು.

"ಇದ್ದಾನೆ. ಕರೆಯಲೇನು ?"

"ಬೇಡ. ಅವನು ಏನು ಹೇಳಿದ. ಏನು ಇತ್ಯರ್ಥ ಮಾಡಿದೆ."

"ನನ್ನದೇನಪ್ಪಾ ಇತ್ಯರ್ಥ—ನೀನು ಹೇಗೆ ಹೇಳಿದರೆ ಹಾಗೆ."

"ಒಳ್ಳೆಯ ಜಾಣನಯ್ಯಾ ನೀನು. ಎಲ್ಲಾ ಜವಾಬ್ದಾರಿ ನನ್ನ ಮೇಲೆ ಹಾಕಿಬಿಡು."

"ಇನ್ನು ಯಾರ ಮೇಲೆ ಹಾಕಲಿ."

ಎಂದು ಅನಂತರಾಮಯ್ಯನವರ ಕಡೆ ತಿರುಗಿ

"ನೋಡಿ ಸ್ವಾಮಿ. ನಾನು ಶುದ್ಧ ಹಳ್ಳಿಯ ಮನುಷ್ಯ. ಚೇಳೂರಿ

ನಲ್ಲಿ ರೈತಾಪಿ ಮಾಡಿಕೊಂಡಿದ್ದೆ. ನನ್ನ ಬೆಂಗಳೂರಿಗೆ ಬರಮಾಡಿಕೊಂಡು, ಈ ಮನೆಮಾಡಿಕೊಟ್ಟು ನನ್ನ ನಾಗರಿಕನನ್ನಾಗಿ ಮಾಡಿದವನು ಇವನು. ಈ ಜವಾಬ್ದಾರಿ ಈಗ ಗುಂಡೂ ಹೊರದೆ ಇನ್ನು ಯಾರು ಹೊರಬೇಕು ಹೇಳಿ."

ಎಂದರು. ಗೆಳೆಯರ ಅನ್ಯೋನ್ಯ, ಹಾಸ್ಯ ಪರಿಹಾಸ್ಯ ಕಂಡು ಅನಂತರಾಮಯ್ಯನವರು ಸಂತೋಷಭರಿತರಾದರು.

ಕ್ಷಣಕಾಲ ಯಾರೂ ಮಾತನಾಡಲಿಲ್ಲ. ವಾತಾವರಣ ಸ್ವಲ್ಪ ಗಂಭೀರ ವಾಯಿತು. ಚೌಡಪ್ಪನವರ ಬಾಯಿಂದ ಏನು ಬರುತ್ತದೋ ಎಂದು ತವಕದಿಂದ ಅನಂತರಾಮಯ್ಯನವರು ಕಾಯುತ್ತಿದ್ದರು. ಚೌಡಪ್ಪನವರು ಗಂಭೀರವಾಗಿ

"ತಾವು ಇಷ್ಟು ದೂರ ದಯೆಮಾಡಿಸಿ, ನನ್ನ ಮನೆಗೆ ತಮ್ಮ ಮಗ ಳನ್ನು ಕೊಡುವುದಕ್ಕೆ ಒಪ್ಪಿದ್ದು ನನ್ನ ಭಾಗ್ಯ. ನಮ್ಮ ವಿಶ್ವಾಸ ಇತೋಪ್ಯ ತಿಶಯವಾಗಿ ವೃದ್ಧಿಯಾಗಲೆಂದೇ ನನ್ನ ಹಾರೈಕೆ."

ಸಂತೋಷಾತಿರೇಕದಿಂದ ಅನಂತರಾಮ್ಯನವರ ಕಣ್ಣುಗಳಲ್ಲಿ ನೀರೇ ಬಂದಿತು.

"ಕೃತಾರ್ಥನಾದೆ. ನನ್ನ ಜನ್ಮ ಪಾವನವಾಯಿತು."

ಎಂದರು. ಶ್ರೀಕಂಠಯ್ಯನವರು ವ್ಯವಹಾರಭಾಗ ಮರೆಯಲಿಲ್ಲ.

"ಲಗ್ನ ಯಾವಾಗ ನಿಶ್ಚಯಿಸೋಣ" ಎಂದು ಕೇಳಿದರು.

"ನಿಮ್ಮ ಅನುಕೂಲ ಹೇಗಿದೆ ?"

"ಅನಂತರಾಮಯ್ಯನವರು ಎಲ್ಲಾ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಈ ಶ್ರಾವಣಕ್ಕೇ ಮುಹೂರ್ತ ಇಡುವುದಕ್ಕೆ ಅವರು ಸಿದ್ಧರಾಗಿದ್ದಾರೆ."

"ನಮ್ಮ ಹುಡುಗ ಈಸಲ ಪರೀಕ್ಷೆಗೆ ಕಟ್ಟಿದ್ದಾನೆ. ಮುಂದಿನ ಶ್ರಾವಣಕ್ಕೆ ಮುಹೂರ್ತ ಇಡಲಾಗುವುದಿಲ್ಲವೇ ?"

"ಸಿದ್ಧತೆಯಾಗಿರುವಾಗಲೇ ಮದುವೆಯಾದರೆ ಅನುಕೂಲ. ಅಲ್ಲದೆ ಜರ್ಾ ಕಳೆದ ಮೇಲೆ ಅನಂತರಾಮಯ್ಯನವರಿಗೆ ವರ್ಗವಾಗುವ ಸಂಭವ ವಿದೆ. ಈಗಲೇ ಮದುವೆಮಾಡಿದರೆ ಜನಸಹಾಯ ಅವರಿಗೆ ಒದಗುತ್ತದೆ."

"ಏನು ಮಾಡುವುದು ಗುಂಡೂ"

ಎಂದು ಚೌಡಪ್ಪನವರು ಕೇಳಿದರು.

"ನಿಶ್ಚಯವಂತೂ ಆದಹಾಗಾಯಿತಲ್ಲ. ಮದುವೆ ಈಗ ಮುಗಿಸಿಬಿಡಬಹುದು. ಬೇಕಾದರೆ ಒಂದೆರಡು ವರ್ಷಬಿಟ್ಟು ಪ್ರಸ್ತದ ಏರ್ಪಾಡು ಇಟ್ಟುಕೊಳ್ಳಬಹುದು. ನೀನು ಹೇಳಿದಹಾಗೆ ಮಹಾಬಲನಿಗೆ ಇಂಟರ್ ಪರೀಕ್ಷೆಯಾದಮೇಲೆ."

ಚೌಡಪ್ಪನವರು ಕ್ಷಣಕಾಲ ಯೋಚಿಸಿ

"ಆಗಬಹುದು. ತಮ್ಮ ಸಂತೋಷ"

ಎಂದು ಒಪ್ಪಿಗೆ ಸೂಚಿಸಿದರು.

ಬೀಗರು ಔತಣದೂಟಮಾಡಿಕೊಂಡು ಹೋಗಬೇಕೆಂದು ಚೌಡಪ್ಪನವರು ಮತ್ತೆ ಸೂಚಿಸಿದರು. ಗುಂಡೂರಾಯರು,

"ಅನಂತರಾಮಯ್ಯನವರು ಅವರ ಕುಟುಂಬ ಈಗ ನನ್ನ ಅತಿಥಿಗಳಾಗಿದ್ದಾರೆ. ರಾತ್ರಿಗೆ ಎಲ್ಲರೂ ನಮ್ಮಲ್ಲಿಯೇ ಊಟಮಾಡೋಣ. ಮುಂದೆ ಇದ್ದೇ ಇದೆಯಲ್ಲಾ ನಿನ್ನ ಔತಣ."

ಎಂದು ನಿರ್ಧರಿಸಿದರು.

ರಾತ್ರಿ ಗುಂಡೂರಾಯರು ಘನವಾದ ಔತಣದ ಏರ್ಪಾಟು ಮಾಡಿ ಎಲ್ಲರನ್ನೂ ಸತ್ಕರಿಸಿದರು. ಅಂಬುಜಮ್ಮನವರು ಚೌಡಪ್ಪನವರ ಬೀಗಿತ್ತಿ, ಸೊಸೆಗೆ ಕಣ ಓದಿಸಿದರು.

ಬೆಳಿಗ್ಗೆ ಗುಂಡೂರಾಯರೂ ಚೌಡಪ್ಪನವರೂ ಸ್ಟೇಷನ್ನಿಗೆ ಹೋಗಿ ಬೀಗರನ್ನು ಕಳುಹಿಸಿಕೊಟ್ಟು ಬಂದರು.

ಚೌಡಪ್ಪನವರು ನಸುನಗುತ್ತಾ

"ಕೊನೆಗೂ ನಿನ್ನ ಮಾತೇ ಸಾಧಿಸಿದೆಯಲ್ಲಾ ಗುಂಡೂ."

"ನಾನೇನು ಸಾಧಿಸಿದೆನಯ್ಯಾ."

"ಮದುವೆ ಈಗ ಬೇಡವೆಂದು ನಾನಿದ್ದೆ. ಈಗಲೇ ನಿಶ್ಚಯ ಮಾಡಿಸಿಬಿಟ್ಟೆಯಲ್ಲಾ"

"ಈಗ ಎಲ್ಲಾ ಚೆನ್ನಾಗಿ ಆಯಿತೋ ಇಲ್ಲವೋ? ಚೌಡಪ್ಪ, ಹೆಣ್ಣು ಹೆತ್ತವರ ಕಷ್ಟಸುಖ ನೀನರಿಯೆ. ಈಗ ನಿಶ್ಚಯಮಾಡಿ ಇನ್ನೂ ಒಂದು ವರ್ಷ ಕಾಯುವುದೆಂದರೆ ಅವರಿಗೆ ಎಷ್ಟು ಕಷ್ಟವಾಗುತ್ತದೆ ವಿಚಾರಮಾಡು.

ಹಾಸನ ಬಿಡುವುದರೊಳಗಾಗಿ ಲಗ್ನಮಾಡಿದರೆ ಅವರಿಗೆ ಸ್ಥಳವಂದಿಗರ ಸಹಾಯ ಸಿಕ್ಕುತ್ತದೆ."

"ಆಗಲಿ ಬಿಡಪ್ಪ. ನನ್ನ ಮನೆಯೂ ಬಿಕೋ ಎನ್ನುತ್ತಿತ್ತು. ಈ ಮಗು ಬಂದು ಇನ್ನು ಅದಕ್ಕೆ ಕಳೆತುಂಬಬೇಕು."

"ಮಹಾಬಲ ಮನಃಪೂರ್ವಕವಾಗಿ ಒಪ್ಪಿದ್ದಾನೆ ತಾನೇ. ನಮ್ಮ ಬಲವಂತಕ್ಕೆ ಒಪ್ಪಿಗೆ ಕೊಟ್ಟಿದ್ದಾನೆಯೋ ?"

"ಅಂತಹದೇನೂ ಇಲ್ಲ. ನಾನು ನಾಣಿಯನ್ನು ವಿಚಾರಿಸು ಎಂದು ಹೇಳಿದ್ದೆ. ಮಹಾಬಲ ತುಂಬ ಸಂತೋಷಪಟ್ಟುಕೊಂಡ ಎಂದು ನಾಣಿ ತಿಳಿಸಿದ."

"ಸದ್ಯ ನಾನು ಬದುಕಿದೆ."

"ಏಕೆ ?"

"ಇದೆಲ್ಲಾ ನನ್ನ ತಂತ್ರ ಎಂದು ನೀನೂ ಮಹಾಬಲ ಎಲ್ಲಿ ಭಾವಿಸುತ್ತೀರೋ ಎಂದು ಯೋಚಿಸುತ್ತಿದೆ."

"ನಿನ್ನ ಜವಾಬ್ದಾರಿ ಇಲ್ಲಿಗೇ ಕಳೆದುಹೋಗಲಿಲ್ಲ ಗುಂಡೂ."

"ಇನ್ನೂ ಏನಿದೆಯಪ್ಪಾ."

"ಹೆಣ್ಣು ಗೊತ್ತುಮಾಡಿಕೊಟ್ಟವನು ನಿಂತುಕೊಂಡು ಮದುವೆ ಮಾಡಿಸಬೇಡವೇನಯ್ಯಾ ? ಅಂಬುಜಮ್ಮನವರ ಉಪಕಾರ ನಾನು ಜನ್ಮ ಜನ್ಮಾಂತರಕ್ಕೂ ತೀರಿಸಲಾರೆ ಗುಂಡೂ. ಅವರಿಲ್ಲದಿದ್ದರೆ ನನ್ನ ಪಾಡು ಬೇಡ."

"ಅವಳ ಸಂತೋಷಕ್ಕೆ ಪಾರವೇ ಇಲ್ಲ ಚೌಡಪ್ಪ. ನಾನೂ ಅವಳೂ ಇಬ್ಬರೂ ನಮ್ಮ ಸುಬ್ಬುಕೃಷ್ಣ ಬೇರೆ—ಮಹಾಬಲ ಬೇರೆ ಎಂದು ತಿಳಿದುಕೊಂಡೇ ಇಲ್ಲ."

ಚೌಡಪ್ಪನವರಿಗೆ ಮಾತು ಹೊರಡಲಿಲ್ಲ. ಅವರ ಹೃದಯ ಕೃತಜ್ಞತೆಯಿಂದ ತುಂಬಿತು.

೧೪

ಮಹಾಬಲ ನಾಣಿ ಇಬ್ಬರ ಪರೀಕ್ಷೆ ಮುಗಿಯಿತು. ತನಗೆ ಈ ವರ್ಷ ಖಂಡಿತ ತೇರ್ಗಡೆಯಾಗುವುದಿಲ್ಲವೆಂದು ಮಹಾಬಲ ಹೇಳಿದ್ದ. ಫಲಿತಾಂಶ

ಹೊರಬಿದ್ದ ಮೇಲೆ ಅವನ ಮಾತು ಸತ್ಯವೆಂದು ಚೌಡಪ್ಪನವರು ತಿಳಿದರು. ನಾಣಿ ತೇರ್ಗಡೆಯಾಗಿದ್ದ.

ಶ್ರಾವಣಮಾಸ ಓಡುತ್ತ ಓಡುತ್ತ ಬಂದಿತು. ಮದುವೆಗೆ ಮುಂಚೆ ಒಂದು ದಿನ ಮುಟ್ಟಿಗೆ ಚೌಡಪ್ಪನವರೂ, ಮಹಾಬಲ ಹಾಸನಕ್ಕೆ ಹೋಗಿ 'ಲಗ್ನಪತ್ರಿಕೆ' ಕಾರ್ಯಮುಗಿಸಿಕೊಂಡು ಬರಬೇಕೆಂದು ಶ್ರೀಕಂಠಯ್ಯನವರಿಂದ ಸಲಹೆ ಬಂತು. ಲಗ್ನಪತ್ರಿಕೆ ಸಮಾರಂಭದ ಖರ್ಚೇಕೆ ಎಂದು ಚೌಡಪ್ಪನವರೂ, ಗುಂಡೂರಾಯರೂ ನಿರ್ಧರಿಸಿ ಮದುವೆಗೆ ಮುಂಚೆ 'ಲಗ್ನಪತ್ರಿಕೆ'ಯ ಶಾಸ್ತ್ರ ಮುಗಿಸಿಬಿಡಿರೆಂದು ಅನಂತರಾಮಯ್ಯನವರಿಗೆ ಕಾಗದ ಬರೆದರು.

ಅನಂತರಾಮಯ್ಯನವರು ಶಕ್ತಿಮೀರಿ ಮದುವೆಯ ವ್ಯವಸ್ಥೆ ಮಾಡಿದರು. ಡಿಸ್ಟ್ರಿಕ್ಟ್ ಆಫೀಸಿನ ಪೂರ್ಣ ಬೆಂಬಲ ಅವರಿಗಿದ್ದುದಲ್ಲದೆ ಊರಿನವರ ಸಹಾಯವೂ ಇತ್ತು. ಶ್ರೀಕಂಠಯ್ಯನವರು ಟೊಂಕ ಕಟ್ಟಿ ಅವರ ನೆರವಿಗೆ ನಿಂತರು.

ಗುಂಡೂರಾಯರು ಅವರ ಸಂಸಾರ, ಚೌಡಪ್ಪನವರು, ಮಹಾಬಲ, ತಿಮ್ಮಮ್ಮನವರು, ನಾಣಿ, ಉಮಾಪತಿ ಮದುವೆಗೆ ಹೋಗುವುದೆಂದು ನಿರ್ಧಾರವಾಯಿತು.

ಉಮಾಪತಿ ಬೀಗರ ವಸತಿಯಲ್ಲಿ ಇಳಿಯದೆ ತನ್ನ ಬಂಧುಗಳೊಬ್ಬರ ಮನೆಯಲ್ಲಿ ಇಳಿದುಕೊಂಡ.

ಮದುವೆ ಸಾಂಗವಾಗಿ ನಡೆಯಿತು. ಅನಂತರಾಮಯ್ಯನವರಿಗೆ ಯಾವ ತೊಂದರೆಯೂ ಆಗದಂತೆ ಚೌಡಪ್ಪನವರು ಪೂರ್ಣ ಸಹಕಾರ ನೀಡಿದರು.

ಮದುವೆ ಮುಗಿದ ಮೇಲೆ ಅನಂತರಾಮಯ್ಯನವರು ಬೀಗರಿಗೂ ಅವರ ಗೆಳೆಯರಿಗೂ

"ಸ್ವಾಮಿ, ಎಲ್ಲಾ ಗಂಡಿನವರೂ ನಿಮ್ಮ ಹಾಗೆ ಇದ್ದರೆ ಹೆಣ್ಣಿನವರು ವರ್ಷಕ್ಕೊಂದು ಮದುವೆ ಬೇಕಾದರೂ ಮಾಡಬಹುದು."

ಎಂದು ಹೇಳಿದರು.

ಚೌಡಪ್ಪನವರೂ ಅವರ ಪರಿವಾರ ಊರಿಗೆ ಹಿಂದಿರುಗಿದರು.

ಹತ್ತಿತು. ತಮ್ಮ ಮನಸ್ಸಿಗೆ ವಿರುದ್ಧವಾಗಿ ವಿಧಿ ಅವನನ್ನು ವ್ಯಾಪಾರ ಕ್ಷೇತ್ರದೆಡೆಗೇ ಒಯ್ಯುತ್ತಿದ್ದುದನ್ನು ಕಂಡುಕೊಂಡರು.

ಮದುವೆ ಮುಗಿಸಿಕೊಂಡು ಬಂದಮೇಲೆ ಮಹಾಬಲ ಮನೆಯಲ್ಲಿ ಹೊತ್ತುಗಳೆಯುತ್ತ ಕುಳಿತ. ಈಗಾಗಲೇ ನಾಲ್ಕಾರು ತಿಂಗಳು ನಿರರ್ಥಕವಾಗಿ ಕಳೆದುಹೋಗಿತ್ತು. ಸ್ಕೂಲು ಸೇರುವ ಯೋಚನೆಯಂತೂ ಇಲ್ಲವೇ ಇಲ್ಲ.

ಒಂದು ದಿನ ಮಗನನ್ನು ಕರೆದು ಚೌಡಪ್ಪನವರು ಕೇಳಿದರು

"ಮುಂದೆ ಏನು ಮಾಡಬೇಕೆಂದು ಯೋಚಿಸಿರುವೆ ಮಹಾಬಲ. ಸ್ಕೂಲಿನ ಸುದ್ದಿಯೆತ್ತುವುದನ್ನೂ ಬಿಟ್ಟುಬಿಟ್ಟೆ."

"ನನಗೆ ಮುಂದೆ ಓದುವ ಇಚ್ಛೆಯಿಲ್ಲ."

"ಹೋಗಲಿ ಬಿಡು. ನಮ್ಮ ಮನೆತನಕ್ಕೆ ವಿದ್ಯೆ ಹತ್ತುವ ಹಾಗೆ ಕಾಣಲಿಲ್ಲ. ಆದರೆ ವೃಥಾ ಹೊತ್ತುಗಳೆಯುವುದರಿಂದ ಏನು ಪ್ರಯೋಜನ. ನಾನು ಜೀವಿಸಿರುವಾಗಲೇ ನೀನು ದಡಸೇರಿದರೆ ನನಗೆ ತೃಪ್ತಿಯಾಗುತ್ತದೆ. ನಿರಾತಂಕವಾಗಿ ಪ್ರಾಣಬಿಡಬಲ್ಲೆ."

"ಮುಂದೇನು ಮಾಡಬೇಕೆನ್ನುವುದನ್ನು ಯೋಚನೆಮಾಡಿದ್ದೇನೆ. ನಿನ್ನಲ್ಲಿ ಹೇಳುವುದಕ್ಕೆ ಹೆದರುತ್ತಿದ್ದೆ."

"ಹೇಳು ಹೆದರಿಕೆ ಏಕೆ? ಮಾಡುವ ಕೆಲಸ ಸಕಾಲದಲ್ಲಿ ಮಾಡಿದರೆ ಒಳ್ಳೆಯದು."

"ಉಮಾಪತಿ ಒಂದು ಸ್ಟೇಷನರಿ, ಜನರಲ್ ಸ್ಟೋರ್ಸ್ ತೆಗೆಯಬೇಕೆಂದಿದ್ದಾನೆ. ನಾನು ಪಾಲುಗಾರನಾಗಿ ಬರುವಹಾಗಿದ್ದರೆ ನನ್ನನ್ನು ತೆಗೆದುಕೊಳ್ಳಲು ಅವನು ಸಿದ್ಧನಾಗಿದ್ದಾನೆ."

"ಅದರ ಬಂಡವಾಳವೆಷ್ಟು?"

"ಐದು ಸಾವಿರ. ಉಮಾಪತಿ ಅರ್ಧಕೊಡುತ್ತಾನೆ, ನಾನು ಅರ್ಧ ಕೊಡಬೇಕಾಗುತ್ತದೆ."

"ನೀನೂ ಉಮಾಪತಿ ಕೂಡಿ ವ್ಯಾಪಾರಮಾಡುವುದಕ್ಕೆ ನನ್ನ ಅಭ್ಯಂತರವಿಲ್ಲ. ಆದರೆ ನಿನ್ನ ಮನಸ್ಸೇ ಚೆನ್ನಾಗಿ ಶೋಧನೆಮಾಡಿ ನೋಡು. ವ್ಯಾಪಾರದಲ್ಲಿ ನಿನಗೆ ನಿಜವಾದ ಆಸಕ್ತಿಯಿರುವುದಾದರೆ ಅದೇ ಜೀವನ ಸಾಧನ ಮಾಡಿಕೊಳ್ಳುವುದು ಸೂಕ್ತ."

"ನಾನು ತುಂಬ ವಿಚಾರಮಾಡಿದ್ದೇನಪ್ಪಾ. ವ್ಯಾಪಾರದ ಕಡೆಗೇ ನನ್ನ ಮನಸ್ಸು ಹೋಗುತ್ತದೆ."

"ಸರಿ, ಹಾಗಾದರೆ. ಉಮಾಪತಿಯನ್ನು ಎರಡು ಮೂರು ದಿವಸದಲ್ಲಿ ಬರಮಾಡು. ನಾನೂ ಗುಂಡೂ ಕುಳಿತುಕೊಂಡು ಎಲ್ಲಾ ಮಾತನಾಡಿ ಇತ್ಯರ್ಥಮಾಡಿಬಿಡುತ್ತೇವೆ."

ಎಂದರು. ಮಹಾಬಲನಿಗೆ ಒಂದು ರಾಜ್ಯ ಗೆದ್ದಷ್ಟು ಸಂತೋಷ ವಾಯಿತು. ಕೊನೆಗೂ ತಂದೆ ನನ್ನ ಮನಸ್ಸಿನಂತೆ ನಡೆಯಲು ಒಪ್ಪಿದ ರಲ್ಲಾ ಎಂದು ಅವನು ಹಿರಿಹಿರಿ ಹಿಗ್ಗಿದ.

ಚೌಡಪ್ಪನವರ ನಿರ್ಧಾರ ಕಂಡು ಗುಂಡೂರಾಯರಿಗೂ ಸಂತೋಷ ವಾಯಿತು.

"ಒಳ್ಳೆಯ ಕೆಲಸಮಾಡಿದೆ ಚೌಡಪ್ಪ" ಎಂದರು.

"ನಾನು ಒಳ್ಳೆಯ ಕೆಲಸಮಾಡಿದೆನೋ ಹುಡುಗನ ತಲೆಯ ಮೇಲೆ ಕಲ್ಲು ಎತ್ತಿಹಾಕಿದೆನೋ ಎಂದು ಯೋಚಿಸುತ್ತಿದ್ದೇನೆ."

"ಏಕೆ ?"

"ವ್ಯಾಪಾರವೆಂದರೆ ಮೊಸಳೆ, ತಿಮಿಂಗಿಲಗಳ ವಾಸಸ್ಥಾನ. ಅದರಲ್ಲಿ ಈ ಎಳೆಯಮಗು ಪೂರೈಸಬಲ್ಲದೇ ?"

"ಯೋಚಿಸಬೇಡ ಚೌಡಪ್ಪ. ನಿನ್ನ ಎಳೆಯ ಮಗುವೇ ನಾಳೆ ಒಂದು ತಿಮಿಂಗಿಲ, ಮೊಸಳೆಯಾಗುತ್ತದೆ."

"ಎಂಥ ದೌರ್ಭಾಗ್ಯ !"

"ದೌರ್ಭಾಗ್ಯವೇನು ಬಂತು ಮನೆಗೆ ಲಕ್ಷ್ಮಿ ಲಾಸ್ಯವಾಡುತ್ತ ಬರುತ್ತಾಳೆ."

"ಅಂಥ ಲಕ್ಷ್ಮಿ ನನ್ನ ಮನೆಯ ಹೊಸಿಲು ತುಳಿಯುವ ಅಗತ್ಯವಿಲ್ಲ. ಕಂಡವರ ಹೊಟ್ಟೆಯಮೇಲೆ ಹೊಡೆದು ನನ್ನ ಮಗ ಗಳಿಸಬೇಕಾಗಿಲ್ಲ. ಅವನು ಏನೂ ಸಂಪಾದನೆಮಾಡದೆ ಮನೆಯಲ್ಲಿ ಕುಳಿತರೂ ಹೊಟ್ಟೆ ಬಟ್ಟೆಗೆ ಯೋಚನೆಯಿಲ್ಲ. ಪಾಪದ ಮಾರ್ಗ ತುಳಿದು ರಕ್ತಹಣ ಅವನು ಸಂಪಾದಿಸಿ ಹೊಟ್ಟೆತುಂಬಿಕೊಳ್ಳಬೇಕಾಗಿಲ್ಲ."

"ಈಗವನೂ ಉಮಾಪತಿಯೂ ಹಾಕುವುದು ಜನರಲ್ ಸ್ಟೋರ್ಸ್ ತಾನೇ ?"

"ಹೌದು."

"ಅದರಲ್ಲಿ ಪಾಪಕ್ಕೆ ಅವಕಾಶವೆಲ್ಲಿದೆ. ಪೆಪ್ಪರುಮೆಂಟು, ಚಾಕಲೇಟ್, ಬಿಸ್ಕತ್ತು, ಆಟದ ಸಾಮಾನು, ಪೆನ್ಸಿಲ್, ಕಾಗದ ಮಾರುವುದು. ನ್ಯಾಯವಾದ ಲಾಭಕ್ಕೆ ಮಾರಿ ವ್ಯಾಪಾರಮಾಡಿದರಾಯಿತು. ಈ ವಿಷಯ ಮಹಾಬಲನಿಗೆ ಮಂದಟ್ಟು ಮಾಡಿಬಿಡು."

"ಇದು ಇಲ್ಲಿಗೇ ನಿಲ್ಲುವುದಿಲ್ಲ ಗುಂಡೂ. ಅಂಗಡಿ ಬೆಳೆಯುತ್ತ ಹೋಗುತ್ತದೆ. ಇದರಲ್ಲಿ ಬರುವ ಲಾಭ ಸಾಲುವುದಿಲ್ಲ. ಬೇರೆ ಬೇರೆ ವ್ಯಾಪಾರ ಮಾಡುವ ಇಚ್ಛೆಯಾಗುತ್ತದೆ. ಅವು ಮಹಾಬಲನನ್ನು ಎಲ್ಲಿಗೆ ಒಯ್ಯುವವೋ ಎಂದು ಅಂಜುತ್ತೇನೆ."

"ನೋಡು ಚೌಡಪ್ಪ. ಈ ವಿಷಯ ಎಷ್ಟು ಯೋಚಿಸಿದರೂ ಅಷ್ಟೇನೇ. ಧರ್ಮ ಬಿಡದೆ ವ್ಯಾಪಾರಮಾಡಿ, ನ್ಯಾಯವಾದ ಲಾಭ ತೆಗೆದುಕೋ—ಬಡವರು ಬಗ್ಗರಿಗೆ ಅನ್ಯಾಯ ಮಾಡಬೇಡ ಎಂದಿಷ್ಟು ಹೇಳಿಬಿಡು. ಉಳಿದುದು ಭಗವಂತನ ಇಚ್ಛೆ. ಯಾರ ಕರ್ಮಕ್ಕೆ ಯಾರು ಹೊಣೆ?"

"ಉಮಾಪತಿಗೂ ಮಹಾಬಲನಿಗೂ ಮನಃಸ್ತಾಪಬರದಂತೆ ಒಂದು ಅಗ್ರೀಮೆಂಟಾಗುವುದು ಒಳ್ಳೆಯದು. ಹಣಕಾಸಿನ ವ್ಯವಹಾರದಲ್ಲಿ ಅವರ ಸ್ನೇಹ ಕೆಡಬಾರದು."

"ಅವನನ್ನು ಬರಹೇಳು. ಎಲ್ಲಾ ಮಾತಾಡಿ ವ್ಯವಸ್ಥೆ ಮಾಡೋಣ."

ಎಂದು ಗುಂಡೂರಾಯರು ಹೇಳಿದರು.

ಒಂದು ಸಂಜೆ 'ಅಗ್ರಿಮೆಂಟ್,' ಕೆಲಸವೂ ಆಗಿಹೋಯಿತು. ಚೌಡಪ್ಪನವರು ಮಗನ ಕೈಗೆ ಎರಡುಸಾವಿರದೈನೂರು ರೂಪಾಯಿಗಳ ನಗದು ಹಣವಿತ್ತರು.

ಅವೆನ್ಯೂರಸ್ತೆಯಲ್ಲಿದ್ದ ಉಮಾಪತಿಯ ಬೆಳ್ಳಿಅಂಗಡಿಯ ಪಕ್ಕದ ಮಳಿಗೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಅವನೂ ಮಹಾಬಲ 'ಜನರಲ್ ಸ್ಟೋರ್ಸ್' ಆರಂಭಿಸಿದರು. ಮೊದಲು ಕೆಲವು ದಿವಸ ಉಮಾಪತಿ ಮಹಾಬಲನ ಜತೆ ಅಂಗಡಿಯಮೇಲೆ ಕುಳಿತು ಅವನಿಗೆ ವ್ಯಾಪಾರ ಮರ್ಮದ ಪರಿಚಯ ಮಾಡಿಕೊಟ್ಟ.

ಎರಡು ಮೂರು ತಿಂಗಳಲ್ಲಿ ಮಹಾಬಲ ತಕ್ಕಮಟ್ಟಿಗೆ ವ್ಯಾಪಾರ

ಮಾಡುವುದನ್ನು ಕಲಿತುಕೊಂಡ. ಗಿರಾಕಿಗಳು ಒಲ್ಲೆವೆಂದ ಸಾಮಾನನ್ನು ಅವರಿಗೆ ಗಂಟುಹಾಕುವ ಕುಶಲಕಲೆ ಅವನಿಗೂ ಕರಗತವಾಗಿರಲಿಲ್ಲ. ಆದರೆ ಅಸಲಿಗೆ ಆಪೋಹಬರದಂತೆ ಸಾಮಾನಿಗೆ ನಿಷ್ಕರ್ಷೆಯಾಗಿದ್ದ ಬೆಲೆಗೆ ಮಾರುವುದನ್ನು ಅವನು ಚೆನ್ನಾಗಿ ರೂಢಿಸಿಕೊಂಡ.

ಚೌಡಪ್ಪನವರು ಆಗಾಗ್ಗೆ ಬಂದು ಮಗನ ವ್ಯಾಪಾರಕೌಶಲ್ಯವನ್ನು ಕಂಡುಹೋಗುತ್ತಿದ್ದರು. ನಾಣಿ ಪುರುಸತ್ತಾದಾಗ ಬಂದು ಒಂದು ಗಳಿಗೆ ಅಂಗಡಿಯಲ್ಲಿ ಕುಳಿತು ಹೋಗುತ್ತಿದ್ದ.

೧೫

ಮಹಾಬಲ ಬೆಳಿಗ್ಗೆ ಕಾಫಿ ತಿಂಡಿ ಮುಗಿಸಿಕೊಂಡು ಅಂಗಡಿಗೆ ಹೋದರೆ ಮಧ್ಯಾಹ್ನಾನಂತರ ಮನೆಗೆ ಬರುತ್ತಿದ್ದ. ಊಟ ಮುಗಿಸಿಕೊಂಡು ಅಂಗಡಿಗೆ ಹೋದರೆ ರಾತ್ರಿ ಎಂಟು ಒಂಬತ್ತು ಗಂಟೆಗೆ ಮನೆಗೆ ಬರುತ್ತಿದ್ದ. ಚೌಡಪ್ಪನವರಿಗೆ ಹೊತ್ತು ದೂಡುವುದೇ ಒಂದು ಮಹಾಸಮಸ್ಯೆಯಾಗಿತ್ತು.

ಅಂಗಡಿಯ ವ್ಯಾಪಾರ ಕಾಲಕ್ರಮೇಣ ಕುದುರುತ್ತ ಬಂತು. ಋತುಮಾನ ನೋಡಿಕೊಂಡು ಉಮಾಪತಿ ಅಂಗಡಿಗೆ ಸಾಮಾನುಗಳನ್ನು ತರಿಸುತ್ತಿದ್ದ. ಮಿಕ್ಕ ಅಂಗಡಿಗಳ ಧಾರಣೆಗಿಂತ ಜನರಲ್ ಸ್ಟೋರ್ಸಿನಲ್ಲಿ ಕಾಲಾಣೆ ಹೆಚ್ಚಾದರೂ ಒಳ್ಳೆಯ ಸಾಮಾನು ಸಿಕ್ಕುತ್ತದೆಂಬ ನಂಬಿಕೆ ಜನಕ್ಕೆ ಬಂದಿತು.

ಮಹಾಬಲನ ಸಹೃದಯತೆ ಹೆಚ್ಚು ಹೆಚ್ಚು ಗಿರಾಕಿಗಳನ್ನೊದಗಿಸಿತು. ವಿದ್ಯಾವಂತರು ಅವನ ಅಂಗಡಿಗೆ ಬರುವುದನ್ನು ರೂಢಿಮಾಡಿಕೊಂಡರು.

ಬೆಂಗಳೂರಿಗೆ ಯಾವದೋ ಕೆಲಸದಮೇಲೆ ಬಂದ ಶ್ರೀಕಂಠಯ್ಯನವರು

"ಪ್ರಸ್ತದ ಏರ್ಪಾಟು ಯಾವಾಗ ಮಾಡಬೇಕೆಂದು ನಿಮ್ಮ ಬೀಗರು ಕೇಳಿಬರಲು ಹೇಳಿದ್ದಾರೆ."

ಎಂದು ಚೌಡಪ್ಪನವರಿಗೆ ತಿಳಿಸಿದರು.

"ಶುಭಸ್ಯ ಶೀಘ್ರಂ. ಆದಷ್ಟು ಬೇಗನೆ ವ್ಯವಸ್ಥೆಮಾಡಹೇಳಿ ಶ್ರೀಕಂಠಯ್ಯನವರೇ. ಈ ಮನೆ ಬಿಕೋ ಎನ್ನುತ್ತಿದೆ. ಸೊಸೆಯಾದರೂ ಮನೆಗೆ ಬಂದು ಅದನ್ನು ಬೆಳಗಿಸಲಿ"

ಎಂದು ಉತ್ತರವಿತ್ತರು.

ಮಾಘಮಾಸದಲ್ಲಿ ಲಗ್ನವಿಟ್ಟು ಅನಂತರಾಮಯ್ಯನವರು ಚೌಡಪ್ಪನವರಿಗೆ ಕಾಗದ ಬರೆದರು. ಚೌಡಪ್ಪನವರು ಒಪ್ಪಿಗೆಯ ಪತ್ರವನ್ನು ಕೂಡಲೆ ಬರೆದರು.

ಮಹಾಬಲನಿಗೆ ಅಂಗಡಿಬಿಟ್ಟುಹೋಗುವುದು ತುಂಬ ಕಷ್ಟವಾಗಿತ್ತು. ಉಮಾಪತಿ ಜವಾಬ್ದಾರಿ ವಹಿಸಿಕೊಂಡು

"ಚಿಂತೆಯಿಲ್ಲ, ಹೋಗಿ ಬಾರಯ್ಯ. ನೀನು ಬರುವವರೆಗೆ ನಾನು ನೋಡಿಕೊಳ್ಳುತ್ತಿರುತ್ತೇನೆ."

ಎಂದು ಹೇಳಿದ.

ಮಹಾಬಲ ಈಗ ಸಂಪಾದನೆ ಮಾಡುತ್ತಿದ್ದ. ತನ್ನ ಸಂಪಾದನೆಯಲ್ಲಿ ಹೆಂಡತಿಗೆ ಏನಾದರೂ ಒಡವೆ ಮಾಡಿಸಿಕೊಡಬೇಕೆಂಬ ಆಸೆ ಅವನಲ್ಲಿ ಅಂಕುರಿಸಿತು. ಈ ವಿಷಯ ಉಮಾಪತಿಯ ಜತೆ ಪ್ರಸ್ತಾಪಿಸಿದ.

"ನಿಮ್ಮತಂದೆಯವರು ಬೇಕಾದದ್ದು ಮಾಡಿಸಿದ್ದಾರಲ್ಲಾ ಮಹಾಬಲ."

"ಹೌದು. ಅದೆಲ್ಲಾ ಅವರು ಕೊಟ್ಟಹಾಗಾಯಿತು. ನಾನು ಏನಾದರೂ ಕೊಡಬೇಕೆಂದು ಆಸೆ."

"ಏನು ಕೊಡುತ್ತೀ. ಎಷ್ಟರಲ್ಲಿ ಆಗಬೇಕು ಹೇಳು."

"ನನಗೇನು ಗೊತ್ತು ಉಮಾಪತಿ. ಹತ್ತು ಹೆಚ್ಚು, ಹತ್ತು ಕಡಿಮೆ ಆದರಾಯಿತು."

"ನಾನೊಂದು ಮಾತು ಹೇಳುವೆನು ಕೇಳುವೆಯಾ?"

"ಅವಶ್ಯಕವಾಗಿ."

"ಮಧ್ಯೆ ಬಿಳಿ ಹರಳಿಟ್ಟು, ಕೆಂಪಿನ ಜಡೆಬಿಲ್ಲೆ ಮಾಡಿಸು."

"ಅದಕ್ಕೆಷ್ಟಾಗಬಹುದು."

"೪೦೦—೫೦೦ ರೂಪಾಯಿ ಆಗಬಹುದು."

"ಅಷ್ಟು ದುಡ್ಡೆಲ್ಲಿ ತರಲಿ ಉಮಾಪತಿ."

"ಅಂಗಡಿ ಲೆಕ್ಕದಲ್ಲಿ ತೆಗೆದುಕೊಂಡಿರು. ಮುಂದೆ ಲೆಕ್ಕ ಮಾಡುವಾಗ ನೋಡಿಕೊಳ್ಳೋಣ. ಇದುವರೆಗೆ ಅಂಗಡಿ ಲೆಕ್ಕದಲ್ಲಿ ನೀನೇನೂ ತೆಗೆದುಕೊಂಡಿಲ್ಲ. ನಿನ್ನ ಭಾಗದ ಹಣ ಹಾಗೇ ಇದೆ."

"ಹಣ ತೆಗೆದುಕೊಂಡು ಜಡೇಬಿಲ್ಲೆ ಮಾಡಿಸಿಕೊಡುವ ಭಾರ ನಿನ್ನದಪ್ಪಾ."

"ಹಾಗೇ ಆಗಲಿ"

ಎಂದು ಉಮಾಪತಿ ಸಂತೋಷದಿಂದ ಒಪ್ಪಿಕೊಂಡ.

ಶುಭಮುಹೂರ್ತ ನೋಡಿ ಚೌಡಪ್ಪನವರು, ಗುಂಡೂರಾಯರು, ಅವರ ಸಂಸಾರ, ತಮ್ಮ ಸಂಸಾರದೊಂದಿಗೆ ಹಾಸನಕ್ಕೆ ಪ್ರಯಾಣ ಬೆಳಸಿದರು.

ಪ್ರಸ್ತದ ಬೆಳಿಗ್ಗೆ ವಧೂವರರಿಗೆ ತೈಲಾಭ್ಯಂಜನವಾಯಿತು. ಹೋಮ, ಹವನ, ಆರತಿ ಅಕ್ಷತೆಗಳಾದವು. ಮಧ್ಯಾಹ್ನ ಸೊಗಸಾದ ರಾಜಭೋಜನವಾಯಿತು.

ರಾತ್ರಿ ಆರತಿ ಅಕ್ಷತೆಯಾದ ಮೇಲೆ ಶಯ್ಯಾಗೃಹಕ್ಕೆ ವಧೂವರರನ್ನು ಕಳುಹಿಸಿದರು.

ಮದುವೆಯಾಗಿದ್ದರೂ ಮಹಾಬಲನಿಗೆ ಹೆಂಡತಿಯ ಸಾಕಷ್ಟು ಪರಿಚಯವಾಗಿರಲಿಲ್ಲ. ಲಜ್ಜೆ ಅವನನ್ನು ಬಾಧಿಸುತ್ತಿತ್ತು. ಮಂಚದ ಒಂದೆಡೆ ಮಾತನಾಡದೆ ಕುಳಿತ.

ನರಸೂ ತಾಯಿ ಶಂಕರಮ್ಮನವರು ಮಗಳಿಗೆ ಚೆನ್ನಾಗಿ ಪಾಠ ಹೇಳಿದ್ದರು. ಮೌನಿಯಾಗಿ ಕುಳಿತಿದ್ದ ಮಹಾಬಲ ತನ್ನನ್ನು ಮಾತನಾಡಿಸುತ್ತಾನೇನೋ ಎಂದು ನಿರೀಕ್ಷಿಸುತ್ತ ನರಸೂ ಸ್ವಲ್ಪ ಕಾಲ ನಿಂತಳು. ಮಹಾಬಲ ತನ್ನ ಭದ್ರಪೀಠಬಿಟ್ಟು ಅಲುಗಾಡುವ ಸಂಭವ ಕಾಣಲಿಲ್ಲ.

ನರಸೂ ಮೇಜಿನ ಮೇಲಿದ್ದ ಬಾದಾಮಿ ಹಾಲಿನ ಪಾತ್ರೆ ತೆಗೆದುಕೊಂಡು ಗಂಡನ ಬಳಿಗೆ ಬಂದಳು. ಹಾಲಿನ ಲೋಟ ಗಂಡನ ಮುಂದೆ ಹಿಡಿದು

"ಕುಡಿಯಿರಿ" ಎಂದಳು.

ಮಹಾಬಲ ಕತ್ತೆತ್ತಿ ನೋಡಿದ. ನರಸೂ ಲಕ್ಷಣವಾಗಿದ್ದಳು. ಕೌಮಾರಿಕಾವಸ್ಥೆಯನ್ನು ಬಿಟ್ಟುಕೊಟ್ಟು ಅದೇ ಯೌವನದ ಹೊಸಿಲಮೇಲೆ ಕಾಲಿಡುತ್ತಿದ್ದಳು. ಲೋಕದ ರೀತಿನೀತಿಯನ್ನರಿಯದ ಸುಕೋಮಲ ಮುಗ್ಧತೆ ಅವಳ ಚೆಲುವನ್ನು ಮತ್ತಷ್ಟು ಹೆಚ್ಚಿಸಿತ್ತು.

ನರಸೂ ಕೈಯಲ್ಲಿ ಹಿಡಿದಿದ್ದ ಹಾಲಿನಲೋಟ ತೆಗೆದುಕೊಂಡು ಮೇಜಿನಮೇಲಿಟ್ಟು ತನ್ನ ಕಿಸೆಯಿಂದ ಜಡೆಬಿಲ್ಲೆ ತೆಗೆದು ಮುಚ್ಚಿ ಕೈಯಲ್ಲಿ ಹಿಡಿದುಕೊಂಡು

"ನರಸೂ, ನಿನ್ನ ಕೈ ಇಲ್ಲಿ ತಾ" ಎಂದ.

ನರಸೂ ಗಂಡನ ಮುಖನೋಡಿ ಮುಗುಳ್ನಗೆ ನಕ್ಕು

"ಏಕೆ ?" ಎಂದಳು.

"ಅದು ಗುಟ್ಟು. ಬಾಯಲ್ಲಿ ಹೇಳುವುದಕ್ಕಾಗುವುದಿಲ್ಲ. ಕೈ ಇತ್ತರೆ ನಿನಗೇ ತಿಳಿಯುತ್ತದೆ."

ನರಸೂ ಮಾತನಾಡದೆ ಕೈಚಾಚಿದಳು.

ಮಹಾಬಲ ಅವಳ ಕೈಯಲ್ಲಿ ಜಡೆಬಿಲ್ಲೆಯನ್ನಿಟ್ಟು ಕೈಮುಚ್ಚಿದ.

ನರಸೂ ಕೈಬಿಡಿಸಿಕೊಂಡು ನೋಡಿದಳು. ಕೆಂಪಿನ ಜಡೆಬಿಲ್ಲೆ ಮಿನು ಮಿನುಗುತ್ತಿತ್ತು. ಸಂತೋಷದಿಂದ ತನ್ನ ಜಡೆಯಲ್ಲಿ ಧರಿಸಿಕೊಂಡು ಗಂಡನ ಕಡೆ ತಿರುಗಿ

"ನೋಡಿ, ಚೆನ್ನಾಗಿದೆಯೇ ?"

"ಕೇಳುವುದೇನು, ಸೊಗಸಾಗಿದೆ."

"ನೀವೇ ಮಾಡಿಸಿದಿರಾ ?"

"ಹೂ ! ಏಕೆ ?"

"ಏಕೂ ಇಲ್ಲ, ಸುಮ್ಮನೆ ಕೇಳಿದೆ. ನನ್ನನ್ನು ನೀವೆಷ್ಟು...."

"ಹೇಳು ಸಂಕೋಚವೇಕೆ ? ನೀವೆಷ್ಟು ಪ್ರೀತಿಸುವಿರಿ ಎಂದು ಹೇಳ ಬೇಕೆಂದಿದ್ದೆಯಲ್ಲವೇ ?"

ನರಸೂ ನಸುನಾಚಿ ಕತ್ತು ತಗ್ಗಿಸಿದಳು.

"ನಿಜ ನರಸೂ, ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತೇನೆ. ದೇವರು ನನಗೆ ಯಾವುದಕ್ಕೂ ಕೊರತೆಮಾಡಿಲ್ಲ. ನಮ್ಮ ಸಂಸಾರ ಸುಖ ವಾಗಿ ಸಾಗುವುದೆಂದು ನಾನು ಧೈರ್ಯಮಾಡಿಕೊಂಡಿದ್ದೇನೆ."

"ನೀವು ಸುಖವಾಗಿರುವುದಕ್ಕೆ ನನ್ನ ಜನ್ಮ ಮೀಸಲು. ನಿಮ್ಮ ಸುಖವೇ ನನ್ನ ಸುಖ, ನಿಮ್ಮ ದುಃಖವೇ ನನ್ನ ದುಃಖ. ನನಗೊಂದು ಅನು ಮಾನವಿದೆ, ಕೇಳಲೇ ?"

"ಕೇಳು."

"ನನ್ನ ಮನೆಯಕೆಲಸ ನನಗೆ ಹೊಸದು. ನಾನು ತಪ್ಪಿದರೆ ದಾರಿ ತೋರಿಸುವುದಕ್ಕೆ ಅತ್ತೆಮ್ಮನವರೂ ಇಲ್ಲ. ಮಾವನವರು ಎಲ್ಲಿ ಅಸಮಾಧಾನಪಟ್ಟುಕೊಳ್ಳುವರೋ ?"

"ಯೋಚನೆಬಿಡು ನರಸೂ. ಅಣ್ಣಯ್ಯನ ಸ್ವಭಾವ ನೀನು ಕಾಣೆ. ಅವನು ನಿಜವಾಗಿ ಮನುಷ್ಯರೂಪ ಧರಿಸಿರುವ ದೇವರು. ನಿನ್ನನ್ನು ಅಣ್ಣಯ್ಯ ಮನೆಗೆ ಬಂದ ಸೊಸೆಯೆಂದು ಭಾವಿಸುವುದೇ ಇಲ್ಲ ; ಮನೆಯಲ್ಲಿ ಬೆಳೆದ ಮಗಳೆಂದು ಭಾವಿಸುತ್ತಾನೆ. ನಿನ್ನ ತಾಯಿ ದೊಡ್ಡಜೀವ. ಎಲಾ ವಿಷಯಗಳನ್ನೂ ನಿನಗೆ ಅವರು ತಿಳಿಸಿಯೇ ಇರುತ್ತಾರೆ. ನಾಲ್ಕುದಿವಸ ಸ್ವಲ್ಪ ಹೊಸದಾಗಿ ಕಾಣಬಹುದು. ಮುಂದೆ ಎಲ್ಲವನ್ನೂ ನೀನೇ ದಕ್ಷತೆಯಿಂದ ನಿರ್ವಹಿಸುವೆ. ಮೀನಿಗೆ ಈಜುವುದನ್ನು ಹೇಳಿಕೊಡಬೇಕೇ ?"

ಗಂಡ ತನ್ನಲ್ಲಿ ತಳೆದಿದ್ದ ನಂಬಿಕೆ ಕಂಡು ನರಸೂ ಆನಂದಪರವಶಳಾದಳು.

"ಹಾಲು ಆರಿಹೋಯಿತೋ ಏನೋ ? ಕುಡಿಯಲೇ ಇಲ್ಲವಲ್ಲಾ"

ಎಂದಳು. ಮಹಾಬಲ ಲೋಟ ಕೈಗೆತೆಗೆದುಕೊಂಡು ನರಸೂಗೆ ಕುಡಿಸಲೆತ್ನಿಸಿದ.

"ಮೊದಲು ನೀವು ಕುಡಿಯಿರಿ."

"ಚಿಂತೆಯಿಲ್ಲ. ನೀನು ಕುಡಿ."

"ಉಂಟೇ ? ಮೊದಲು ನೀವು, ತರುವಾಯ ನಾನು"

ಎಂದು ಅವನ ಕೈಹಿಡಿದು ಹಾಲು ಕುಡಿಸಿದಳು. ಉಳಿದರ್ಧವನ್ನು ಮಹಾಬಲ ನರಸೂಗೆ ಕುಡಿಸಿದ.

ನರಸೂ ತಾಂಬೂಲದ ತಟ್ಟೆಯನ್ನೆತ್ತಿಕೊಂಡು ತೊಡೆಯಮೇಲಿಟ್ಟುಕೊಂಡು ಎಲೆಗೆ ಸುಣ್ಣಹಚ್ಚಿ, ಅಡಿಕೆ ಸಮೇತ ಗಂಡನಿಗಿತ್ತಳು. ಮಧ್ಯೆ ಮಧ್ಯೆ ಮಧ್ಯೆ ಅವಳೂ ತಾಂಬೂಲ ಸವಿದಳು.

ಸತಿಯೊಂದಿಗೆ ಕಳೆದ ಪ್ರಥಮ ರಾತ್ರಿಯ ನೆನಪು ಮಹಾಬಲನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯಿತು.

ಬೆಳಗು ಮೂಡಿ, ಸೂರ್ಯಕಿರಣ ಕೋಣೆಯೊಳಗೆ ಧಾವಿಸಿ ಬಂದಾಗ

"ಇಷ್ಟು ಬೇಗ ಬೆಳಗಾಯಿತೇ ?"

ಎಂದು ಆಶ್ಚರ್ಯಪಟ್ಟ. ಬೆಳಗಾಯಿತಲ್ಲಾ ಎಂಬ ವಿಷಾದವೂ ಅವನ ಹೃದಯದಲ್ಲಿ ಮೂಡಿತು.

ನಾಲ್ಕನೆಯ ದಿವಸ ಚೌಡಪ್ಪನವರು, ಪರಿವಾರ ಔತಣಮಾಡಿಸಿ ಕೊಂಡು, ಉಡುಗೊರೆ ಸ್ವೀಕರಿಸಿ, ಊರಿಗೆ ಪ್ರಯಾಣ ಬೆಳಸಿದರು. ನರಸು ವನ್ನು ಗಂಡನಮನೆಗೆ ಮುಟ್ಟಿಸಿಬರಲು ಅವಳ ಜತೆ ತಾಯಿ ಶಂಕರಮ್ಮ ನವರೂ ಹೊರಟರು.

ಶಂಕರಮ್ಮ ಮಗಳ ಮನೆಯಲ್ಲಿ ನಾಲ್ಕು ದಿವಸ ಉದ್ದೇಶಪೂರ್ವಕ ವಾಗಿಯೇ ನಿಂತರು.

ಮಗಳಿಗೆ ಮನೆಯ ಕೆಲಸ, ಜವಾಬ್ದಾರಿಯ ಪರಿಚಯಮಾಡಿ ಕೊಟ್ಟರು.

ಅವರನ್ನು ಕರೆದುಕೊಂಡು ಹೋಗಲು ದೊಡ್ಡಮಗ ನರಹರಿ ಬಂದ. ಚೌಡಪ್ಪನವರು ಬೀಯಗಿತ್ತಿಗೆ ಔತಣಮಾಡಿ ಊರಿಗೆ ಕಳಿಸಿಕೊಟ್ಟರು.

೧೬

ಸೊಸೆ ಮನೆಗೆ ಬಂದುದು ಚೌಡಪ್ಪನವರ ಹೃದಯದಿಂದ ದೊಡ್ಡ ಭಾರ ಇಳುಹಿದಂತಾಯಿತು.

ಸೊಸೆಯನ್ನು ಕೂಡಿಸಿಕೊಂಡು ತಮ್ಮ ಮನೆತನದ ಪರಿಚಯ, ಆಸ್ತಿ ಪಾಸ್ತಿಗಳ ಪರಿಚಯ, ಉತ್ಪನ್ನ ಖರ್ಚುಗಳ ವಿವರವನ್ನೆಲ್ಲಾ ಹೇಳಿದರು. ಒಂದು ದಿನ ಸೊಸೆಯ ಕೈಗೆ ಕಾಗದಪತ್ರಗಳನ್ನೆಲ್ಲಾ ಕೊಟ್ಟು

"ಜೋಕೆಯಾಗಿ ಇಟ್ಟುಕೊಳ್ಳಮ್ಮಾ"

ಎಂದರು. ನರಸೂಗೆ ದುಃಖ ಉಕ್ಕಿಬಂತು.

"ದೊಡ್ಡವರು ನೀವು ಇರುವಾಗ ನನಗೇಕೆ ಜವಾಬ್ದಾರಿ" ಎಂದಳು.

"ನನ್ನ ಕಾಲ ಆಯಿತಮ್ಮಾ. ಇದು ನಿಮ್ಮ ಕಾಲ. ನಿಮ್ಮ ಜವಾ ಬ್ದಾರಿ ನೀವು ನಿರ್ವಹಿಸುವುದನ್ನು ಕಣ್ತುಂಬ ನೋಡಿ ಸಂತೋಷಪಡಬೇ ಕೆಂದಿದ್ದೇನೆ."

"ನಮ್ಮನ್ನು ಬಿಟ್ಟು ಎಲ್ಲಿಗೋ ಹೋಗುವ ಹಾಗೆ ಮಾತನಾಡುತ್ತಿ ರುವಿರಿ?"

"ಬಿಟ್ಟುಹೋಗುವುದಿಲ್ಲ ನರಸೂ. ಕಾಲ ಬಂದಾಗ ಹೊರಡುವುದಕ್ಕೆ ಸಿದ್ಧತೆಮಾಡಿಕೊಳ್ಳುತ್ತಿದ್ದೇನೆ. ಇನ್ನು ವಯಸ್ಸು ಹೆಚ್ಚಾದರೆ ಬುದ್ಧಿ ಸ್ಥಿಮಿತವಾಗಿರುವುದಿಲ್ಲ. ಇಲ್ಲದ ಮೋಹ ಬಂದು ಕವಿದುಕೊಳ್ಳುತ್ತದೆ. ಬುದ್ಧಿ ನೇರವಾಗಿರುವಾಗಲೇ ಮನುಷ್ಯ ಎಲ್ಲಾ ವ್ಯವಸ್ಥೆ ಮಾಡುವುದು ಜಾಣತನ."

ನರಸೂ ಕಣ್ತುಂಬ ನೀರುಕ್ಕಿತು. ಮಾವನವರಿಗೆ ಉತ್ತರ ಹೇಳದೆ ಒಳಕ್ಕೆ ಹೊರಟುಹೋದಳು.

ರಾತ್ರಿ ಗಂಡ ಮನೆಗೆಬಂದಾಗ ಮಾವನವರು ಆಡಿದ ಮಾತನ್ನು ಅವನಿಗೆ ತಿಳಿಸಿದಳು.

"ಅಣ್ಣಯ್ಯ ಯಾವಾಗಲೂ ಹಾಗೇ ನರಸೂ. ನೀನು ಯೋಚನೆ ಮಾಡಬೇಡ. ಅವನು ಶುದ್ಧ ನಿರ್ಮೋಹಿ."

ನರಸೂ ಮನಸ್ಸಿಗೆ ಸಮಾಧಾನವಾಗಲಿಲ್ಲ.

ನರಸೂ ಮಾವನಮನೆಗೆ ಬಂದ ಹೊತ್ತು ಒಳ್ಳೆಯದೆಂದು ಜನ ಹೊಗಳುವಂತಾಯಿತು. ಮಹಾಬಲನ ವ್ಯಾಪಾರ ದಿನದಿನಕ್ಕೆ ವೃದ್ಧಿಯಾಗುತ್ತ ಬಂತು. ಜನರಲ್ ಸ್ಟೋರ್ಸ್ ಸಾಮಾನಿನಿಂದ ತುಂಬಿ ತುಳುಕಲಾರಂಭಿಸಿತು. ಬಗೆಬಗೆಯ ಸಾಮಾನುಗಳನ್ನು ಜಪಾನಿನಿಂದ ನೇರವಾಗಿ ಮಹಾಬಲ ತರಿಸಲಾರಂಭಿಸಿದ.

ಅಂಗಡಿಯ ವ್ಯಾಪಾರ ಬೆಳೆದಂತೆ ಅದರ ನೌಕರವರ್ಗವೂ ಬೆಳೆಯಿತು. ಅಂಗಡಿಯಲ್ಲಿ ಒಬ್ಬ ರೈಟರು, ಒಂದು ಆಳು, ಒಬ್ಬ ವ್ಯಾಪಾರಗಾರ ಇದ್ದರು. ಮಹಾಬಲ ಆಗಾಗ್ಗೆ ಸ್ವಲ್ಪ ವಿಶ್ರಾಂತಿ ಪಡೆಯಲು ಅವಕಾಶವಾಗುತ್ತ ಬಂತು.

ಚೌಡಪ್ಪನವರು ಮಗನ ದಾಂಪತ್ಯಜೀವನವನ್ನು ಬಹಳ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು. ಬೆಳಿಗ್ಗೆ ಎಂಟರಿಂದ ರಾತ್ರಿ ಒಂಭತ್ತರವರೆಗೆ ಮಹಾಬಲನಿಗೆ ಅಂಗಡಿಯ ಕೆಲಸವೇ ಆಗುತ್ತಿತ್ತು. ಭಾನುವಾರ 'ಸ್ಟಾಕ್ ಚೆಕಿಂಗ್'. ಅವತ್ತೂ ಪುರಸತ್ತಿಲ್ಲ.

ನರಸೂಗೆ ಪರಿಚಯದವರೆಂದರೆ ಗುಂಡೂರಾಯರ ಮನೆಯವರು ರಾಯರ ಸೊಸೆ ರಾಜಲಕ್ಷ್ಮಿ ಮತ್ತು ನರಸೂ ಗೆಳತಿಯರಾದರು. ರಾಜಲಕ್ಷ್ಮಿ

ನರಸೂಗೆ ಕಸೂತಿ, ಹೊಲಿಗೆ ಅಭ್ಯಾಸಮಾಡಿಸಿದಳು. ತನಗೆ ಬರುತ್ತಿದ್ದ ಹಾಡುಗಳನ್ನು ನರಸೂ ರಾಜಲಕ್ಷ್ಮಿಗೆ ಪಾಠಮಾಡಿಸುತ್ತಿದ್ದಳು.

ತಿಮ್ಮಮ್ಮ ನರಸೂಗೆ ಪುರಾಣದ ಪುಣ್ಯ ಕಥೆಗಳನ್ನು ಹೇಳುತ್ತಿದ್ದರು. ತಮಗೆ ತಿಳಿದಿದ್ದ ಅಡಿಗೆ ಮಾಡುವ ವಿಧಾನ ವಿವರಿಸುತ್ತಿದ್ದರು.

ಚೌಡಪ್ಪನವರು ನರಸುವಿನ ಏಕಾಂತಜೀವನ ಕಂಡು ಒಂದು ದಿನ ಮಗನೊಂದಿಗೆ ಪ್ರಸ್ತಾಪಿಸಿದರು

"ಮಹಾಬಲ, ನಿನ್ನ ಹೆಂಡತಿಯನ್ನು ಎಲ್ಲಿಗಾದರೂ ಕರೆದುಕೊಂಡು ಹೋಗಯ್ಯ."

"ಎಲ್ಲಿಗೆ ಕರೆದುಕೊಂಡು ಹೋಗಲಿ."

"ಸಿನೀಮಾಕ್ಕಾದರೂ ಹೋಗಬಾರದೇ ?"

"ಪುರಸತ್ತೆಲ್ಲಿದೆ? ಅಂಗಡಿ ಬಿಡುವ ವೇಳೆಗೇ ಒಂಭತ್ತು ಗಂಟೆಯಾಗುತ್ತದೆ."

"ರಾತ್ರಿಯಾಟಕ್ಕೆ ಹೋಗಬಹುದು."

"ನನಗೆ ಸಾಕಾಗಿಹೋಗಿರುತ್ತದೆ. ನಿದ್ರೆ ಬರುತ್ತದೆ."

"ಅದೂ ಚಿಕ್ಕಪುಟ್ಟ ಹುಡುಗಿ. ಮನೆಯಲ್ಲಿ ಓರಗೆಯವರು ಒಬ್ಬರೂ ಇಲ್ಲ. ಅದಕ್ಕಾದರೂ ಬೇಸರವಾಗುವುದಿಲ್ಲವೇ ?"

"ನಿಜ ಅಣ್ಣಯ್ಯ. ಕರೆದುಕೊಂಡುಹೋಗುತ್ತೇನೆ"

ಎಂದು ಹೇಳಿದ.

ಗಂಡ ನರಸುವನ್ನು ಸಿನೀಮಾಕ್ಕೆ ಕರೆದುಕೊಂಡು ಹೋಗುತ್ತೇನೆಂದ ದಿವಸ ಅವಳ ಸಂಭ್ರಮ ಹೇಳತೀರದು. ಅವಳು ಅಂದು ಉಟ್ಟುಕೊಳ್ಳುವ ಸೀರೆಯನ್ನು ರಾಜಲಕ್ಷ್ಮಿಯೇ ಚುನಾಯಿಸಬೇಕು.

ಸಿನೀಮಾಕ್ಕೆ ಹೋಗಿಬಂದಮೇಲೆ ಮಹಾಬಲ ಕೇಳುತ್ತಿದ್ದ.

"ಪಿಕ್ಚರ್ ಹೇಗಿತ್ತು ;"

"ಚೆನ್ನಾಗಿತ್ತು ; ನಿಮಗೆ."

"ಸಾಧಾರಣವಾಗಿತ್ತು."

"ಬೇಸರವಾಯಿತೆ ?"

"ಇಲ್ಲ. ನಿದ್ರೆ ತಡೆಯುವುದು ನನಗೆ ಸಾಧ್ಯವಿಲ್ಲ."

"ಹೋಗಲಿ ಬಿಡಿ. ಇನ್ನು ಮೇಲೆ ಅದೇ ಬೇಡ."

"ನೀನು ಬೇಡವೆಂದರೆ! ಅಣ್ಣಯ್ಯ ಸುಮ್ಮನೆ ಇರಬೇಕಲ್ಲ."

"ಮಾವನವರ ಬಲವಂತಕ್ಕೆ ನೀವು ಕರೆದುಕೊಂಡು ಹೋಗಿದ್ದಿರೋ?"

"ಇಲ್ಲ, ನನಗೂ ಆಸೆಯಾಯಿತು. ಅದನ್ನೇ ಅವನೂ ಹೇಳಿದ."

"ಇಪ್ಪತ್ತುನಾಲ್ಕು ಗಂಟೆ ಅಂಗಡಿಯ ಚಿಂತೆಯಾದರೆ ಮನೆಯ ಚಿಂತೆ?"

"ಅದು ನಿನಗೆ ಬಿಟ್ಟಿದ್ದೇನೆ."

"ನನ್ನ ಚಿಂತೆ!"

"ನಿನಗೇನು ಚಿಂತೆ?"

"ಏನೂ ಇಲ್ಲ—ನಾನೊಬ್ಬಳೇ ತೂಕಡಿಸುತ್ತ ಕುಳಿತಿರುವುದಕ್ಕೆ ಬೇಸರವಾಗುವುದಿಲ್ಲವೇನು?"

"ಇನ್ನು ಮೇಲೆ ಖಂಡಿತ ಭಾನುವಾರ ಯಾವ ಕೆಲಸವನ್ನೂ ಇಟ್ಟುಕೊಳ್ಳುವುದಿಲ್ಲ ನರಸೂ. ವಾರಕ್ಕೊಂದು ದಿನ ಎಲ್ಲಿಗಾದರೂ ಹೋಗಿ ಬರೋಣ."

"ಸಿನೀಮಾಕ್ಕೆ ಹೋಗಬೇಕೆಂದು ನನ್ನ ಹಟವಿಲ್ಲ—ನಿಮ್ಮ ಜತೆ ಇದ್ದರಾಯಿತು."

"ಗೌರೀ ಹಬ್ಬಕ್ಕೆ ಏನು ತೆಗೆದುಕೊಳ್ಳುತ್ತೀ?"

"ಏನು ತೆಗೆದುಕೊಳ್ಳಲಿ?

"ನನ್ನ ಕೇಳಿದರೆ—ನಿನಗೇನು ಬೇಕು ಹೇಳು."

"ಬೇಕಾದುದೆಲ್ಲ ಇದೆ. ತೊಂದರೆಯಾಗದಿದ್ದರೆ ನನ್ನ ಮಾಂಗಲ್ಯದ ಕರೀಮಣೀ ಸರವನ್ನು ಚಿನ್ನದಲ್ಲಿ ಸುತ್ತಿಸಿಕೊಡಿ."

"ಆಗಬಹುದು. ಅದು ಬಹಳ ಸಣ್ಣ ವಿಷಯವಾಯಿತು. ಮೂರು ಸವರನ್ ಆದರೆ ಅದರ ಕೆಲಸ ಮುಗಿಯಿತು. ಇನ್ನೇನುಬೇಕು ಹೇಳು."

"ನನ್ನ ಕರಿಮಣಿ ಒಂದು ಭದ್ರವಾಗಿದ್ದರೆ ನನಗೇನೂ ಬೇಡ."

ನರಸೂ ಮಾತು ಮಹಾಬಲನನ್ನು ಬೆರಗುಗೊಳಿಸಿತು. ಹೆಣ್ಣು ಜೀವ ಪತಿಯೆಂದರೆ ಏನುಭಾವಿಸಿರುತ್ತದೆ ಎಂಬುದರ ಪೂರ್ವಕಲ್ಪನೆ ಮಹಾಬಲನಿ

ಗಿರಲಿಲ್ಲ. ಮನೆಯಲ್ಲಾಗಲಿ ಹೊರಗಾಗಲಿ ದಾಂಪತ್ಯಜೀವನವನ್ನು ಅವನು ನೋಡುವುದಕ್ಕೆ ಅವಕಾಶವಾಗಿರಲಿಲ್ಲ.

ಮಹಾಬಲನಷ್ಟೇ ನರಸೂನೂ, ಅನನುಭವಿ. ಆದರೆ ತುಂಬಿದ ಮನೆಯಲ್ಲಿ ಬೆಳೆದಿದ್ದಳು. ತನ್ನ ಅಕ್ಕನ ಲಗ್ನ ನೋಡಿದ್ದಳು. ಅಕ್ಕ ಭಾವನ ಶೃಂಗಾರ ಚೇಷ್ಟೆಗಳು ಅವಳ ಕಣ್ಣಿಗೆ ಬಿದ್ದಿದ್ದವು. ಅದಕ್ಕಿಂತ ಹೆಚ್ಚಾಗಿ ತನ್ನ ತಂದೆ, ತಾಯಿಯ ವಿಷಯರಹಿತ ನಿರ್ಮಲಪ್ರೇಮವನ್ನು ಲಕ್ಷಿಸಿದ್ದಳು.

ಅವಳ ಮನಸ್ಸಿನಲ್ಲಿ ಒಂದು ಪ್ರಬಲವಾದ ಬಯಕೆಯಿತ್ತು. ನಾಳೆ ತಾನೂ ಪ್ರೇಮ-ಗೌರವ-ಪರಸ್ಪರ ನಂಬಿಕೆ ಉಳಿಸಿಕೊಳ್ಳಬೇಕು. ಇಂದು ತಾವು ವಿಶ್ವಾಸ ತಳೆದಿರುವುದು ಹೆಚ್ಚಲ್ಲ. ನಾಳೆ ದೇಹಾಕರ್ಷಣೆ ನೀಗಿದ ಮೇಲೆ ವಿಶ್ವಾಸ ಉಳಿಸಿಕೊಳ್ಳಬೇಕು.

ಗಂಡನ ಮನಸ್ಸು ಹೊಕ್ಕು ಅವನ ಸಮಸ್ತ ಕಷ್ಟಸುಖದಲ್ಲಿಯೂ ಭಾಗಿಯಾಗಿ ಅವನ ಆತ್ಮೀಯಳಾಗಿ ಬಾಳಬೇಕೆಂಬ ಹಿರಿಯಾಶೆ ನರಸುವಿನಲ್ಲಿ ಮನೆಮಾಡಿಕೊಂಡಿತ್ತು.

ಮಹಾಬಲ ಅಂಗಡಿಯಿಂದ ಹಿಂದಿರುಗಿದಾಗ ಪ್ರತಿದಿನವೂ ಅಂದಿನ ಸಂಪಾದನೆಯನ್ನು ಹೆಂಡತಿಯ ಕೈಯಲ್ಲಿಡುತ್ತಿದ್ದ. ನರಸೂ ಹಣ ಲೆಕ್ಕಮಾಡಿ ಜೋಪಾನಮಾಡಿಡುತ್ತಿದ್ದಳು.

ವಾರಕ್ಕೊಮ್ಮೆ ಹಣ ಬ್ಯಾಂಕು ಸೇರುತ್ತಿತ್ತು. ಹಣ ಬ್ಯಾಂಕಿಗೆ ಕಳಿಸುವಾಗ ಮರೆಯದೆ

"ನಿನಗೇನಾದರೂ ದುಡ್ಡು ಬೇಕೆ" ಎಂದು ಕೇಳುತ್ತಿದ್ದ.

"ನನಗೇತಕ್ಕೆ ದುಡ್ಡು" ಎಂದು ನರಸೂ ಹೇಳುತ್ತಿದ್ದಳು.

ಮಹಾಬಲನ ಬಗ್ಗೆ ನರಸೂ ಯಾವದಕ್ಕೂ ಅಸಮಾಧಾನಗೊಳ್ಳುವಂತಿರಲಿಲ್ಲ. ಹೆಂಡತಿಯನ್ನವನು ಎಂದಿಗೂ ಗಟ್ಟಿಯಾಗಿ ಕೂಡ ಮಾತನಾಡಿಸುತ್ತಿರಲಿಲ್ಲ. ಅಡಿಗೆ ಊಟದಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾದರೂ ಅಸಮಾಧಾನಪಟ್ಟುಕೊಳ್ಳುತ್ತಿರಲಿಲ್ಲ.

ಅವರ ದಾಂಪತ್ಯ ಆದರ್ಶದಾಂಪತ್ಯವಾಗಿರಬೇಕಾಗಿತ್ತು.

ಆದರೆ ನರಸೂ ಮನಸ್ಸಿನಲ್ಲಿ ಅವ್ಯಕ್ತ ಅತೃಪ್ತಿ. ತಾನು ಗಂಡನನ್ನು ಅವನ ಸಂಗವನ್ನು ಬಯಸುವಂತೆ ಅವನು ಬಯಸುವುದಿಲ್ಲವಲ್ಲ ಎಂದು

ಕೊರಗುತ್ತಿದ್ದಳು. ಅವನಲ್ಲಿ ಯಾವ ದೋಷವೂ ಇರಲಿಲ್ಲ. ಅವನ ಮನಸ್ಸು ಬೇರೆ ಹವ್ಯಾಸಕ್ಕೆ ಪಕ್ಕಾಗಿರಲಿಲ್ಲ.

ಕಾಲಕ್ರಮೇಣ ಅನುಭವಬಂದಂತೆ ಗಂಡ ತನ್ನ ಮನಸ್ಸನ್ನು ಅರಿತುಕೊಳ್ಳುತ್ತಾನೆ ಎಂದು ನರಸೂ ಆಸೆಯಿಟ್ಟುಕೊಂಡಿದ್ದಳು. ಅವನ ಸ್ವಭಾವ ಸುಕೋಮಲವಾದುದು, ಅದರಲ್ಲಿ ಮರೆಮೋಸ ಕೊಂಕುಗಳಿರಲಿಲ್ಲ. ಆದರೆ ಮಹಾಬಲನ ತಿಳುವಳಿಕೆಯ ಮಟ್ಟವೇ ನರಸೂ ಮಟ್ಟಕ್ಕೆ ಏರಿರಲಿಲ್ಲ.

ಅವನ ತಿಳುವಳಿಕೆಯನ್ನು ತೀಕ್ಷ್ಣಗೊಳಿಸುವುದು ತನ್ನ ಕರ್ತವ್ಯವೆಂದು ನರಸೂ ಭಾವಿಸಿದಳು. ಆದರೆ ಹೇಗೆ? ಹೇಗೆ ಎನ್ನುವ ಸಮಸ್ಯೆ ಅವಳನ್ನೆದುರಿಸಿತು.

## ೧೭

ಪ್ರತಿನಿತ್ಯ ಗಂಡ ಅಂಗಡಿಗೆ ಹೋದ ಸಮಯದಲ್ಲಿ ಅಂಬುಜಮ್ಮನವರ ಮನೆಯಲ್ಲಿ ನರಸೂ ಸ್ವಲ್ಪ ಹೊತ್ತು ಕಳೆದು ಬರುತ್ತಿದ್ದಳು.

ಅಂಬುಜಮ್ಮನವರು ತಮ್ಮ ಸ್ವಂತಸೊಸೆಯನ್ನು ತಿದ್ದಿ, ಆಕೆಗೆ ಮನೆಗೆಲಸ, ಗೃಹಸ್ಥಧರ್ಮ ಪಾಠ ಹೇಳಿದಂತೆ ನರಸೂಗೂ ಹೇಳುತ್ತಿದ್ದರು.

ಒಂದು ದಿನ ನರಸೂ ಮುಖ ತೀರ ಸಪ್ಪೆಯಾಗಿದ್ದುದನ್ನು ಅಂಬುಜಮ್ಮನವರು ಕಂಡರು. ಯಾವುದೋ ದುಃಖ ಅವಳನ್ನು ಕಾಡುತ್ತಿದೆ ಎಂದು ಅವರು ಭಾವಿಸಿದರು.

"ಏಕೆ ನರಸೂ ಹೀಗಿದ್ದಿ-ಮೈಯಲ್ಲಿ ಸರಿಯಿಲ್ಲವೇನು ?"

"ಸರಿಯಾಗಿದೆಯಮ್ಮ, ಏಕೆ ಹೀಗೆ ಕೇಳುತ್ತಿರುವಿರಿ ?"

"ನನ್ನಹತ್ತಿರ ಮುಚ್ಚುಮರೆ ಮಾಡಬೇಕೆ ? ಸಂಕೋಚಪಟ್ಟುಕೊಳ್ಳಬೇಕೆ ?"

"ಏನೂ ಇಲ್ಲಮ್ಮ...,ನಿಜವಾಗಿ ಏನೂ ಇಲ್ಲ."

"ನಿನ್ನ ಗಂಡ ಏನಾದರೂ ಅಂದನೇನೆ ?"

"ಛಿ ! ಛಿ ! ಅವರಬಾಯಲ್ಲಿ ಒಂದುಕೆಟ್ಟಮಾತೂ ಬರುವುದಿಲ್ಲ."

"ಏನೂ ಇಲ್ಲದೆ ಹೀಗಾಗುತ್ತೀಯಾ ?"

"ಮೈಯಲ್ಲಿ ಸ್ವಲ್ಪ ಸರಿಯಾಗಿರಲಿಲ್ಲ. ಹುಷಾರಾಗುತ್ತೆ ?"

"ಏನಾಗಿದೆ."

"ಎರಡುದಿವಸದಿಂದ ವಾಂತಿಯಾಗುತ್ತಿದೆ. ಹೊಟ್ಟೆ ತೊಳಸುತ್ತೆ. ತಲೆ ಸುತ್ತುತ್ತದೆ."

"ತಿಮ್ಮಮ್ಮನವರಿಗೆ ಹೇಳಿದೆಯಾ ?"

"ಏನು ದೊಡ್ಡ ವಿಷಯವೆಂದು ಹೇಳಲಿಲ್ಲ."

ಅಂಬುಜಮ್ಮನವರು ನರಸುವನ್ನು ಅಪ್ಪಿಕೊಂಡು ಪಕ್ಕದಲ್ಲಿ ಕುಳ್ಳಿರಿಸಿ ಕೊಂಡು, ತಲೆನೇವರಿಸುತ್ತಾ

"ನೀನು ಪುಣ್ಯವಂತೆ ನರಸೂ. ಹುಟ್ಟಿದಮನೆ, ಸೇರಿದಮನೆ ಎರಡಕ್ಕೂ ನಿನ್ನಿಂದ ಶ್ರೇಯಸ್ಸು."

"ಏಕಮ್ಮ ಹಾಗೆ ಹೇಳುವಿರಿ ?"

"ಇನ್ನು ಒಂಬತ್ತು ತಿಂಗಳು ತಡೆದು ಕೇಳು, ಹೇಳುತ್ತೇನೆ."

"ಹಾಗೆಂದರೆ ?"

"ಹಾಗೆಂದರೆ ನೀನು ತಾಯಿಯಾಗುವಳಿದ್ದಿ ? ನಿನ್ನ ಹೊಟ್ಟೆಯಲ್ಲಿರುವ ಹೊಸಜೀವ ಹೊರಗೆ ಬರಲು ತವಕಪಡುತ್ತಿದೆ."

ನರಸೂ ಅವಾಕ್ಕಾದಳು. ಅಂಬುಜಮ್ಮನವರಿಗೆ ಏನು ಹೇಳಬೇಕೋ ಅವಳಿಗೆ ತೋರಲಿಲ್ಲ; ಸಂತೋಷವ್ಯಕ್ತಮಾಡಬೇಕೋ, ದುಃಖ ವ್ಯಕ್ತ ಮಾಡಬೇಕೋ ಹೊಳೆಯಲಿಲ್ಲ.

"ನಿನ್ನ ಗಂಡನಿಗೆ ತಿಳಿಸಿದೆಯಾ ?"

"ಇನ್ನೂ ಇಲ್ಲ."

"ಮಹಾಬಲನಿಗೆ 'ನಾನು ನೋಡಬೇಕೂ ಎಂದು ಹೇಳಿದೆ' ಎಂದು ತಿಳಿಸು."

"ನನಗೆ ನಾಚಿಕೆಯಾಗುತ್ತದೆ."

"ನಾಚಿಕೆಯಲ್ಲ-ಹೆಮ್ಮೆಯಾಗಬೇಕು."

ಆ ಸ್ಥಿತಿಯಲ್ಲಿ ಅವಳಿಗಾಗುವ ಅನುಭವಗಳನ್ನೆಲ್ಲಾ ಪೂರ್ವಭಾವಿ ಯಾಗಿ ತಿಳಿಸಿ

"ಹೆದರಬೇಡ. ನಾನಿದ್ದೇನೆ. ನಿನಗೇನುಬೇಕು ಹೇಳು. ಊಟ, ತಿಂಡಿ, ಏನು ಆಸೆಯಾಗುತ್ತದೆ ಹೇಳು. ಮನೆಯಲ್ಲಿ ತಿಮ್ಮಮ್ಮನವರು

ಮಾಡಲು ಸಾಧ್ಯವಾಗದಿದ್ದರೆ ನನಗೆ ಬಂದು ಹೇಳು--ನಾನು ಮಾಡಿಕೊಡುತ್ತೇನೆ."

ಎಂದರು. ಅಂಬುಜಮ್ಮನವರ ಅವ್ಯಾಜ ಅಂತಃಕರಣ ನರಸುವಿನ ಹೃದಯ ಕಲಕಿತು. ಅಂಬುಜಮ್ಮನವರನ್ನು ತಬ್ಬಿಕೊಂಡು ಮಕ್ಕಳಂತೆ ಅತ್ತುಬಿಟ್ಟಳು.

ಅಂಬುಜಮ್ಮನವರ ಸಂದೇಶವನ್ನು ನರಸೂ ಮಹಾಬಲನ ಕಿವಿಯ ಮೇಲೆ ಹಾಕಿದಾಗ ಅವನಿಗೆ ಆಶ್ಚರ್ಯವಾಯಿತು. 'ಏಕೆ' ಎಂದು ಕೇಳಿದ. 'ನನಗೇನೂ ಅವರು ಹೇಳಲಿಲ್ಲ' ಎಂದು ನರಸೂ ಉತ್ತರವಿತ್ತಳು.

ಅಂಗಡಿಗೆ ಹೋಗುವ ಮೊದಲು ಅಂಬುಜಮ್ಮನವರನ್ನು ಕಾಣಲು ಮಹಾಬಲ ಹೋದ.

"ಕುಳಿತುಕೋ, ಮಹಾಬಲ, ಕಾಫಿ ತಂದುಕೊಡುತ್ತೇನೆ" ಎಂದರು.

"ಬೇಡಮ್ಮ, ಈಗತಾನೆ ಆಗಿದೆ."

"ಇರಲಿ ಕುಳಿತುಕೊಳ್ಳೊ, ಜಂಬಮಾಡಬೇಡ."

"ಗುಂಡೂರಾಯರು ಮನೆಯಲಿಲ್ಲವೇ ?"

"ವಾಕಿಂಗ್ ಹೋಗಿದ್ದಾರೆ."

"ನನ್ನ ನೋಡಬೇಕೆಂದರಂತೆ !"

"ಹೌದು. ನರಸೂ ಇನ್ನೇನು ಹೇಳಿದಳು."

"ಏನೂ ಹೇಳಲಿಲ್ಲ. ಅಷ್ಟೇ ಅವಳು ಹೇಳಿದ್ದು."

ಅಂಬಜಮ್ಮ ಎದ್ದುಹೋಗಿ ಐದು ನಿಮಿಷಗಳಲ್ಲಿ ಕಾಫಿ ಬೆರಸಿ ತಂದು ಮಹಾಬಲನ ಕೈಗಿತ್ತು

"ನೋಡು ಮಹಾಬಲ, ನರಸೂ ಮೈಯಲ್ಲಿ ಚೆನ್ನಾಗಿಲ್ಲ. ನೀನು ಹುಡುಗ—ನಿನಗೊಂದೂ ಗೊತ್ತಾಗಲ್ಲ, ತಿಮ್ಮಮ್ಮನವರಿಗೆ ವಯಸ್ಸಾಗಿದೆ. ಅದಕ್ಕಾಗಿ ನಿನ್ನನ್ನು ಬರಹೇಳಿದೆ."

"ಏನಾಗಿದೆ ಅವಳಿಗೆ."

"ಗಾಬರಿಯಾಗಬೇಡ. ಆಗಬೇಕಾದ್ದೇ ಆಗಿದೆ. ಆದರೆ ಈ ಸ್ಥಿತಿಯಲ್ಲಿ ಅವಳನ್ನು ನೀನು ಚೆನ್ನಾಗಿ ನೋಡಿಕೊಳ್ಳಬೇಕು."

"ನಾನು ಅವಳಿಗೆ ಯಾವುದಕ್ಕೂ ಕೊರತೆಮಾಡಿಲ್ಲವಲ್ಲ."

"ಹುಚ್ಚು ಹುಡುಗ, ನಾನು ಆಕ್ಷೇಪಣೆಮಾಡುತ್ತಿಲ್ಲಪ್ಪಾ. ಗಂಡಸರು ನಿಮಗೆ ಕೆಲವುವಿಷಯ ತಿಳಿಯುವುದಿಲ್ಲ. ಹೇಳುವುದಕ್ಕೆ ನಾನು ಕರೆಸಿದೆ."

"ಹೇಳಿತಾಯಿ. ನೀವು ಏನುಹೇಳಿದರೂ ಮಾಡುತ್ತೇನೆ."

"ನರಸೂ ಇನ್ನು ಕೆಲವು ತಿಂಗಳಲ್ಲಿ ನಿನ್ನಕೈಗೆ ಮಗನನ್ನೋ ಮಗಳನ್ನೋ ಒಪ್ಪಿಸುತ್ತಾಳೆ."

"ಹಾ !"

"ಹಾನೂ ಇಲ್ಲ ಹೂನೂ ಇಲ್ಲ. ಇನ್ನು ಮೇಲೆ ಅವಳಿಗೆ ಬಯಕೆಗಳಾಗುತ್ತವೆ. ಅದನ್ನು ಕೇಳಿಕೊಂಡು ಅವಳು ಏನು ಬಯಸುತ್ತಾಳೋ ತಂದುಕೊಡು. ಅವಳ ಮನಸ್ಸು ನೋಯದಂತೆ, ಅವಳಿಗೆ ಬೇಸರವಾಗದಂತೆ ನೋಡಿಕೋ. ಎರಡು ದಿವಸ ಮೂರು ದಿವಸಕ್ಕೊಮ್ಮೆ ಅವಳನ್ನು ಲಾಲ್‌ಬಾಗಿಗೊ ಕಬ್ಬನ್‌ಪಾರ್ಕಿಗೊ ಒಳ್ಳೆಯ ಸಿನೀಮಾ, ನಾಟಕ, ಸಂಗೀತಕ್ಕೋ ಕರೆದುಕೊಂಡು ಹೋಗು."

"ಅವಳ ತಾಯಿಗೆ ಹೇಳಿಕಳಿಸಲೇ ?"

"ಅದಕ್ಕೆ ಈಗಲೇ ಏನೂ ಅವಸರವಿಲ್ಲ. ನಾನು ಬಂದು ನೋಡಿಕೊಳ್ಳುತ್ತಿರುತ್ತೇನೆ. ದಿವಸ ತುಂಬುವ ಹೊತ್ತಿಗೆ ನಿಮ್ಮ ಅತ್ತೆಗೆ ಕಾಗದ ಬರೆಯುವಂತೆ."

"ಹಾಗೇ ಆಗಲಿ."

"ಬಾಯಲ್ಲಿ ಆಗಲಿ ಎಂದು ಹೇಳಬೇಡ. ನಿನ್ನ ಅಂಗಡೀನೆ ನಿನಗೆ ದೊಡ್ಡದು."

"ಇಲ್ಲಮ್ಮ, ನಿಮ್ಮ ಮಾತು ಚಾಚೂ ತಪ್ಪುವುದಿಲ್ಲ."

ಅಂಬುಜಮ್ಮನವರು ಹೇಳಿದ ಸುದ್ದಿ ಕೇಳಿ ಮಹಾಬಲನಿಗೆ ವಿಚಿತ್ರಾನುಭವವಾಯಿತು. 'ನಾನು ತಂದೆಯಾಗುತ್ತೇನೆ' ಎಂದು ತನಗೇ ಹೇಳಿಕೊಂಡ.

'ಹುಟ್ಟುವ ಮಗು ಹೇಗಿರಬಹುದು' ಎಂದು ಮನಸ್ಸಿನಲ್ಲಿ ಚಿತ್ರಿಸಲೆತ್ನಿಸಿದ.

ಅಂದು ಅಂಗಡಿಯಲ್ಲಿ ಅವನ ಮನಸ್ಸು ನಿಲ್ಲದು. ನಿತ್ಯಕ್ಕಿಂತ ಬೇಗ ಅಂಗಡಿ ಬಾಗಿಲುಹಾಕಿಕೊಂಡು ಮನೆಸೇರಿದ. ಅಂದು ಜತೆಯಲ್ಲಿ ಊಟಕ್ಕೆ ಕುಳಿತ ಚೌಡಪ್ಪನವರು

"ಇದೇನಪ್ಪ-ಇವತ್ತು ಇಷ್ಟು ಬೇಗ ಬಂದುಬಿಟ್ಟೆ" ಎಂದು ಕೇಳಿದರು.

"ಮೈಯಲ್ಲಿ ಸರಿಯಾಗಿಲ್ಲ-ತಲೆನೋಯುತ್ತಿತ್ತು-ಬೇಗಬಂದೆ."

"ಊಟಮಾಡಿ ಮಲಗಿಬಿಡು. ಒಂದುದಿನ ಅಂಗಡಿ ಇಲ್ಲದಿದ್ದರೇನಂತೆ."

ಎಂದು ಹೇಳಿದರು.

ಮಹಾಬಲ ತಂದೆಯಮಾತನ್ನು ಅಕ್ಷರಶಃ ಪರಿಪಾಲಿಸಿದ.

ಗಂಡ ಮನೆಯಲ್ಲಿ ನಿಂತುದನ್ನು ಕಂಡು ನರಸೂ ಹಿರಿಹಿರಿ ಹಿಗ್ಗಿದಳು. 'ತಲೆನೋವು ಬರೀನೆಪ-ಅವರು ನನ್ನ ಸಲುವಾಗಿಯೇ ನಿಂತಿದ್ದಾರೆ' ಎಂದು ಅವಳು ತಿಳಿದುಕೊಂಡಳು.

ತಾಂಬೂಲ ತೆಗೆದುಕೊಂಡುಬಂದ ಹೆಂಡತಿಯನ್ನು ಮಹಾಬಲ ಕಣ್ತುಂಬ ಮನತುಂಬ ನೋಡಿದ.

"ಏನು ಹೀಗೆ ನೋಡುವಿರಿ. ಹೊಸಬರನ್ನು ನೋಡುವಹಾಗೆ!"

ಎಂದು ನರಸೂ ಕೇಳಿದಳು.

"ಈಗ ನೀನು ಹೊಸಬಳಲ್ಲವೇ ?"

"ಹೊಸಬಳು! ಹಾಗೆಂದರೇನು ?"

"ಹೊಸಬನನ್ನೋ - ಹೊಸಬಳನ್ನೋ ಈ ಮನೆಗೆ ಕರೆದುಕೊಂಡು ಬರುತ್ತೀ."

ನರಸೂ ಮುಖ ನಾಚಿಕೆಯಿಂದ ಕೆಂಪೇರಿತು. ಮುಖದಮೇಲೆ ಬೆವರು ಹನಿಗಳು ಕಾಣಿಸಿಕೊಂಡವು.

"ಅಂಬುಜಮ್ಮನವರು ಹೇಳಿಬಿಟ್ಟಿದ್ದಾರೆ."

"ಹೇಳಿ-ನನಗೆ ಛೀಮಾರಿಮಾಡಿ ಕಳಿಸಿದ್ದಾರೆ."

"ಏಕೆ? ನಾನೇನೂ ನಿಮ್ಮನ್ನ ದೂರಲಿಲ್ಲಾಂದ್ರೆ. ನನ್ನ ಮೇಲೆ ಕೋಪ ಮಾಡಿಕೊಳ್ಳಬೇಡಿ."

"ನಿನ್ನ ಮೇಲೆ ಕೋಪಮಾಡಿಕೊಳ್ಳುವಷ್ಟು ಮೂಢನೇ. ನನಗೆ ಛೀಮಾರಿಮಾಡುವ ಹಕ್ಕು ಅಂಬುಜಮ್ಮನವರಿಗಿಲ್ಲವೇ ?—ನರಸೂ. ನೀನೇಕೆ ನನಗೆ ಹೇಳಲಿಲ್ಲ."

"ಏನಂತ ಹೇಳಲಿ. ನನಗೆ ನಾಚಿಕೆಯಾಯಿತು."

ಪ್ರೀತಿಯಿಂದ ಹೆಂಡತಿಯ ಕೈಹಿಡಿದು ಹತ್ತಿರಕರೆದು ಕೂರಿಸಿಕೊಂಡು "ನರಸೂ, ನನ್ನಮೇಲೆ ನಿನಗೆ ಕೋಪವೇ ? ಎಂದು ಕೇಳಿದ.

"ನಿಮ್ಮ ಮೇಲೆ ಏತಕ್ಕೆ ಕೋಪ. ನನಗೆ ನೀವೇನು ಅನ್ಯಾಯ ಮಾಡಿರುವಿರಿ ?

"ನಾನು ನಿನ್ನನ್ನು ಸರಿಯಾಗಿ ವಿಚಾರಿಸಿಕೊಳ್ಳುತ್ತಿರಲಿಲ್ಲ. ಒಂದು ಕಡೆಗೂ ಜತೆಯಲ್ಲಿ ಕರೆದುಕೊಂಡು ಹೋಗುತ್ತಿರಲಿಲ್ಲ."

"ಅಂಗಡಿ ಕೆಲಸದಿಂದ ಪುರಸೊತ್ತಿರಲಿಲ್ಲವಲ್ಲಾ."

"ನಿಜ - ಪುರಸೊತ್ತಿರಲಿಲ್ಲ. ಆದರೆ ಪುರಸೊತ್ತುಮಾಡಿಕೊಳ್ಳಬೇಕಾಗಿತ್ತು. ಅಂಬುಜಮ್ಮನವರು ನನ್ನ ಕಣ್ಣುತೆರೆದರು ನರಸೂ. ಸಂಕೋಚ ಪಡದೆ ಹೇಳು - ನಿನಗೇನುಬೇಕು ?"

"ನನಗೆ ಯಾವಾಗಲೂ ಬೇಕಾದದ್ದು ಒಂದೇ ಪದಾರ್ಥ-ನೀವು."

"ಅದಂತೂ ಯಾವಾಗಲೂ ನಿನ್ನದು. ಈಗ ಏನು ಬೇಕು- ನಿನಗೇನು ಆಸೆ ಇದೆ."

"ನನಗೇನೂ ಆಸೆಯಿಲ್ಲ. ನೀವು ತೊಂದರೆಪಟ್ಟುಕೊಳ್ಳದೆ ಪ್ರೀತಿಯಿಂದ ಏನು ತಂದುಕೊಟ್ಟರೂ ಸಂತೋಷವಾಗಿಟ್ಟುಕೊಳ್ಳುತ್ತೇನೆ."

"ನಾಲ್ಕುಗಂಟೆಗೆ 'ಸಿಲ್ಕ್‌ಪ್ಯಾಲೆಸ್ಸಿ'ಗೆ ಹೋಗೋಣ. ನಿನಗೆ ಏನು ಇಷ್ಟವೋ ತೆಗೆದುಕೋ. ಅಲ್ಲಿಂದಬಂದು ಸಿನೀಮಾಕ್ಕೆ ಹೋಗೋಣ."

"ಇವತ್ತು ಅಂಗಡಿಗೆ ಹೋಗುವುದಿಲ್ಲವೆ ?"

"ಇಲ್ಲ. ಅಂಗಡಿಗೆ ರಜಾ."

ನರಸೂ ಉತ್ಸಾಹಕ್ಕೆ ಕೊನೆಮೊದಲಿಲ್ಲ. ಮೂರುಗಂಟೆಯಿಂದಲೇ ತಲೆಬಾಚಿಕೊಂಡು, ಹೊಸಸೀರೆಯುಟ್ಟುಕೊಂಡು ಹೊರಡಲು ಸಿದ್ಧಳಾದಳು ! ಗಂಡ ಏಳುವ ಹೊತ್ತಿಗೆ ತಿಂಡಿ, ಕಾಫಿ ಮಾಡಿದ್ದಳು.

ಮಹಾಬಲ ಎದ್ದವನೇ ಲಗುಬಗೆಯಿಂದ ಮುಖತೊಳೆದುಕೊಂಡು, ಬಟ್ಟೆಧರಿಸಿ, ಹೆಂಡತಿಯೊಂದಿಗೆ ಉಪಹಾರ ಮುಗಿಸಿ ಹೊರಟುಬಿಟ್ಟ.

'ಸಿಲ್ಕ್‌ಪ್ಯಾಲೆಸ್ಸಿ' ನ ಬಟ್ಟೆಗಳನ್ನೆಲ್ಲಾ ತೆಗೆಸಿದ್ದಾಯಿತು. ಬಂಗಾಳಾ ಸಿಲ್ಕ್, ಕಂಚೀ, ಕೊಯಿಮುತ್ತೂರು, ಬೆಂಗಳೂರು ಸಿಲ್ಕ್‌ಸೀರೆಗಳ ಪ್ರದರ್ಶನವಾಯಿತು. ಮಹಾಬಲ

"ಜಾರ್ಜೆಟ್ ಸೀರೆ ಇದೆಯೇ ?"

ಎಂದು ಕೇಳಿದ.

ಅಂಗಡಿಯವರು ಬಗೆಬಗೆ ಬಣ್ಣದ ಜಾರ್ಜೆಟ್ ಸೀರೆಗಳನ್ನು ಅವನ ಮುಂದೆ ಹರಹಿದರು.

"ಇವುಗಳಲ್ಲಿ ಒಂದು ತೆಗೆದುಕೋ."

ಎಂದು ಮಹಾಬಲ ಹೇಳಿದ. ನರಸೂ ನಸುನಾಚಿ

"ಜಾರ್ಜೆಟ್ ನನಗೆ ಚೆನ್ನಾಗಿರುವುದಿಲ್ಲ. ಧರ್ಮಾವರದ ಸೀರೆ ತೆಗೆದು ಕೊಳ್ಳುತ್ತೇನೆ."

ಎಂದಳು. ಅವಳ ಮಾತಿನ ಅರ್ಥ ತಿಳಿಯದೆ ಮಹಾಬಲ

"ಏಕೆ ? ಚೆನ್ನಾಗಿರುತ್ತದೆ ? ಹತ್ತಿರ ಒಂದಾದರೂ ಜಾರ್ಜೆಟ್ ಇರಲಿ ತೆಗೆದುಕೋ."

ಎಂದ. ನರಸೂ ಅವನಿಗೆಲ್ಲಿ ಅಸಮಾಧಾನವಾಗುತ್ತದೋ ಎಂದು

"ಜಾರ್ಜೆಟ್ ಬಾಳಿಕೆ ಬರುವುದಿಲ್ಲ. ನೀರಿಗೆ ಹಾಕಿದರೆ ಕೆಟ್ಟುಹೋಗುತ್ತದೆ. ಸುಮ್ಮನೆ ದುಡ್ಡು ದಂಡ"

ಎಂದಳು.

ಮಹಾಬಲ ಎರಡು ಧರ್ಮಾವರದ ಸೀರೆಗಳನ್ನಾರಿಸಿದ. ಅವುಗಳಿಗೊಪ್ಪುವ ಕುಪ್ಪಸದ ಕಣಗಳನ್ನು ನರಸೂ ಆರಿಸಿದಳು.

ಅಂಗಡಿಯವನು ಹಾಕಿದ ಬಿಲ್ ಹಣಕೊಟ್ಟು ಮಹಾಬಲ ಹೆಂಡತಿಯೊಂದಿಗೆ 'ಪ್ರಭಾತ' ಚಿತ್ರಮಂದಿರದ ಕಡೆಗೆ ಹೊರಟ.

ಮಹಾಬಲ ಚಿತ್ರಮಂದಿರದಲ್ಲಿ 'ಮಹಾರಥಿ ಕರ್ಣ'ನನ್ನು ನೋಡುತ್ತ ಕುಳಿತ ; ನರಸೂ ಮಹಾಬಲನನ್ನು ನೋಡುತ್ತ ಕುಳಿತಳು. ಅವಳ ಮನಸ್ಸು ಹೆಮ್ಮೆ, ಆನಂದದಿಂದ ತುಂಬಿ ಹೋಗಿತ್ತು. ಅವಳಿಗೆ ಸಿನೀಮಾ ಬೇಕಾಗಿರಲಿಲ್ಲ ; ಗಂಡನಜತೆ ಬಂದಿರುವೆನಲ್ಲಾ—ಗಂಡ ತನ್ನನ್ನು ಇಷ್ಟು ಆದರಿಸುತ್ತಾನಲ್ಲಾ ಎಂಬ ಆನಂದ ಅವಳ ಹೃದಯವನ್ನು ತುಂಬಿತ್ತು.

ಸಿನೀಮಾ ಮುಗಿಸಿಕೊಂಡು ಮನೆಗೆ ಹಿಂದಿರುಗುವಾಗ ಮಹಾಬಲ ಕೇಳಿದ

"ಸಿನೀಮಾ ಹೇಗಿತ್ತು ?"

"ತುಂಬಾ ಚೆನ್ನಾಗಿತ್ತು."

"ನಿಜವಾಗಿ ನೀನು ಸಿನೀಮಾ ನೋಡಿದೆಯಾ ನರಸೂ?"

"ತನ್ನ ಕಳ್ಳತನ ಪತ್ತೆಯಾಯಿತೆಂದು ನಾಚಿ, ನಕ್ಕು ನರಸು

"ಏಕೆ ಹಾಗೆ ಕೇಳುವಿರಿ? ನೋಡದೆ ಉಂಟೇ?"

"ನೀನು ನನ್ನ ನೋಡುತ್ತಿದ್ದೆ—ಸಿನೀಮಾ ನೋಡುತ್ತಿರಲಿಲ್ಲ."

"ಹಾಗೇನಿಲ್ಲ"

ಎಂದು ಹೇಳಿದಳು, ಅವಳ ಉತ್ತರ ದುರ್ಬಲವಾಗಿತ್ತು.

ಮನೆಗೆ ಬಂದು ಬಟ್ಟೆ ಬದಲಾಯಿಸುವಾಗ ಮಹಾಬಲ ಅತಃಕರಣ ದಿಂದ

"ನಾನು ನಿಜವಾಗಿಯೂ ಭಾಗ್ಯಶಾಲಿ ನರಸೂ"

"ಭಾಗ್ಯ ನನ್ನದು"

"ನಿನ್ನ ಪ್ರೇಮ ನೋಡಿ ನನ್ನ ಹೃದಯ ಬಿರಿಯುತ್ತಿದೆ. ಆದರೆ ಭಯವೂ ಆಗುತ್ತದೆ."

"ಭಯ—ಏಕೆ"

"ಅತಿ ಯಾವಾಗಲೂ ಒಳ್ಳೆಯದಲ್ಲ ಎಂದು ಹಿರಿಯರು ಹೇಳುವು ದಿಲ್ಲವೇ?"

"ಪ್ರೇಮದಲ್ಲಿ ಅತಿ—ಮಿತಿ ಇಲ್ಲವೇ ಇಲ್ಲ, ಅದು ಯಾವ ಅಳತೆಗೂ ಸಿಕ್ಕುವುದಿಲ್ಲ."

"ನಿನ್ನ ಪ್ರೇಮಭಂಗ ನಾನು ಮಾಡುವುದಿಲ್ಲ ನರಸೂ. ನಾನು ಏನಾ ದರೂ ತಪ್ಪುಮಾಡಿದರೆ ಅದು ಅರಿಯದೆ ಮಾಡಿದ ಅಪರಾಧ ಎಂದು ಭಾವಿಸು. ಉದ್ದೇಶಪೂರ್ವಕವಾಗಿ ನಾನು ನಿನಗೆ ಯಾವ ನೋವನ್ನೂ ಉಂಟುಮಾಡಿಲ್ಲ."

"ನೀವೇನು ತಪ್ಪುಮಾಡಿದಿರಿ?"

"ಇಷ್ಟು ದಿವಸ ನಿನ್ನನ್ನು ಸರಿಯಾಗಿ ವಿಚಾರಿಸಿಕೊಳ್ಳಲಿಲ್ಲ. ನಾನಾ ಯಿತು—ಅಂಗಡಿಯಾಯಿತು—ಸಂಪಾದನೆಯಾಯಿತು."

"ಅದೂ ನನಗಾಗಿಯೇ ಅಲ್ಲವೇ? ನನ್ನನ್ನು ಸುಖವಾಗಿರಿಸಬೇಕೆಂದೇ ಅಲ್ಲವೇ ನೀವು ಸಂಪಾದನೆ ಮಾಡುವುದು?"

"ನಿಸ್ಸಂದೇಹವಾಗಿ."

"ನಾನು ತಿಳಿದವಳಲ್ಲ-ಹಿರಿಯರು ಆಡುವ ಮಾತು ಕೇಳಿ ಒಂದೆರಡು ವಿಷಯ ತಿಳಿದುಕೊಂಡಿದ್ದೇನೆ. ನಾನೊಂದು ಮಾತು ಹೇಳಲೇ?"

"ಅವಶ್ಯಕವಾಗಿ ಹೇಳು."

"ನಮ್ಮ ಸೌಖ್ಯಕ್ಕೆ ಹಣವೇ ಮುಖ್ಯವಲ್ಲ, ದೇವರು ನಮ್ಮನ್ನು ಚೆನ್ನಾಗಿಯೇ ಇರಿಸಿದ್ದಾನೆ. ಎಂದೂ ನಾವು ಹೊಟ್ಟೆ ಬಟ್ಟೆಗೆ ಯೋಚನೆ ಮಾಡಬೇಕಾಗಿಲ್ಲ. ನೀವು ಸಂಪಾದನೆ ಮಾಡಬಾರದೆಂದು ನಾನು ಹೇಳುತ್ತಿಲ್ಲ. ಆದರೆ ಅದಕ್ಕಾಗಿಯೇ ಹಲುಬಬೇಡಿ. ದುಡ್ಡಿನ ದಾಹ ಬಹಳ ಕೆಟ್ಟ ದಾಹ. ಆ ದಾಹ ಹತ್ತಿದರೆ ಜೀವನವೇ ಬೇಸರವಾಗುತ್ತದೆ."

"ನಿಜ ನರಸೂ—ನೀನು ಹೇಳುತ್ತಿರುವುದು ಅಕ್ಷರಶಃ ನಿಜ. ಖಂಡಿತವಾಗಿ ನೀನು ಹೇಳಿದಂತೆ ಮಾಡುತ್ತೇನೆ."

ಎಂದು ಹೇಳಿದ.

ಇಡಿಯ 'ಸಿಲ್ಕ್‌ಪ್ಯಾಲೆಸ್' ತನಗೆ ಮಹಾಬಲಕೊಂಡುಕೊಟ್ಟದ್ದರೂ ನರಸೂಗೆ ಅಷ್ಟು ಸಂತೋಷವಾಗುತ್ತಿರಲಿಲ್ಲ. ತನ್ನ ವಸ್ತು ತನ್ನದಾಯಿತಲ್ಲಾ ಎಂದು ಹಿರಿಹಿರಿ ಹಿಗ್ಗಿದನು. ಅವಳ ಮುಖದಲ್ಲಿ ಮೂಡಿದ ಬೆಳಕು, ಕಣ್ಣಲ್ಲಿ ಹೊಳೆದ ತೇಜಸ್ಸನ್ನು ಕಂಡು ಮಹಾಬಲನ ಮನಸ್ಸು ಸಂತಸಗೊಂಡಿತು. ಆದರೆ ಆ ಬೆಳಕು ಅವನ ಕಣ್ಣನ್ನು ಕೋರೈಸಿತು.

## ೧೮

ತಿಮ್ಮಮ್ಮನವರು ಹಾಸಿಗೆ ಹಾಸಿಕೊಂಡು ಅದರ ಮೇಲೆ ಕುಳಿತು ಸ್ವಲ್ಪ ಹೊತ್ತು ಬಾಯಿಗೆ ಬಂದ ಹಾಡು ಹೇಳಿಕೊಂಡು ಕಾಲತಳ್ಳುತ್ತಿದ್ದರು. ಬೇಗ ನಿದ್ರೆ ಹತ್ತುತ್ತಿರಲಿಲ್ಲ. ಮುದುಕಿ ತನ್ನ ಪೂರ್ವಜೀವನದ ಸುಖಕನಸು ಕಂಡು ಹಿಗ್ಗುತ್ತಿತ್ತು.

ಮಹಾಬಲ ಮನೆಗೆ ಬೇಗ ಬಂದ ದಿವಸ ಅಜ್ಜಿಯ ಹಾಸಿಗೆಯ್ಮೇಲೆ ಕುಳಿತು ಆಕೆಯೊಂದಿಗೆ ಸ್ವಲ್ಪ ಹರಟೆ ಹೊಡೆಯುತ್ತಿದ್ದ. ತಿಮ್ಮಮ್ಮನವರು ನರಸೂವನ್ನು ಕರೆದು ಹತ್ತಿರ ಕೂಡಿಸಿಕೊಳ್ಳುತ್ತಿದ್ದರು.

ಒಂದು ದಿನ ಪಕ್ಕದಲ್ಲಿ ಕುಳಿತಿದ್ದ ನರಸುವನ್ನು ನೇವರಿಸುತ್ತಾ ಪ್ರೀತಿಯಿಂದ

"ಚೊಚ್ಚಲು ಗಂಡೇ ಹುಟ್ಟುತ್ತದೆ ತಾಯಿ. ನನಗೆ ಸ್ವಲ್ಪವೂ ಅನುಮಾನವಿಲ್ಲ"

ಎಂದರು. ನಾಚಿಕೆಯಿಂದ ನರಸೂ ಮುಖ ಕೆಂಪೇರಿತು. ಮಹಾಬಲ ಅಜ್ಜಿಯನ್ನು ಕೇಳುತ್ತಾ

"ಇದು ಯಾವ ಊರಿನ ಕಣೀ ಅಜ್ಜಿ. ದೊಡ್ಡ ದೊಡ್ಡ ಡಾಕ್ಟರುಗಳಿಗೆ ಸಾಧ್ಯವಾಗದೆ ಇರುವುದನ್ನು ಇಷ್ಟು ಸುಲಭವಾಗಿ ಹೇಳುತ್ತಿರುವೆಯಲ್ಲಾ!"

"ನಿನ್ನ ಡಾಕ್ಟರುಗಳಿಗೆ ಏನು ಗೊತ್ತಾಗತ್ತೋ ಮಗೂ—ಬಣ್ಣದ ಕಹಿನೀರು ಕುಡಿಸುವುದು ಒಂದುಬಿಟ್ಟು, ಮುದಿಕಿಮಾತು ಅಸಡ್ಡೆ ಮಾಡಬೇಡ. ಮನೆಯಲ್ಲಿ ಕುಲದೀಪಕ ಬೆಳಗುತ್ತಾನೆ"

"ಹಾಗೇ ಆಗಲಜ್ಜಿ—ನಿನ್ನ ಆಶೀರ್ವಾದ."

"ಈ ಸಾರೆ ಬಾಣಂತನ ನಾನೇ ಮಾಡ್ತೀನಿಕಣೊ ಮಹಾಬಲ. ನರಸೂನ ತೌರುಮನೆಗೆ ಕಳಿಸಬೇಡ."

"ಇದೇನಜ್ಜಿ ನಿನ್ನ ಚಪಲ. ಈ ವಯಸ್ಸಿನಲ್ಲಿ ನಿನ್ನ ಕೈಯಲ್ಲಿ ದುಡಿಸುವುದು ಯಾವ ನ್ಯಾಯ—ಪಾಪ! ನಿನಗೆ ಕಣ್ಣೂ ಕಾಣಲ್ಲ."

"ಕಂಡಷ್ಟೇ ಸಾಕು ಬಿಡೋ. ಸಹಾಯಬೇಕಾದರೆ ಅಂಬುಜಮ್ಮನವರು ಬರುತ್ತಾರೆ."

ಎಂದು ನರಸೂ ಕಡೆ ತಿರುಗಿ

"ಅಮ್ಮ, ನೀನು ತೌರುಮನೆ ಬಾಣಂತನಕ್ಕೆ ಹೋಗಬೇಡ. ಈಗಿನ ಕಾಲದ ಆಸ್ಪತ್ರೆ ಬಾಣಂತನ ಮಾಡಿಸಿ ಮೈಯೇ ಕೆಡಿಸಿಬಿಡುತ್ತಾರೆ."

"ನೀನು ಕತ್ತಲೆಯ ಮನೆಯಲ್ಲಿ ಸೆರೆಹಾಕಿ ಖಾರ ಉಣ್ಣಿಸುತ್ತೀಯೇನೋ?"

ಎಂದು ಮಹಾಬಲ ನಗೆಯಾಡಿದ.

"ಅಪ್ಪಣ್ಣೀ, ಅದರ ಸುಖ ನಿನಗೇನು ಗೊತ್ತು. ಖಾರ ತಿಂದು ಕತ್ತಲೆ ಮನೆಯಲ್ಲಿದ್ದ ಹೊತ್ತಿಗೇ ನಾನಿನ್ನೂ ಕಲ್ಲುಗುಂಡು ಇದ್ದ ಹಾಗಿರುವುದು."

ಅಜ್ಜಿಯಮಾತಿನಂತೆ ನಡೆಯುವುದು ಸಾಧ್ಯವಿಲ್ಲವೆಂದು ಮಹಾಬಲನಿಗೆ ಗೊತ್ತಿತ್ತು. ವೃಥಾ ಎದುರುತ್ತರ ಹೇಳಿ ಅವರ ಮನಸ್ಸನ್ನೇಕೆ ನೋಯಿಸಬೇಕು. 'ಹಾಗೆಯೇ ಆಗಲಿ' ಎಂದು ಹೇಳಿದ.

ನರಸೂಗೆ ದಿನಗಳೆಯುತ್ತಾ ಬಂದಿತು. ಶಂಕರಮ್ಮನವರು ಬಂದು ಮಗಳನ್ನು ಬಾಣಂತನಕ್ಕೆ ಕರೆದುಕೊಂಡು ಹೋದರು.

ತಿಮ್ಮಮ್ಮನವರು ಅಸಮಾಧಾನ ಪಟ್ಟುಕೊಳ್ಳಲಿಲ್ಲ. 'ಚೊಚ್ಚಿಲ ಬಾಣಂತನ ತೌರುಮನೆಯಲ್ಲಿ ಆಗುವುದೇ ನ್ಯಾಯ' ಎಂದು ಸಮಾಧಾನ ಹೇಳಿಕೊಂಡರು.

ನರಸೂ ಹೊರಟು ಹೋದಮೇಲೆ ಮಹಾಬಲನ ಜೀವನಕ್ಕೆ ಬಹಳ ಬೇಸರವಾಯಿತು. ಆದಷ್ಟು ವೇಳೆಯನ್ನು ಅಂಗಡಿಯಲ್ಲೇ ಕಳೆದು ಮನೆಗೆ ಬಂದು ಊಟಮಾಡಿ ಮಲಗಿಬಿಡುತ್ತಿದ್ದ.

ನರಸೂ ಮಗನನೆತ್ತಿಕೊಂಡು ಹಿಂದಿರುಗುವ ದಿನವನ್ನು ತಿಮ್ಮಮ್ಮನವರು ಆತುರದಿಂದ ನಿರೀಕ್ಷಿಸಲಾರಂಭಿಸಿದರು. ಮಹಾಬಲ ಪ್ರತಿನಿತ್ಯವೂ ನರಸೂ ಆರೋಗ್ಯದ ವಿಷಯವನ್ನು ಅಜ್ಜಿಗೆ ವರದಿ ಒಪ್ಪಿಸಬೇಕಾಗಿತ್ತು.

ತಿಮ್ಮಮ್ಮನವರು ಬಯಸಿದ್ದೊಂದಾದರೆ ದೈವ ನೆನಸಿದ್ದೊಂದಾಯಿತು. ನರಸೂ ಪ್ರಯಾಣ ಬೆಳೆಸಿದ ಎರಡು ತಿಂಗಳಿಗೆ ತಿಮ್ಮಮ್ಮನವರು ಹಾಸಿಗೆ ಹಿಡಿದು ಮಲಗಿದರು. ಚೌಡಪ್ಪನವರು ಔಷದೋಪಚಾರ ಮಾಡಿಸಿದರು. ತಿಮ್ಮಮ್ಮನವರನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಮಡಿಹೆಂಗಸನ್ನೂ ಗೊತ್ತುಮಾಡಿದರು.

ತಮ್ಮ ಕಾಲ ಸಮೀಪವಾಯಿತೆಂದು ತಿಮ್ಮಮ್ಮನವರಿಗೆ ಚೆನ್ನಾಗಿ ಗೊತ್ತಿತ್ತು. ತಮ್ಮನ್ನು ಉಳಿಸಿಕೊಳ್ಳಲು ಅಳಿಯ, ಮೊಮ್ಮಗ ಮಾಡುತ್ತಿದ್ದ ಪ್ರಯತ್ನ ನೋಡಿ ಅವರಿಗೆ ವಿಷಾದವಾಗುತ್ತಿತ್ತು. ಆದರೆ ಮರಿಮಗನನ್ನು ನೋಡದೆ ಸಾಯಬಾರದೆಂಬ ನಿರ್ಧಾರ ಮದುಕಿಯ ಮನಸ್ಸಿನಲ್ಲಿ ಮೂಡಿತ್ತು. ಡಾಕ್ಟರು ಹೇಳಿದ ನಾಲ್ಕಾರು ಕ್ರೈಸಿಸ್ (crisis) ಗಳನ್ನು ದಾಟಿ ತಿಮ್ಮಮ್ಮನವರು ಡಾಕ್ಟರುಗಳಿಗೇ ಒಂದು ಸಮಸ್ಯೆಯಾಗಿ ಪರಿಣಮಿಸಿದರು.

ಒಂದು ದಿನ ಮಹಾಬಲನನ್ನು ಹತ್ತಿರ ಕರೆದು ತಿಮ್ಮಮ್ಮನವರು

"ಏನು ಹೆಸರಿಡುವೆಯೋ ?"

"ಯಾರಿಗೆ ಅಜ್ಜಿ ?"

"ಯಾರಿಗೇನು ಬಂತು ? ನಿನ್ನ ಮಗನಿಗೆ."

"ಮಗನೋ ಮಗಳೋ ಗೊತ್ತಾದಮೇಲೆ ತಾನೆ ಹೆಸರಿನ ಯೋಚನೆ."

"ನನ್ನ ಮಾತು ಸುಳ್ಳಾಗಲ್ಲ—ಹೆಸರೇನಿಡುತ್ತೀ ಹೇಳು."

"ಇನ್ನೂ ಯೋಚನೆಮಾಡಿಲ್ಲ ಅಜ್ಜಿ—ಏನಿಡಲಿ ನೀನೇ ಹೇಳು."

"ಹೇಳಿದರೆ ನಡೆಸುತ್ತಿಯೋ ? ಮುದುಕಿ ಸುತ್ತು ಹೋಯಿತು ಎಂದು ತಾತ್ಸಾರ ಮಾಡುತ್ತೀಯೋ ?"

"ಏನು ಮಾತು ಆಡುತ್ತೀ ಅಜ್ಜಿ. ನಿನ್ನ ಮರಿಮಗನನ್ನು ನೀನು ಎತ್ತಿಕೊಂಡು ಹರಸಬೇಡವೇ ?"

"ನನ್ನ ಹರಕೆ ಯಾವಾಗಲೂ ಇದ್ದೇ ಇರುತ್ತದೆ—ಆದರೆ ಎತ್ತಿ ಕೊಳ್ಳುತ್ತೀನೋ ಇಲ್ಲವೋ ? ಈ ಘಟ ಇನ್ನು ಹೆಚ್ಚುದಿನ ಉಳಿಯುವುದಿಲ್ಲ. ನಾನು ಹೇಳೋ ಹೆಸರು ಇಡುತ್ತೇನೆಂದರೆ ನಿಶ್ಚಿಂತೆಯಿಂದ ಸಾಯುತ್ತೇನೆ."

"ಹೇಳು ಅಜ್ಜಿ. ಖಂಡಿತ ನೀನು ಹೇಳುವ ಹೆಸರನ್ನೇ ಇಡುತ್ತೇನೆ."

"ನಾಗೇಂದ್ರಾಂತ ಇಡು."

ಮಹಾಬಲ ಸಂತೋಷದಿಂದ ಒಪ್ಪಿಕೊಂಡ.

ತಿಮ್ಮಮ್ಮನವರ ಮನಸ್ಸಿನಲ್ಲಿದ್ದ ದೊಡ್ಡದುಗುಡ ಪರಿಹಾರವಾಯಿತು.

ಒಂದು ಸೋಮವಾರ ಬೆಳಿಗ್ಗೆ ಸ್ನಾನ ಮುಗಿಸಿ ಬಂದು ತಿಮ್ಮಮ್ಮ ನವರು ಮಲಗಿ 'ಹರ—ಹರಾ' ಎಂದರು.

ಮಹಾಬಲನ ಹೃದಯಕ್ಕೆ ದಾರುಣವೇದನೆಯಾಯಿತು. ತಿಮ್ಮಮ್ಮ ನವರಿಗೆ ವಯಸ್ಸಾಗಿತ್ತು—ವಯೋಧರ್ಮಕ್ಕನುಗುಣವಾಗಿ ಅವರು ದೈವಾಧೀನರಾದರು—ಆದರೆ ಮಹಾಬಲನ ಮನಸ್ಸಿಗೆ ಹಳೆಯ ನೆನಹು ಬಂದು, ಅವನನ್ನು ಅಪಾರ ದುಃಖಕ್ಕೀಡುಮಾಡಿತು.

ಮಹಾಬಲನ ತಾಯಿ ತೀರಿಕೊಂಡಿದ್ದರು. ತಂದೆ ಎರಡನೆಯ ಮದುವೆ ಮಾಡಿಕೊಳ್ಳಲಿಲ್ಲ—ತಿಮ್ಮಮ್ಮನವರು ತಾಯಿಯಿಲ್ಲದ ಮಗುವನೆತ್ತಿ ಕೊಂಡರು—ಅದರ ಲಾಲನೆ ಪಾಲನೆ ಮಾಡಿದರು. ಮುದುಕಿ ತನಗಾಗಿ ಜೀವತೇದುದನ್ನು ನೆನಸಿಕೊಂಡು ಮಹಾಬಲ ಕಣ್ಣೀರಿಟ್ಟ.

## ೧೯

ಅನಂತರಾಮಯ್ಯನವರಿಗೆ ಹಾಸನದ ಡಿಸ್ಟ್ರಿಕ್ಟ್ ಆಫೀಸಿನಿಂದ ಚಿತ್ರ ದುರ್ಗದ ಡಿಸ್ಟ್ರಿಕ್ಟ್ ಆಫೀಸಿಗೆ ವರ್ಗವಾಗಿತ್ತು. ಚಿತ್ರದುರ್ಗದಲ್ಲೇ ಮಗಳ ಬಾಣಂತನದ ವ್ಯವಸ್ಥೆ ಮಾಡಿದರು.

ತಿಮ್ಮಮ್ಮನವರ ಕರ್ಮಾಂತರ ಮುಗಿದ ಮೇಲೆ ಒಂದು ದಿನ ಬಿಡುವು ಮಾಡಿಕೊಂಡು ಮಹಾಬಲ ಚಿತ್ರದುರ್ಗಕ್ಕೆ ಬಂದ.

ನರಸೂ ತುಂಬಿದ ಬಸುರಿ. ಮನೆಯಲ್ಲಿ ಓಡಿಯಾಡುವುದೇ ಅವಳಿಗೆ ಕಷ್ಟಸಾಧ್ಯವಾಗಿತ್ತು.ಅಜ್ಜಿ ತೀರಿಕೊಂಡ ಸುದ್ದಿ ಅವಳನ್ನು ಹಿಡಿದಲುಗಿಸಿತ್ತು.

"ನನ್ನದು ಬಲು ಹೀನ ಅದೃಷ್ಟ"

ಎಂದು ನೊಂದುಕೊಂಡು ನುಡಿದಳು.

ಅಜ್ಜಿಯ ಸಾವು ಮಹಾಬಲನಿಗೂ ತುಂಬ ದುಃಖವನ್ನುಂಟುಮಾಡಿತ್ತು. ತನ್ನ ದುಃಖವನ್ನು ನುಂಗಿಕೊಂಡು ಅವನು ನರಸುವನ್ನು ಸಮಾಧಾನಮಾಡಲೆತ್ನಿಸಿದ

"ಏಕೆ ಹಾಗೆನ್ನುವೆ ನರಸೂ. ಹಣ್ಣೆಲೆ ಉದುರಬೇಕಾದುದು ಪ್ರಕೃತಿ ನಿಯಮ ತಾನೆ? ಅಜ್ಜಿ ಎಷ್ಟುದಿವಸ ಬದುಕಿರುವುದು ಸಾಧ್ಯ"

"ಅವರು ಇನ್ನು ಆರುತಿಂಗಳಾದರೂ ಬದುಕಿರಲಿ ಎಂದು ನಾನು ದೇವರಲ್ಲಿ ಮೊರೆಯಿಟ್ಟಿದ್ದೆ."

"ಈಗ ನೀನು ಇಲ್ಲದ ವ್ಯಸನ ಹಚ್ಚಿಕೊಂಡು ಆಯಾಸಮಾಡಿಕೊಳ್ಳಬೇಡ."

"ಮನೆಯಲ್ಲಿ ಊಟ, ತಿಂಡಿ ಸರಿಯಾಗಿ ಆಗುತ್ತಿದೆಯೇ?"

"ಆಗುತ್ತಿದೆ. ಅಜ್ಜಿಯನ್ನು ನೋಡಿಕೊಳ್ಳುವುದಕ್ಕೆ ನೇಮಿಸಿದ್ದ ಕಾಡಮ್ಮನವರನ್ನೇ ಅಡಿಗೆಗೆ ಇಟ್ಟುಕೊಂಡಿದ್ದೇನೆ."

"ನಂಬಿಕಸ್ಥರೋ?"

"ಏಕೆ ಹೀಗೆ ಕೇಳುತ್ತೀ?"

"ಮನೆಯಲ್ಲಿ ನೀವೂ ಇರುವುದಿಲ್ಲ; ಮಾವನವರು ಎಲ್ಲಿಯೋ ಇರುತ್ತಾರೆ. ಈ ಕಾಲದಲ್ಲಿ ಯಾರನ್ನು ನಂಬುವುದು ಹೇಳಿ."

"ಅಂಥ ಭಯವೇನೂ ಇಲ್ಲ. ಕಾಡಮ್ಮನವರು ನಮ್ಮ ನಾಣೀಗೆ ಯಾವದೊ ಬಾದರಾಯಣ ಸಂಬಂಧವಂತೆ! ಅವನೇ ಕರೆದುಕೊಂಡು ಬಂದು ಇಟ್ಟಿದ್ದಾನೆ. ಆಕೆಗೂ ಯಾರು ದಿಕ್ಕಿಲ್ಲ."

"ನೀವು ಬೆಳ್ಳಗಿರುವುದನ್ನೆಲ್ಲಾ ಹಾಲೆಂದು ನಂಬುವಿರಿ. ಆಗಾಗ್ಗೆ ಸ್ವಲ್ಪ ಅಡಿಗೆಯ ಮನೆಯ ಕಡೆಗೂ ಲಕ್ಷ್ಯಹಾಕುತ್ತಿರಿ."

"ಹಾಗೆಯೇ ಆಗಲಿ ಇನ್ನೊಂದು ವಿಷಯ ನಿನಗೆ ಹೇಳೋಣ ಎಂದು ಬಂದೆ ನರಸೂ."

"ಏನದು?"

"ಉಮಾಪತಿ ತನ್ನ ಪಾಲು ತೆಗೆದುಕೊಂಡು ಅಂಗಡಿಯನ್ನು ಪೂರ್ತಿ ನನ್ನ ವಶಕ್ಕೆ ಬಿಡಬೇಕೆಂದಿದ್ದಾನೆ."

"ಏಕೆ? ಏನಾದರೂ ಮನಸ್ತಾಪ ಬಂದಿತೇ?"

"ಮನಸ್ತಾಪವೇನೂ ಇಲ್ಲ. ಅಂಗಡಿಯಲ್ಲಿ ಬರುವುದೆಷ್ಟು ಹೋಗುವುದೆಷ್ಟು. ಇಬ್ಬರಿಗೂ ಕೈತುಂಬ ಕಾಸು ಬರುವುದಿಲ್ಲ—ನೀನೇ ವಹಿಸಿಕೋ ಎಂದು ಹೇಳುತ್ತಿದ್ದಾನೆ."

"ಮಾವನವರಿಗೆ ಹೇಳಿದಿರಾ?"

"ಹೇಳಿದೆ."

"ಅವರು ಏನಂದರು?"

"ಯೋಚನೆ ಮಾಡು. ಸ್ನೇಹಕ್ಕೆ ಭಂಗಬರದ ಹಾಗೆ ಇತ್ಯರ್ಥ ಮಾಡಿಕೋ ಎಂದು ಹೇಳಿದರು."

"ಇನ್ನು ಅಂಗಡಿಯಾಯಿತು, ನೀವಾಯಿತೇನೊ?"

"ಏಕೆ ಹಾಗೆನ್ನುವೆ?"

"ಮಗನನ್ನು ಮಾತನಾಡಿಸಬೇಕಾದರೂ ಭಾನುವಾರ ಬರಬೇಕೆಂದು ಕಾಣುತ್ತದೆ."

ನರಸುವಿನ ಕೆಣಕು ಮಾತಿಗೆ ಮಹಾಬಲ ನಸುನಕ್ಕು

"ನನ್ನೇನು ಶುದ್ಧ ಮಾರ್ವಾಡಿ ಎಂದು ತಿಳಿದುಕೊಂಡು ಬಿಟ್ಟೆಯೋ?"

"ಇಲ್ಲ. ದೊಡ್ಡ ವ್ಯಾಪಾರಸ್ಥರು. ಮನೆಕಡೆ ಲಕ್ಷ್ಯಹಾಕುವುದಕ್ಕೆ ನಿಮಗೆ ಪುರುಸತ್ತೇ ಸಿಗುವುದಿಲ್ಲ ಎಂದು ಭಾವಿಸಿದೆ."

"ಅಂಗಡಿ ಕೆಲಸಕ್ಕೆ ಈಗ ಮೂರು ಜನರಿದ್ದಾರೆ. ಹೆಚ್ಚು ಕೆಲಸ ನನ್ನ ತಲೆಯ ಮೇಲೆ ಬೀಳಲ್ಲ. ಬೇಕಾದಷ್ಟು ಪುರಸತ್ತು ಸಿಕ್ಕುತ್ತದೆ."

ಗಂಡನ ಮಾತು ನಿಜವಾಗಲಿ ಎಂದು ನರಸೂ ಮನಃಪೂರ್ವಕವಾಗಿ ಹಾರೈಸಿದಳು.

ಮಹಾಬಲ ಚಿತ್ರದುರ್ಗದಲ್ಲಿ ಹೆಚ್ಚು ದಿನ ನಿಲ್ಲುವಂತಿರಲಿಲ್ಲ. ನರಸೂ

ವೈಕಳೆಯುವವರೆಗಾದರೂ ಅವನು ಅಲ್ಲಿಯೇ ನಿಲ್ಲಬೇಕೆಂದು ಶಂಕರಮ್ಮ ನವರು ಸೂಚಿಸಿದರು. ಉಮಾಪತಿಯ ಪಾಲುಗಾರಿಕೆಯ ಪ್ರಶ್ನೆ ಇತ್ಯರ್ಥ ವಾಗಬೇಕಾಗಿದ್ದುದರಿಂದ ಮಹಾಬಲ ಬೆಂಗಳೂರಿಗೆ ಹಿಂದಿರುಗಲೇ ಬೇಕಾ ಯಿತು.

ಚೌಡಪ್ಪನವರೂ ಗುಂಡೂರಾಯರೂ ಮಹಾಬಲನ ಅಂಗಡಿಯ ಆದಾಯ ವೆಚ್ಚವನ್ನು ಕೂಲಂಕಷವಾಗಿ ಪರಿಶೀಲಿಸಿ, ಉಮಾಪತಿಯ ಅಸಲು ಎರಡುಸಾವಿರದೈನೂರರ ಜತೆಗೆ ಒಂದುಸಾವಿರ ರೂಪಾಯಿ ಕೊಡುವುದೆಂದು ನಿಷ್ಕರ್ಷಿಸಿದರು.

ಅವರ ಸಲಹೆಯನ್ನು ಉಮಾಪತಿ ಸಂತೋಷವಾಗಿ ಸ್ವೀಕರಿಸಿದ. ಅವನನ್ನು ಮನೆಗೆ ಕರೆದುಕೊಂಡು ಕಾಫಿ ಫಲಹಾರ ಮಾಡಿಸಿ ಚೌಡಪ್ಪ ನವರು ಹಣಕೊಡುತ್ತಾ

"ಹೆಚ್ಚು ಬರಬೇಕಾದರೆ ಹೇಳು ಉಮಾಪತಿ, ಮನಸ್ಸಿನಲ್ಲಿ ಕ್ಲೇಶ ವಿಟ್ಟುಕೊಳ್ಳಬಾರದು. ಮಹಾಬಲನಿಗೆ ವ್ಯಾಪಾರದ ದಾರಿ ತೋರಿಸಿ ಅವನು ಒಂದು ನೆಲೆ ಕಾಣಲು ಸಹಾಯ ಮಾಡಿದವನು ನೀನು. ನೀನು ನೊಂದುಕೊಂಡರೆ ಅವನಿಗೆ ಶ್ರೇಯಸ್ಸಲ್ಲ. ಅಲ್ಲದೆ ಮುಂದೆಯಾದರೂ ಅನೇಕ ರೀತಿಯಲ್ಲಿ ನಿನ್ನ ಸಹಾಯ ಅವನಿಗೆ ಬೇಕಾಗುತ್ತದೆ."

"ಇದು ಯಾವ ದೊಡ್ಡ ವಿಷಯ ಸ್ವಾಮಿ ಅಸಮಾಧಾನಪಟ್ಟು ಕೊಳ್ಳುವುದಕ್ಕೆ. ಮಹಾಬಲನಿಗೆ ನಾನು ಯಾವಾಗಲೂ ಸ್ನೇಹಿತನೇ. ಯಾವ ಹೊತ್ತಿನಲ್ಲಿ ಅವನು ಯಾವ ಸಹಾಯ ಕೇಳಿದರೂ ಮಾಡಲು ನಾನು ಸಿದ್ಧನಾಗಿರುತ್ತೇನೆ."

ಉಮಾಪತಿಯ ವಿಶ್ವಾಸಪೂರ್ಣ ಮಾತು ಚೌಡಪ್ಪನವರ ಮನಸ್ಸಿ ನಿಂದ ದೊಡ್ಡ ಭಾರವನ್ನಿಳುಹಿದಂತಾಯಿತು.

## ೨೦

ಚಿತ್ರದುರ್ಗದಿಂದ ತಾರು ಬರಲು ತಡವಾಗಲಿಲ್ಲ. ಮನೆಗೆ ಬಂದ ತಾರನ್ನು ಚೌಡಪ್ಪನವರು ತೆಗೆದುಕೊಂಡು ಅಂಗಡಿಗೆ ಹೋಗಿ ಮಹಾಬಲ ನಿಗೆ ಸಂತೋಷದ ಸುದ್ದಿ ತಿಳಿಸಿಬಂದರು. ಗುಂಡೂರಾಯರಿಗೆ ಹೇಳಿದ ಹೊರತೂ ಅವರಿಗೆ ಸಮಾಧಾನವಿಲ್ಲ.

"ನಿಮ್ಮತ್ತೆ, ಹೇಳುತ್ತಿದ್ದುದು ನಿಜವಾಯಿತಲ್ಲಾ ಚೌಡಪ್ಪ. ಕುಲದೀಪಕನೇ ಹುಟ್ಟಿದ್ದಾನೆ."

ಎಂದು ಗುಂಡೂರಾಯರು ಸಂತೋಷ ವ್ಯಕ್ತಮಾಡಿದರು.

ಚೌಡಪ್ಪನವರ ಉತ್ಸಾಹಕ್ಕೆ ಕೊನೆಮೊದಲಿಲ್ಲವಾಯಿತು. ಪೇಟೆಗೆ ಹೋಗಿ ಹಲವುಬಗೆಯ ಉಣ್ಣೆಯಅಂಗಿ, ಟೋಪಿಗಳನ್ನು ತಂದರು. ಮೊಮ್ಮಗ ಹಾಲು ಕುಡಿಯುವುದಕ್ಕೆ ಬೆಳ್ಳಿ ಗಿಂಡಿ, ಆಡುವುದಕ್ಕೆ ಬೆಳ್ಳಿರಂಗಾಣಿ ತಂದರು.

ನಾಮಕರಣಕ್ಕೆ ಚೌಡಪ್ಪನವರು ಗುಂಡುರಾಯರನ್ನು ಬಿಡದೆ ಎಳೆದು ಕೊಂಡು ಹೋದರು.

ಮಗು ಸುಂದರವಾಗಿ ಆರೋಗ್ಯವಾಗಿತ್ತು. ನರಸೂ ತಾಯಿ ಅದಕ್ಕೆ 'ಸುಂದರ ಮೂರ್ತಿ' ಎಂದು ಹೆಸರಿಡಬೇಕೆಂದು ಸೂಚಿಸಿದರು. ನರಸೂ, 'ಅಜ್ಜಿ ಆಗಲೇ ಹೆಸರಿಟ್ಟೇ ಹೋಗಿದ್ದಾರೆ. ಅವನ ಹೆಸರು ನಾಗೇಂದ್ರ' ಎಂದು ಪಟ್ಟು ಹಿಡಿದಳು.

ನಾಮಕರಣ ಮಹೋತ್ಸವ ಮುಗಿದ ಮೇಲೆ ಅನಂತರಾಮಯ್ಯನವರು ಬಿಡದೆ ಬೀಗರನ್ನೂ ಅವರ ಗೆಳೆಯರನ್ನೂ ಎರಡು ದಿವಸ ಹೆಚ್ಚಾಗಿ ಉಳಿಸಿಕೊಂಡು ಚಿತ್ರದುರ್ಗದ ಕೋಟೆ ಮಾರೀಕಣಿವೆ ತೋರಿಸಿ ಔತಣ ಮಾಡಿಸಿ ಕಳಿಸಿಕೊಟ್ಟರು.

ಚಿತ್ರದುರ್ಗದಿಂದ ಹಿಂದಿರುಗಿದ ಮೇಲೆ ಗುಂಡೂರಾಯರ ಪ್ರಕೃತಿ, ಸ್ವಲ್ಪ ಕೆಟ್ಟಿತು. ಸಣ್ಣ ಜ್ವರ ಬರಲಾರಂಭವಾಯಿತು. 'ಆಯಾಸಕ್ಕಿರಬಹುದು' ಎಂದು ಎಲ್ಲರೂ ಭಾವಿಸಿದರು. ಚೌಡಪ್ಪನವರ ಕಳವಳ ನೋಡಿ ಗುಂಡೂ ರಾಯರು ನಕ್ಕು

"ಸ್ವಲ್ಪ ಮೈ ಬೆಚ್ಚಗಾದರೆ ಗೊಟಕ್ ಅಂದುಬಿಡುತ್ತೇನೇನಯ್ಯಾ ?"

ಎಂದರು.

ಚೌಡಪ್ಪನವರು ಸುಬ್ಬುಕೃಷ್ಣನ ಜತೆಗೂ ಗುಂಡೂರಾಯರ ಸೇವೆ ಶಿಶ್ರೂಷೆಗೆ ನಿಂತರು.

ಒಂದು ದಿನ ಗುಂಡೂರಾಯರು

"ಮುಂದಿನ ಜನ್ಮವಿಲ್ಲದ ಹಾಗೆ ಮಾಡಿಕೊಳ್ಳಬೇಕೆಂತಿದ್ದೆ. ಸಾಧ್ಯ ವಿಲ್ಲವೆಂದು ಕಾಣುತ್ತದೆ."

ಎಂದರು. ಚೌಡಪ್ಪನವರು ಆಶ್ಚರ್ಯಚಕಿತರಾಗಿ

"ಏಕೆ ಗುಂಡೂ—ಯಾವಕರ್ಮಬಂಧನ ನಿನ್ನನ್ನು ಕಾಡುತ್ತಿದೆ"

"ನಿನ್ನ ವಿಶ್ವಾಸ, ಋಣ. ಹೀಗೆ ನಿನ್ನ ಕೈಯಲ್ಲಿ ಸೇವೆ ಶಿಶ್ರೂಷೆ ಮಾಡಿಸಿಕೊಂಡು ನಾನು ಋಣವಿಮುಕ್ತನಾಗುವುದೆಂದಿಗೆ?"

"ನಮ್ಮಿಬ್ಬರ ಮಧ್ಯೆ ಋಣದ ಮಾತನ್ನೇಕೆ ತಕ್ಕೈತ್ತುವೆ? ದೈವ ಯಾವ ನಿಮಿತ್ತಕ್ಕೋ ನಮ್ಮಿಬ್ಬರ ಬಾಳನ್ನು ಒಂದುಗೂಡಿಸಿತು. ಅದೇ ದೈವನಮ್ಮಿಬ್ಬರಿಗೂ ಒಟ್ಟಿಗೆ ಶಾಂತಿಯನ್ನು ಕೊಡಲೆಂದೇ ನನ್ನ ಪ್ರಾರ್ಥನೆ."

"ಚೌಡಪ್ಪ, ನನ್ನ ಕೆಲಸ ಮುಗಿಯಿತು. ನನ್ನ ಕೊನೆ ಬಂದಿದೆ ಎಂದು ಗೊತ್ತು. ಅದಕ್ಕಾಗಿ ನಾನು ನಿಜವಾಗಿ ಸಂತೋಷಪಡುತ್ತೇನೆ."

"ಅವಿವೇಕದ ಮಾತು ಆಡಬಾರದು ಗುಂಡೂ. ನೀನು ಆಡುವ ಮಾತು ಅಂಬುಜಮ್ಮನವರ ಕಿವಿಯ ಮೇಲೆ ಬಿದ್ದರೆ ಎಂಥ ಅನಾಹುತ ವಾಗುತ್ತದೆ ಎಂದು ಯೋಚಿಸು."

"ಅದೇ ಒಂದು ನನ್ನ ಮನಸ್ಸು ಕುಟುಕುತ್ತಿರುವ ವಿಷಯ ಚೌಡಪ್ಪ. ಮುತ್ತೈದೆ ಸಾವು ಬೇಕು ಎಂದು ಅವಳು ಹಲವು ಹನ್ನೊಂದು ವ್ರತ, ಪೂಜೆಗಳನ್ನು ಮಾಡಿದ್ದಾಳೆ. ಅವಳ ವ್ರತ, ಪೂಜೆ ಎಲ್ಲಿ ನಿಷ್ಫಲವಾಗು ವದೋ ಎಂದು ಯೋಚಿಸುತ್ತಿದ್ದೇನೆ."

"ಸಾಕು ಸುಮ್ಮನಿರು ಮಾರಾಯ. ಎಲ್ಲಾ ಸರಿಹೋಗುತ್ತದೆ."

ಎಂದು ಚೌಡಪ್ಪನವರು ಮಾತು ಹಾರಿಸಿದರು.

ವೈದ್ಯ ಚಿಕಿತ್ಸೆ ಸಾಂಗವಾಗಿ ನಡೆಯಿತು. ಸುಬ್ಬುಕೃಷ್ಣ ಊರಿನ ನಿಷ್ಣಾತ ಡಾಕ್ಟರುಗಳನ್ನೆಲ್ಲಾ ಕರೆದುಕೊಂಡು ಬಂದು ತೋರಿಸಿದ. ಒಬ್ಬೊ ಬ್ಬರು ಒಂದೊಂದು ಔಷಧ ಇಂಜಕ್ಷ್ನ ಸೂಚಿಸಿದರು. ಸಾವಿನೊಡನೆ ಹೋರಾಡುವ ಸಾಹಸ ಮಾತ್ರ ಯಾರೂ ತೋರಲಿಲ್ಲ.

ಗುಂಡೂರಾಯರ ಜತೆಗೂ ಚೌಡಪ್ಪನವರು ಸವೆಯುವುದಕ್ಕಾ ರಂಭಿಸಿದರು. ಕಾಯಿಲೆ ಅವರಿಗೋ ಇವರಿಗೋ ಎಂದು ನೋಡಿದವರು ಸಂದೇಹಪಡುವಂತಾಯಿತು.

ಗುಂಡೂರಾಯರ ಗಂಟಲು ಬಾತುಕೊಂಡಿತು. ಅನ್ನವಿಳಿಯುತ್ತಲೇ

ಇರಲಿಲ್ಲ. ಒಂದೊಂದು ಗುಟುಕು ಹಾಲು, ನೀರು ಒಳಗೆ ಹೋಗಬೇಕಾದರೆ ಅವರಿಗೆ ನರಕಯಾತನೆಯಾಗುತ್ತಿತ್ತು.

ಹಾಗೂ ಹೀಗೂ ಗುಂಡೂರಾಯರ ಜೀವ ಒಂದೂವರೆ ತಿಂಗಳು ಕಾಲ ಎಳೆಯಿತು. ಒಂದು ಮಧ್ಯಾಹ್ನ ಎಲ್ಲರೂ ಊಟ ಮುಗಿಸಿ ಬಂದರು. ಗುಂಡೂರಾಯರ ಮುಖ ವಿಚಿತ್ರವಾಗಿತ್ತು. ಸುಬ್ಬುಕೃಷ್ಣ ತಂದೆಯ ಹತ್ತಿರ ಕುಳಿತುಕೊಂಡು ಸ್ವಲ್ಪ ನೀರು ಕುಡಿಸಿದ. ಬಹು ಪ್ರಯಾಸದಿಂದ ಗುಂಡೂರಾಯರು ನೀರು ನುಂಗಿ, ಕಣ್ಣುಮುಚ್ಚಿ ಮಲಗಿದರು. ಮುಚ್ಚಿದ ಕಣ್ಣು ಅವರು ಮತ್ತೆ ತೆಗೆಯಲೇ ಇಲ್ಲ.

## ೨೧

ಗುಂಡೂರಾಯರು ವಿಧಿವಶರಾದ ಮೇಲೆ ಚೌಡಪ್ಪನವರು ಮನೆಯನ್ನೇ ಬಿಡುತ್ತಿರಲಿಲ್ಲ. ತಂದೆ ಒಬ್ಬಂಟಿಗರಾಗಿ ಮನೆಯಲ್ಲಿಯೇ ಇರುತ್ತಾರೆಂದು ಮಹಾಬಲ ಅಂಗಡಿಯಿಂದ ಮನೆಗೆ ಬೇಗ ಬರುತ್ತಿದ್ದ.

ನರಸೂ ನಾಲ್ಕು ತಿಂಗಳು ಬಾಣಂತನ ಕಳೆದಿದ್ದಳು. ಐದನೆಯ ತಿಂಗಳಲ್ಲಿ ಅವಳನ್ನೂ ಮಗುವನ್ನೂ ಕರೆದುಕೊಂಡು ಬರಬೇಕೆಂದು ಮಹಾಬಲ ಮಾವನವರಿಗೆ ಕಾಗದ ಬರೆದ.

ನರಸೂ ಊರಿಗೆ ಬಂದೊಡನೆಯೇ ಗುಂಡೂರಾಯರ ಮನೆಗೆ ಹೋಗಿ ಅಂಬುಜಮ್ಮನವರನ್ನು ಮಾತನಾಡಿಸಿಕೊಂಡು ಬಂದಳು. ದುಃಖವನ್ನು ನುಂಗಿಕೊಂಡು ಅಂಬುಜಮ್ಮ ನಾಗೇಂದ್ರನನ್ನೆತ್ತಿಕೊಂಡು ಮುದ್ದಾಡಿದರು.

ನಾಗೇಂದ್ರ ಮನೆಗೆ ಬಂದುದು ಚೌಡಪ್ಪನವರಿಗೆ ಸ್ವಲ್ಪ ನೆಮ್ಮದಿಯನ್ನು ತಂದಿತು. ಮಗುವಿನ ಲಾಲನೆ ಪಾಲನೆಯಲ್ಲಿ ಅವರಿಗೆ ಹೊತ್ತು ಹೋಗುತ್ತಿತ್ತು.

ದಿನಗಳೆಯುತ್ತ ಚೌಡಪ್ಪನವರಿಗೂ ನಾಗೇಂದ್ರನಿಗೂ ವಿಶೇಷ ಬಾಂಧವ್ಯ ಏರ್ಪಟ್ಟಿತು. ಶಿಶು ಭಾಷೆಯಲ್ಲಿ ಚೌಡಪ್ಪನವರು ಪಾರಂಗತರಾದರು. ಅಜ್ಜನ ಪ್ರತಿಯೊಂದು ಚಲನವಲನವನ್ನೂ ಮಗು ಅರ್ಥಮಾಡಿಕೊಂಡಿತು.

ಒಂದು ದಿನ ಮಹಾಬಲ ಮನೆಗೆ ಬಂದವನು ಅಜ್ಜ ಮೊಮ್ಮಗನ ಆಟ ನೋಡುತ್ತ ನಿಂತ. ತೊಟ್ಟಿಲಲ್ಲಿ ಮಲಗಿದ ಮಗುವಿನ ಗಲ್ಲ ಮುಟ್ಟಿ

ಚೌಡಪ್ಪನವರು ಆಡಿಸುತ್ತಿದ್ದರು. ಮಗು ಕಿಲಕಿಲನೆ ನಗುತ್ತಿತ್ತು. ಅದರೊಂದಿಗೆ ಚೌಡಪ್ಪನವರೂ ನಗುತ್ತಿದ್ದರು. ಸ್ವಲ್ಪ ಕಾಲ ಚೌಡಪ್ಪನವರು ತೆಪ್ಪಗಾಗುತ್ತಿದ್ದರು. ಅಜ್ಜನ ವಿಮನಸ್ಕತೆಗೆ ಬೇಸರಗೊಂಡು ಮಗು ಚೀರುತ್ತಿತ್ತು. ಚೌಡಪ್ಪನವರು ಮಗುವನ್ನು ದಿಟ್ಟಿಸಿ ನೋಡಿ

"ಲೋಕದ ಸಂಬಂಧವನ್ನೆಲ್ಲಾ ಕಳೆದುಕೊಳ್ಳುತ್ತಿರುವವನಿಗೆ ನೀನೆಲ್ಲಿ ಸಿಕ್ಕಿದೆಯೋ ನಾಗೇಂದ್ರೂ. ಸುಮ್ಮನೆ ನನ್ನನ್ನೇಕೆ ಈ ಮೋಹ ಜಾಲದಲ್ಲಿ ಕೆಡಹುತ್ತಿರುವೆ."

ಎಂದರು.

ತಂದೆಯ ಮಾತು ಮಹಾಬಲನ ಮನಸ್ಸಿನಲ್ಲಿ ಅಲ್ಲಕಲ್ಲೋಲವನ್ನುಂಟುಮಾಡಿತು. ಅವನ ಶಬ್ದ ಕೇಳಿ ಹಿಂದಿರುಗಿದ ಚೌಡಪ್ಪನವರು

"ಯಾವಾಗ ಬಂದೆ ಮಹಾಬಲ" ಎಂದರು.

"ಇದೇ ಬಂದೆ"

"ನಿನ್ನ ಮಗ ಭಾರಿ ತುಂಟನಪ್ಪ. ಒಂದು ಗಳಿಗೆಯೂ ಮಲಗುವುದಿಲ್ಲ. ಯಾವಾಗಲೂ ಆಡು ಬಾ ಎಂದು ಈ ಮುದುಕನನ್ನು ಗೋಳುಹುಯಿದುಕೊಳ್ಳುತ್ತಾನೆ."

"ಲೋಕಸಂಬಂಧದ ಮಾತೇನೋ ಆಡುತ್ತಿದ್ದೆ."

"ಈಶ್ವರನ ಮಾಯೆ ಎಷ್ಟು ವಿಚಿತ್ರವಾದದ್ದು ಎಂದು ಯೋಚಿಸುತ್ತಿದ್ದೆ. ಗುಂಡೂ ಸಾವು ನನ್ನ ಪ್ರಯಾಣದ ಸಂಕೇತ ಎಂದು ಭಾವಿಸಿದ್ದೆ. ಆದರೆ ವಿಧಿ ಯೋಚಿಸುವುದೇ ಬೇರೆ."

"ವಿಧಿಯ ಯೋಚನೆಯೇನು ?"

"ನನ್ನನ್ನು ಈ ಕಂದನ ಮಮತೆಯ ಮಡಲಿಗೆ ವಿಧಿ ಹಾಕಿದೆ. ಬಾಳಿನ ಸಂಧ್ಯೆಯಲ್ಲಿಯೂ ವಿಧಿ ನನಗೆ ಅರುಣೋದಯ ದರ್ಶನ ಮಾಡಿಸುತ್ತಿದೆ"

"ನೀನು ಹೀಗೆ ಮಾತನಾಡಿದರೆ ನನ್ನ ಮನಸ್ಸಿಗೆ ಸಂತೋಷವಾಗುತ್ತದೆಯೋ ?"

"ದುಃಖವಾಗಬಾರದು ಮಹಾಬಲ. ಬಾಳು ಸತತವಾಗಿ ಸಾಗುತ್ತಲೇ ಇರುತ್ತದೆ. ಸಾವು ಅದರ ಕೊನೆಯಲ್ಲ. ಬಾಳಿಗೆ ಕ್ರತುಶಕ್ತಿಯನ್ನೊದಗಿಸುವ ಒಂದು ಅದ್ಭುತಚೇತನವೇ ಸಾವು. ಹುಟ್ಟಿದವರೆಲ್ಲಾ ಬದುಕೇ

ಇದ್ದರೆ ಲೋಕದಲ್ಲಿ ಸ್ಥಳವೆಲ್ಲಿಂದ ಬರಬೇಕು ಹೇಳು. ಮನುಷ್ಯ ಬದುಕಿರುವುದಕ್ಕೂ ಅಂಜಬಾರದು ; ಬದುಕು ಮುಗಿಸುವುದಕ್ಕೂ ಅಂಜಬಾರದು. ಕಾಲಕಾಲಕ್ಕೆ ಒದಗುವ ಕರ್ತವ್ಯವನ್ನು ಹಸನ್ಮುಖಿಯಾಗಿ ನಿರ್ವಹಿಸಬೇಕು."

"ನಿನ್ನ ಕರ್ತವ್ಯ ಮುಗಿದಿಲ್ಲ."

"ಇನ್ನೇನು ಉಳಿದಿದೆ. ನಿನಗೊಂದು ದಾರಿಯಾಯಿತು. ಸೊಸೆ ಜಾಣೆ. ಸಂಸಾರವನ್ನು ವಿತರಣೆಯಾಗಿ ಸಾಗಿಸಬಲ್ಲಳು. ಕಣ್ತುಂಬ ಮೊಮ್ಮಗನನ್ನು ನೋಡಿದೆ."

"ಆ ಮೊಮ್ಮಗನ ಮುಂಜಿ ಮದುವೆ ನೀನು ನೋಡಬೇಡವೆ ?"

"ನಾನು ನೋಡಿಯೇ ನೋಡುತ್ತೇನೆ. ನನ್ನ ಕಣ್ಣುಗಳಿಂದಲ್ಲ ನಿನ್ನ ಕಣ್ಣುಗಳಿಂದ."

"ನೀನು ತಿಳಿದವನು. ನಿನಗೆ ಹೇಳಲು ನಾನು ಸಮರ್ಥನಲ್ಲ. ಆದರೆ ಸಾವಿನ ಚಿಂತೆ ನೀನು ಮಾಡದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿಯಾಗುವುದು."

ಮಗನ ಪ್ರಾರ್ಥನೆಗೆ ತಂದೆ ಉತ್ತರ ಕೊಡಲಿಲ್ಲ. ಅವರು ಮನಸ್ಸಿನಲ್ಲಿ ಮೋಹ, ಕರ್ತವ್ಯಗಳೆರಡರ ಕದನವಾರಂಭವಾಯಿತು.

ತಂದೆ ಮಗನ ಮಾತು ಸಾಗಿದ್ದಾಗ ನಾಗೇಂದ್ರ ಸುಖನಿದ್ರೆಯಲ್ಲಿ ತಲ್ಲೀನನಾದ.

ಮಗುವಿನ ಮೈಮೇಲೆ ಹೊದಿಕೆ ಎಳೆದು ಚೌಡಪ್ಪನವರು ಅದರ ಶಾಂತ, ಸ್ನಿಗ್ಧರೂಪವನ್ನು ನೋಡುತ್ತಾ ಕುಳಿತರು. ಭಗವಂತನ ದರ್ಶನವಾದಂತಾಯಿತು.

"ಭಗವಂತನು ಅಲ್ಲಿದ್ದಾನೆ ಇಲ್ಲಿದ್ದಾನೆ ; ಅಲ್ಲಿಲ್ಲ ಇಲ್ಲಿಲ್ಲ ಎಂದು ಹೇಳುತ್ತಾರೆ. ಅವನು ಎಲ್ಲಿ ಇಲ್ಲ."

ಎಂದು ವಿಚಾರಪರವಶರಾದರು.

೨೨

ತಿಮ್ಮಮ್ಮನವರ ಸ್ಥಾನಕ್ಕೆ ಬಂದಿದ್ದ ಕಾಡಮ್ಮನವರು ತಮ್ಮ ಜವಾಬ್ದಾರಿಯನ್ನು ಚೆನ್ನಾಗಿ ಅರಿತಿದ್ದರು. ನೆರೆಹೊರೆಯವರ ಬಾಯಿಂದ ತಿಮ್ಮಮ್ಮನವರ ಗುಣಕಥನ ಕೇಳಿದ್ದರು. ನರಸೂವಿನ ಸೌಮ್ಯಸ್ವಭಾವ

ಕರುಣಾಮಯ ಹೃದಯಕ್ಕೆ ಬೆರಗಾಗಿದ್ದರು. ಮನೆಗೆಲಸಗಳೆಲ್ಲವನ್ನು ನಿರ್ವಹಿಸಿಕೊಂಡು ಕಾಡಮ್ಮನವರು ನಾಗೇಂದ್ರನ ಯೋಗಕ್ಷೇಮವನ್ನೂ ನೋಡಿಕೊಳ್ಳುತ್ತಿದ್ದರು. ಮಗುವಿಗೆ ಸಣ್ಣಪುಟ್ಟ ಕಾಹಿಲೆಯಾದರೆ ತಾವೇ ಅಳಲೇಕಾಯಿ ಔಷಧವನ್ನೋ, ವೀಳೆಯದೆಲೆ ಕಾವುಟವನ್ನೋ ಕೊಟ್ಟು ಗುಣಪಡಿಸುತ್ತಿದ್ದರು. ಕಾಡಮ್ಮ ಕಾಲಕ್ರಮೇಣ ನರಸೂಗೆ ಕಾಡಕ್ಕ ಆಗುತ್ತಾ ಬಂದರು.

ಒಂದೊಂದು ದಿನ ಕಾಡಕ್ಕ ನಾಗೇಂದ್ರನ ಪೂರ್ಣ ಜವಾಬ್ದಾರಿ ಹೊತ್ತುಕೊಂಡು ನರಸು, ಮಹಾಬಲ ಹೊರಗೆ ಹೋಗಿ ಬರಲು ಅನುಕೂಲ ಮಾಡಿಕೊಡುತ್ತಿದ್ದರು.

ಕಾಡಕ್ಕನಿಗೂ ಯಾರೂ ದಿಕ್ಕಿರಲಿಲ್ಲ. ಮಧ್ಯಪ್ರಾಯದಲ್ಲಿಯೇ ಅವರ ಗಂಡ ತೀರಿಕೊಂಡಿದ್ದ. ಮಕ್ಕಳೂ ಇರಲಿಲ್ಲ. ಅವರಿವರ ಮನೆಯಲ್ಲಿಯೇ ಬಾಳು ದೂಡಿದ್ದರು. ಕಂಡವರ ಸೇವೆಯಲ್ಲಿ ಹಣ್ಣಾದ ಜೀವ ಒಂದು ಒಳ್ಳೆಯ ಮಾತು ಕೇಳಿದರೆ ಹಿಗ್ಗುತ್ತಿತ್ತು.

ಪ್ರತಿನಿತ್ಯ ಕಾಡಕ್ಕ ರಾತ್ರಿ ಫಲಹಾರ ಮಾಡುವಂತೆ ನರಸೂ ಒತ್ತಾಯಮಾಡುತ್ತಿದ್ದಳು. ಕಾಡಕ್ಕ ಅವಳ ವಿಶ್ವಾಸ, ಅಂತಃಕರಣಕ್ಕೆ ಮಾರುಹೋಗಿದ್ದರು.

"ನಾಗೇಂದ್ರ ಬಹು ಭಾಗ್ಯಶಾಲಿ. ಮನೆಯನ್ನು ಬಂಗಾರ ಮಾಡುತ್ತಾನೆ." ಎಂದು ಕಾಡಕ್ಕ ನುಡಿಯುತ್ತಿದ್ದುದು ಸತ್ಯವಾಗುತ್ತಿತ್ತು.

ಮಹಾಬಲನ ವ್ಯಾಪಾರ ಕುದುರುತ್ತಾ ಬಂತು. 'ಹೋಲ್‌ಸೇಲ್ ವ್ಯಾಪಾರ' ಆರಂಭ ಮಾಡಿದ ಮೇಲಂತೂ ಅವನ ಆದಾಯ ಇಮ್ಮಡಿಯಾಯಿತು. ಮೊತ್ತದ ಆದಾಯ ಬಂದಾಗಲೆಲ್ಲಾ ನರಸೂಗೆ ಒಂದೊಂದು ಒಡವೆ ಮಾಡಿಸಿ ತಂದುಕೊಡುತ್ತಿದ್ದ.

ಮಗನ ಅಭ್ಯುದಯ ಕಂಡು ಚೌಡಪ್ಪನವರು ಹಿರಿಹಿರಿ ಹಿಗ್ಗಿದರು. ಆದರೆ ಆಗ ಈಗ ಒಂದೊಂದು ಎಚ್ಚರಿಕೆಯ ಮಾತನ್ನು ಹೇಳಲು ಮರೆಯುತ್ತಿರಲಿಲ್ಲ.

"ಲಕ್ಷ್ಮೀ ನಿನಗೆ ಅನುಗ್ರಹಿಸಿದ್ದಾಳೆ ಮಹಾಬಲ, ಬಹಳ ಸಂತೋಷ. ಆದರೆ ಅವಳು ಚಂಚಲೆಯೆನ್ನುವುದನ್ನು ಮರೆಯಬೇಡ. ಹಣದಾಸೆಯಿಂದ

ಸಿಕ್ಕುಸಿಕ್ಕಿದ ವ್ಯಾಪಾರಕ್ಕೆ ಕೈಹಾಕಬೇಡ. ಲಾಭಬಡುಕರ ಜತೆ ಸೇರಿ ಕೊಂಡು ಅನ್ಯಾಯವಾಗಿ ಲಾಭಗಳಿಸಬೇಡ. ವರಮಾನದ ಒಂದು ಭಾಗ ವನ್ನು ಧರ್ಮಕಾರ್ಯಕ್ಕೆ ಮೀಸಲಾಗಿಡುತ್ತಾ ಬಾ. ಈ ಮೀಸಲುಧನವೇ ನಿನ್ನನ್ನು ಕಾಯುವ ಪುಣ್ಯಭಂಡಾರ" ಎಂದು ಹೇಳುತ್ತಿದ್ದರು.

ಸೊಸೆ ಕೈಯೆತ್ತಿ ಬಡವರಿಗೆ ದಾನಕೊಡುವುದನ್ನು ಕಂಡಾಗ ಚೌಡಪ್ಪ ನವರು ಆನಂದಪರವಶರಾಗುತ್ತಿದ್ದರು. 'ಈ ತಾಯಿ ನಮ್ಮ ವಂಶದ ಗೌರವ ಕಾಪಾಡುತ್ತಾಳೆ' ಎಂದು ಧೈರ್ಯತಾಳುತ್ತಿದ್ದರು.

ನರಸೂ ಮಾವನವರ ಯೋಗಕ್ಷೇಮ ನೋಡಿಕೊಳ್ಳುವುದರಲ್ಲಿ ಸ್ವಲ್ಪವೂ ತಾತ್ಸಾರ ಮಾಡುತ್ತಿರಲಿಲ್ಲ. ಮಹಾಬಲ ಮನೆಗೆ ಬರುವುದಕ್ಕೆ ಒಂದು ಗಂಟೆಯಾಗುತ್ತಿತ್ತು. ಅಷ್ಟು ಹೊತ್ತಿನತನಕ ಮಾವನವರು ಹಸಿದು ಕುಳ್ಳಿರಲು ಅವಕಾಶ ಕೊಡುತ್ತಿರಲಿಲ್ಲ. ದೇವರಿಗೆ ತುಪ್ಪದ ದೀಪಹಚ್ಚಿ ಹನ್ನೆರಡು ಗಂಟೆಯ ಒಳಗೇ ಮಾವನವರನ್ನು ಎಬ್ಬಿಸಿ ಊಟಕ್ಕೆ ಬಡಿಸು ತ್ತಿದ್ದಳು.

ಒಂದು ದಿನ ನರಸು ಮಾವನವರಿಗೆ ಬಡಿಸುತ್ತಿದ್ದಾಗ ಅವರು ಕೇಳಿದರು.

"ನಿತ್ಯವೂ ದೇವರಲ್ಲಿ ಏನು ಪ್ರಾರ್ಥಿಸುತ್ತಿರುವೆ ತಾಯೀ ?"

ಚೌಡಪ್ಪನವರ ಪ್ರಶ್ನೆಗೆ ಉತ್ತರ ಹೇಳಲು ನರಸೂಗೆ ಸಾಧ್ಯವಾಗ ಲಿಲ್ಲ. ನಾಚಿ ತಲೆಬಾಗಿ ನಿಂತಳು.

"ನಾನು ಹೇಳಿದಂತೆ ಪ್ರಾರ್ಥಿಸುವೆಯಾ ?"

"ಏನು ಹೇಳಿ."

"ನನ್ನ ಮಾವ ಸುಖವಾಗಿ ಕಣ್ಣು ಮುಚ್ಚಲಿ ಎಂದು ಪ್ರಾರ್ಥಿಸು".

ನರಸೂ ಕಣ್ಣಲ್ಲಿ ಕೋಡಿ ಹರಿಯಿತು.

"ಕಣ್ಣೀರು ಹಾಕಬೇಡ ತಾಯಿ. ನಿನ್ನ ಮನಸ್ಸು ನೋಯಿಸ ಬೇಕೆಂದು ನಾನು ಹಾಗೆ ನುಡಿಯಲಿಲ್ಲ."

"ನೀವೇನು ನಮಗೆ ಭಾರವಾಗಿರುವುದು. ಕೆಟ್ಟ ಮಾತು ಏಕೆ ನುಡಿ ಯುವಿರಿ ?"

"ಹುಚ್ಚಿ—ನಾನು ಹೇಳುವುದನ್ನು ಕೇಳು. ಈ ತುಂಬಿದ ವಯಸ್ಸಿ

ನಲ್ಲಿ ನನಗಿರುವ ಆಸೆ ಏನೆಂದು ತಿಳಿದುಕೋ. ನನ್ನ ಬಾಳಿಸತ್ತ ಕಣ್ಣು ಚಾಚಿ ನೋಡಿದಾಗ ನಾನು ನಾಚಬೇಕಾದುದೇನೂ ಇಲ್ಲ. ನಾನು ಯಾವ ಅನ್ಯಾಯ, ಅನಾಚಾರ, ದುರಾಚಾರಕ್ಕೂ ಕೈಹಾಕಿಲ್ಲ. ದೇವರು ಕೊಟ್ಟಿದ್ದನ್ನು ಸಂತೋಷದಿಂದ, ಕೃತಜ್ಞತೆಯಿಂದ ಸ್ವೀಕರಿಸಿ ಬಾಳುವೆ ಸಾಗಿಸಿದ್ದೇನೆ. ಅದುಬೇಕು, ಇದುಬೇಕು ಎಂದು ದುರಾಶೆಪಟ್ಟಿಲ್ಲ. ಸಂಪದ್ಸಂಗ್ರಹದ ಮೊಬ್ಬಿಗೆ ಬಿದ್ದು ಅನ್ಯಾಯ ಆಚರಿಸಿಲ್ಲ. ನನ್ನ ಅಂತರಂಗ ಶುಚಿಯಾಗಿದೆ. ನನ್ನ ಬಾಳು ಸುಖವಾಗಿದ್ದಂತೆ ಸಾವೂ ಸುಖವಾಗಿರಬೇಕೆಂದು ನಾನು ಬಯಸುವುದು ನ್ಯಾಯವಷ್ಟೇ. ಯಾರಿಗೂ ಹಿಂಸೆ ಕೊಡದೆ ನನ್ನ ಯಾತ್ರೆ ಮುಗಿಸಿಬಿಡಬೇಕೆಂದು ಆಸೆ. ಭಗವಂತನಲ್ಲಿ ನೀನೂ ಅದನ್ನೇ ಪ್ರಾರ್ಥಿಸು."

ನರಸಮ್ಮ ಅವರ ಪ್ರಾರ್ಥನೆಗೆ ಬೆರಗಾದಳು.

"ಸುಮ್ಮನೆ ಸಾವಿನ ಚಿಂತೆ ಮಾಡಬೇಡಿ"

ಎಂದಳು.

ನಿಷ್ಕಲ್ಮಷ ಹೃದಯದಿಂದೊಗೆದ ಅವಳ ಮಾತಿನಲ್ಲಿ ಚೌಡಪ್ಪನವರು ಒಂದು ಹೊಸ ಬೆಳಕು ಕಂಡರು.

"ನೀನು ಹೇಳುವುದು ಸತ್ಯ ತಾಯಿ. ಸುಖವಾದ ಸಾವು ಬೇಕು ಎಂದು ನಾನು ಹಲಬುತ್ತಿದ್ದೆ. ಅದೂ ಒಂದು ಆಸೆಯೇ ಅಲ್ಲವೇ. ಆಸೆಯ ಹಿಂದೆ ಸ್ವಾರ್ಥವಿದ್ದೇ ಇರುತ್ತದೆ. ನೀನು ಹೇಳಿದಂತೆ ಆ ಚಿಂತೆಯನ್ನೂ ಬಿಟ್ಟುಬಿಡುತ್ತೇನೆ. ಭಗವಂತನಿಗೆ ಮಾರ್ಗದರ್ಶನ ಮಾಡಲು ನಾನು ಯಾರು?"

ಎಂದು ಹೇಳಿದರು.

## ೨೩

ಚೌಡಪ್ಪನವರ ಬಯಕೆ ನೆರವೇರಿಸಲು ಬಹಳ ದಿನ ಹಿಡಿಯಲಿಲ್ಲ. ಭಗವಂತ ಅವರ ಮೊರೆಯನ್ನು ತೆರೆದ ಕಿವಿಗಳಿಂದಾಲಿಸಿದ.

ಒಂದು ದಿನ ಬೆಳಿಗ್ಗೆ ಚೌಡಪ್ಪನವರು ಎದ್ದವರೇ ಸ್ನಾನ, ದೇವರ ಪೂಜೆ ಮುಗಿಸಿದರು. ನಾಗೇಂದ್ರನನ್ನು ಸ್ವಲ್ಪ ಹೊತ್ತು ಆಡಿಸುತ್ತಿದ್ದು, ವಾಕಿಂಗ್ ಹೋಗಿ ಬಂದರು. ಹಿಂದಿರುಗಿದಾಗ ಏನೋ ಒಂದು ಬಗೆಯ

ಸುಸ್ತು ತಲೆದೋರಿತ್ತು. ಕೈಗೆ ಪಂಚಾಂಗವನ್ನೆತ್ತಿಕೊಂಡು ನೋಡಿ, ಸೊಸೆಯನ್ನು ಕರೆದು

"ಮಹಾಬಲನಿಗೆ ಹೇಳಿಕಳಿಸು ತಾಯಿ" ಎಂದರು.

ನರಸಮ್ಮ ಮಾವನವರ ಸ್ಥಿತಿ ನೋಡಿ ಸ್ವಲ್ಪ ಗಾಬರಿಯಾಗಿ

"ಏಕೆ ಏನಾಗುತ್ತಿದೆ ?"

"ಏನೂ ಇಲ್ಲ. ಸ್ವಲ್ಪ ನಿಶ್ಶಕ್ತಿಯಾಗಿದೆ. ನಾನು ಮಲಗಿರುತ್ತೇನೆ. ಮಹಾಬಲ ಬಂದಕೂಡಲೆ ಎಬ್ಬಿಸಲಿ."

ಎಂದು ಹೇಳಿ ಹಾಸಿಗೆಯ ಮೇಲೆ ಮಲಗಿದರು.

ಎಣ್ಣೆನೀರು ಹಾಕಿಕೊಂಡು ಮಲಗಿದ್ದ ನಾಗೇಂದ್ರನ ಮೃದು ಹಸ್ತವನ್ನು ಕೈಯಲ್ಲಿ ಹಿಡಿದು ಚೌಡಪ್ಪನವರು ತಮ್ಮ ಮುಖ ನೇವರಿಸಿಕೊಂಡರು.

ಅವರ ಕಣ್ಣಲ್ಲಿ ಒಂದು ಹನಿ ನಿಂತಿತ್ತು.

"ಇದೆಂಥ ಮಾಯೆ"

ಎಂದು ಮೈಕೊಡವಿಕೊಂಡರು.

ಚೌಡಪ್ಪನವರಿಗೆ ಹೆಚ್ಚು ಹೊತ್ತು ಕೂಡಲಾಗಲಿಲ್ಲ. ಹೊಟ್ಟೆಯಲ್ಲಿ ತಳಮಳ. ಎದೆ ನೋಯಲಾರಂಭಿಸಿತು. ಮೆಲ್ಲನೆ ಹಾಸಿಗೆಯ ಬಳಿ ಬಂದು ಮಲಗಿದರು.

ಮಹಾಬಲ ಬಂದು ಮಾತನಾಡಿಸಿದಾಗ ಚೌಡಪ್ಪನವರು ವಿಸ್ಮೃತಿಯಲ್ಲಿ ಮೈಮರೆತ್ತಿದ್ದರು. ಮೆಲ್ಲನೆ ಕಣ್ಣುಬಿಟ್ಟು ನೋಡಿ

"ಬಂದೆಯಾ ಮಹಾಬಲೂ—ಅಮ್ಮಯ್ಯನನ್ನು ಕರೆ"

ಎಂದರು. ನರಸಮ್ಮನೂ ಬಂದು ಒಂದು ಪಕ್ಕದಲ್ಲಿ ನಿಂತಳು.

"ನನಗೆ ಕರೆಬಂದಿದೆ ಹೋಗುತ್ತೇನೆ. ದುಃಖಪಡಬೇಡಿ. ನಾನು ಬಯಸಿದಂತೆ ಭಗವಂತ ಸುಖವಾದ ಸಾವು ಅನುಗ್ರಹಿಸಿದ್ದಾನೆ."

"ಅಣ್ಣಾ, ಅಣ್ಣಾ"

ಎಂದು ಮಹಾಬಲ ಆರ್ತನಾಗಿ ಕೂಗಿದ. ಅವನ ಕೂಗು ಚೌಡಪ್ಪನವರ ಕಿವಿಯ ಮೇಲೆ ಬೀಳಲಿಲ್ಲ. ಆ ವೇಳೆಗೆ ಅವರ ಆತ್ಮ ಮುಂದಿನೂರಿನ ದಾರಿ ಹಿಡಿದಿತ್ತು.

ಸುದ್ದಿ ಕೇಳಿದೊಡನೆಯೇ ಗುಂಡೂರಾಯರ ಮನೆಯವರು ಧಾವಿಸಿ ಬಂದರು. ಅಂಬುಜಮ್ಮನವರು ನರಸುವನ್ನಪ್ಪಿಕೊಂಡು ಸಮಾಧಾನ ಹೇಳಿದರು. ಸುಬ್ಬುಕೃಷ್ಣ ಮಹಾಬಲನಿಗೆ ಸಮಾಧಾನ ಹೇಳಿದ.

ಸಂಸ್ಕಾರವಿಧಿ ಸಾಂಗವಾಗಿ ಪೂರೈಸಿತು. ಸುಬ್ಬುಕೃಷ್ಣ ಮನದುಂಬಿದ ದುಃಖವನ್ನು ತಡೆಗಟ್ಟುತ್ತಾ

"ನನ್ನದೂ ನಿನ್ನದೂ ಒಂದೇ ಹಣೆಯ ಬರೆಹವಾಯಿತು ಮಹಾಬಲ. ಇಬ್ಬರೂ ಅನಾಥರಾದೆವು" ಎಂದ.

"ಪ್ರಪಂಚವೇ ನನಗೆ ಶೂನ್ಯವಾಗಿ ಕಾಣುತ್ತಿದೆ."

"ನಮ್ಮ ತಂದೆ ತೀರಿಕೊಂಡ ದಿನವೇ ಚೌಡಪ್ಪನವರ ಕಾಲವೂ ಮುಗಿದುಹೋಯಿತು. ಬದುಕಿನ ಸ್ನೇಹವನ್ನು ಸಾವಿನಲ್ಲಿಯೂ ಸಾಧಿಸಿದರು."

"ನನಗೆ ನಿನ್ನ ಬಿಟ್ಟು ಯಾರೂ ಇಲ್ಲ ಸುಬ್ಬುಕೃಷ್ಣ."

"ಹಿರಿಯರ ಆಶೀರ್ವಾದ ನಮ್ಮನ್ನು ಕಾಪಾಡುತ್ತದೆ. ಅಧೀರನಾಗಬೇಡ"

ಎಂದು ಧೈರ್ಯ ಹೇಳಿದ.

## ೨೪

ಮಹಾಬಲನ ವ್ಯಾಪಾರ ಪ್ರಗತಿ ನಾಗಲೋಟದಲ್ಲಿ ಸಾಗಿತು. 'ಹೋಲ್ ಸೇಲ್' ವ್ಯಾಪಾರ ವಿಶೇಷ ಬೆಳೆಯಿತು. ಬೆಂಗಳೂರಿನ ವ್ಯಾಪಾರ ಮಂಡಳಿಯಲ್ಲಿ ಮಹಾಬಲನಿಗೆ ಗಣ್ಯವಾದ ಸ್ಥಾನ ದೊರೆಯಿತು. ಅವನ ವ್ಯಾಪಾರಮಿತ್ರರು 'ಚೇಂಬರ್ ಆಫ್ ಕಾಮರ್ಸ್'ಗೆ ಮಹಾಬಲ ನಿಲ್ಲಬೇಕೆಂದು ಸೂಚಿಸಿದರು. ಮಹಾಬಲ ಅವರ ಮಾತಿಗೆ ಮನಸೋಲಲಿಲ್ಲ.

ಮಹಾಬಲನ ಬ್ಯಾಂಕ್ ಲೆಕ್ಕವೂ ಬಲಿಯಿತು. ಅವನ ವ್ಯವಹಾರಕ್ಕೆಲ್ಲಾ ಸುಬ್ಬುಕೃಷ್ಣನೇ 'ಲೀಗಲ್ ಅಡ್ವೈಸರ್.'

ಒಂದು ದಿನ ಮಹಾಬಲ ಅಂಗಡಿಗೆ ಹೊರಟಿದ್ದ. ಅಂಗಿ ಗುಂಡಿ ಹಾಕುತ್ತ ನರಸೂ ಕೇಳಿದಳು.

"ಸಾಯಂಕಾಲ ಎಷ್ಟು ಹೊತ್ತಿಗೆ ಬರುವಿರಿ ?"

"ಯಥಾಪ್ರಕಾರ ಎಂಟು ಗಂಟೆಗೆ."

"ಇವತ್ತು ಬೇಗ ಬರುವುದಕ್ಕಾಗುವುದಿಲ್ಲವೇ ?"

"ಏನು ವಿಶೇಷ."

"ನಿಮಗೆ ಯಾವದೂ ಜ್ಞಾಪಕವಿರುವುದಿಲ್ಲ, ಎಲ್ಲಾ ನಾನು ಹೇಳಬೇಕು."

"ವಿಷಯ ಇಂಥದು ಎಂದು ಹೇಳಬಾರದೇ ?"

"ನಾಳೆ ನಾಗೇಂದ್ರೂ ಹುಟ್ಟಿದ ಹಬ್ಬ. ಸಂಜೆ ನೀವು ಮನೆಗೆ ಬೇಗ ಬಂದರೆ ಪೇಟೆಯ ಕಡೆ ಹೋಗಿ ಬರಬಹುದು."

"ರಾಜಲಕ್ಷ್ಮಿಯನ್ನು ಕರೆದುಕೊಂಡು ನೀನೇ ಹೋಗಬಾರದೇ ?"

"ಆಗುತ್ತದೆ. ಆದರೆ ನೀವು ಜತೆಯಲ್ಲಿ ಬಂದ ಹಾಗಾಗುತ್ತದೇನು ?"

"ನಾಲ್ಕು ವರ್ಷ ಎಷ್ಟು ಬೇಗ ಬಂದುಬಿಟ್ಟಿತು ನರಸೂ."

"ಮಾವನವರು ಇದ್ದಿದ್ದರೆ"

"ಎಲ್ಲಾ ನಾವು ಬಯಸಿದಂತೇ ಆಗಬೇಕೆಂದರೆ ಹೇಗೆ ಸಾಧ್ಯ ?"

"ಸಂಜೆಗೆ ಬೇಗ ಬರುವಿರಷ್ಟೆ !"

"ಬರದೇ ! ನಿನ್ನ ಆಜ್ಞೆಗೆ ಪ್ರತಿ ಹೇಳಲು ಸಾಧ್ಯವೇ ?"

"ಪಾಪ ! ನನ್ನ ಆಜ್ಞೆ ಬಹಳ ಪಾಲಿಸುತ್ತೀರಿ ?"

"ಯಾವದು ಪಾಲಿಸಿಲ್ಲ ಹೇಳು."

"ನಾನು ಯಾವ ಆಜ್ಞೆ ವಿಧಿಸಿದೆ ಹೇಳಿ."

"ಸರಿ, ನೀನು ವಿಧಿಸಿಲ್ಲ ನಾನು ಪಾಲಿಸಿಲ್ಲ; ನೀನು ವಿಧಿಸಿದ್ದರೆ ಪಾಲಿಸುತ್ತಲೇ ಇದ್ದೆ."

"ನೋಡೋಣ, ಇವತ್ತು ಏನು ಮಾಡುವಿರೋ ?"

"ನಾನು ಆರುಗಂಟೆಯ ಒಳಗೆ ಬರುತ್ತೇನೆ. ಬರುವಾಗ ಒಂದು ಟ್ಯಾಕ್ಸಿ ಮಾಡಿಕೊಂಡು ಬರುತ್ತೇನೆ, ನೀನು ಸಿದ್ಧವಾಗಿರು."

ಎಂದು ಹೇಳಿ ಹೊರಟ.

ಸಂಜೆ ಸರಿಯಾಗಿ ಆರು ಗಂಟೆಗೆ ಬರದಿದ್ದರೂ ಆರೂವರೆಗೆ ಬಂದು ಮಹಾಬಲ ಮಾತು ಉಳಿಸಿಕೊಂಡ.

ನರಸೂ ಮಗನಿಗೆ ಕಣ್ಣಿಗೊಪ್ಪುವ, ಮನಸ್ಸಿಗೊಪ್ಪುವ ಸಿಲ್ಕ್ ಉಣ್ಣೆ ಬಟ್ಟೆಗಳನ್ನು ಕೊಂಡಳು.

"ನಿನಗೆ" ಎಂದು ಮಹಾಬಲ ಕೇಳಿದ.

"ನನಗೇಕೆ? ಇದೇನು ನನ್ನ ಹುಟ್ಟಿದ ಹಬ್ಬವೇ?"

"ಮಗು ಹುಟ್ಟಿದ ಹಬ್ಬವೆಂದರೆ ತಾಯಿಯ ಹುಟ್ಟಿದ ಹಬ್ಬವೂ ಹೌದು. ನಿನಗೇನು ಬೇಕೋ ತೆಗೆದುಕೋ?"

"ನನಗೇನೂ ಬೇಕಾಗಿಲ್ಲವಲ್ಲ."

ಮಹಾಬಲ ಹೆಂಡತಿಯ ಮಾತು ಕೇಳಲಿಲ್ಲ. ಹೊಸದಾಗಿ ಬಂದಿದ್ದ ಸೀರೆಗಳನ್ನು ತೆಗೆಸಿ ಒಂದು ಜತೆ ಧರ್ಮಾವರದ ಸೀರೆ ಖರೀದಿ ಮಾಡಿದ.

ಹುಟ್ಟಿದ ಹಬ್ಬಕ್ಕೆ ಗುಂಡೂರಾಯರ ಮನೆಯವರಿಗೆಲ್ಲ ಆಮಂತ್ರಣ ಹೋಗಿತ್ತು. ಬೆಳಿಗ್ಗೆ ಸೊಗಸಾದ ಔತಣವಾಯಿತು. ನರಸೂ ಮಗನನ್ನು ಸಂಜೆ ಹಸೆಯಮೇಲೆ ಕೂಡಿಸಿ ಆರತಿ ಬೆಳಗಿ ಅವಲಕ್ಕಿಪುರಿಯುಂಡೆ ಬಾಗಿನ ಹಂಚಿದಳು.

ನಾಗೇಂದ್ರ ಸ್ಫುಟವಾಗಿ ಮಾತನಾಡುತ್ತಿದ್ದ. ಒಂದೊಂದು ದಿನ ಅಂಬುಜಮ್ಮನವರು ಅವನನ್ನು ಕರೆದುಕೊಂಡು ತಮ್ಮ ಮನೆಯಲ್ಲಿಟ್ಟು ಕೊಂಡಿದ್ದು ಮಾರನೆಯದಿನ ಕಳಿಸಿಕೊಡುತ್ತಿದ್ದರು. ಅವನ ಮಾತುಕತೆ, ಆಟಪಾಟ ಎಲ್ಲರ ಹೃದಯವನ್ನೂ ಅರಳಿಸುತ್ತಿತ್ತು.

ಅದೇ ವರ್ಷ ನರಸೂ ಮತ್ತೆ ಗರ್ಭಧಾರಣೆ ಮಾಡಿದಳು.

"ತಡೆದು ಗರ್ಭಧಾರಣೆ ಮಾಡಿದ್ದೀ ನರಸೂ. ಸ್ವಲ್ಪ ಜೋಕೆ ಯಾಗಿರು. ಖಾರದ ಪದಾರ್ಥ ಕೈಯಿಂದಲೂ ಮುಟ್ಟಬೇಡ."

ಎಂದು ಅಂಬುಜಮ್ಮನವರು ಎಚ್ಚರಿಕೆ ಕೊಟ್ಟರು.

ನರಸೂಗೆ ದಿನ ತುಂಬಲು ಅವಳ ತಾಯಿ ಶಂಕರಮ್ಮನವರು ಹೆರಿಗೆಗೆ ಬಂದು ನಿಂತರು. ನರಸೂ ಆರೋಗ್ಯವಾಗಿದ್ದುದರಿಂದ ಹೆರಿಗೆ ಕಷ್ಟವಿಲ್ಲದೆ ನಡೆಯುತ್ತದೆಂದು ನಂಬಿದ್ದರು.

ಮುನಿಸಿಪಲ್ ಸೂಲಗಿತ್ತಿ ಪ್ರತಿನಿತ್ಯ ಬಂದು ನರಸುವನ್ನು ನೋಡಿ ಕೊಂಡು ಹೋಗುತ್ತಿದ್ದಳು.

ಹೆರಿಗೆಯ ದಿನ ಸಮೀಪಿಸಿದಂತೆ ನರಸೂ ಆರೋಗ್ಯ ಚಿಂತೆಗೆ ಕಾರಣ ವಾಗುತ್ತ ಬಂತು. ಇದ್ದಕ್ಕಿದ್ದಂತೆ ಹೊಟ್ಟೆ ನೋವು ಕಾಣಿಸಿಕೊಂಡು

ಮಾಯವಾಗುತ್ತಿತ್ತು. ಹೆರಿಗೆಯ ಕಾಲದಲ್ಲಿ ಡಾಕ್ಟರು ಸಮೀಪದಲ್ಲಿರುವುದು ಒಳ್ಳೆಯದೆಂದು ಸೂಲಗಿತ್ತಿ ಸಲಹೆ ಇತ್ತಳು.

"ಆಸ್ಪತ್ರೆಯಲ್ಲಿದ್ದರೆ ಒಳ್ಳೆಯದಲ್ಲವೇ ?"

ಎಂದು ಮಹಾಬಲ ಕೇಳಿದ. ಮಗಳನ್ನು ಆಸ್ಪತ್ರೆ ಹೆರಿಗೆಗೆ ಕಳುಹಿಸಿಕೊಡಲು ಶಂಕರಮ್ಮನವರು ಸುತರಾಂ ಒಪ್ಪಲಿಲ್ಲ.

ನೋವು ಆರಂಭವಾಯಿತು. ನರಸೂ ಸತತವಾಗಿ ಮೂರು ದಿವಸ ನೋವು ಅನುಭವಿಸಿದಳು. ನಾಲ್ಕನೆಯ ದಿನ ಹೆರಿಗೆಯಾಯಿತು. ಮಗು ಆರೋಗ್ಯವಾಗಿ ದೃಢಕಾಯವಾಗಿತ್ತು—ಆದರೆ ನರಸೂ ಉಳಿಯಲಿಲ್ಲ. ಡಾಕ್ಟರು ಇಕ್ಕಳ ಹಾಕಿ ಮಗುವನ್ನು ಹೊರಗೆಳೆದರು. ತಾಯಿಗೆ ರಕ್ತಸ್ರಾವ ನಿಲ್ಲಲೇ ಇಲ್ಲ. ಡಾಕ್ಟರು ತಮ್ಮ ಶಕ್ತಿಮೀರಿ ಮಾಡಿದ ಪ್ರಯತ್ನ ನಿಷ್ಫಲವಾಯಿತು.

ಮಹಾಬಲನ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಅವನ ಬಾಳಿನ ಸುತ್ತ ಅಂಧಕಾರ ವ್ಯಾಪಿಸಿತು. 'ಮುಂದೇನು ಗತಿ' ಎಂಬ ಪ್ರಬಲ ಚಿಂತೆ ಅವನನ್ನು ಮುತ್ತಿತು.

ಶಂಕರಮ್ಮನವರು ಅಳಿಯನಿಗೆ ಸಮಾಧಾನ ಹೇಳಿ ಎರಡು ಮಕ್ಕಳನ್ನೂ ತಾವು ಕರೆದುಕೊಂಡು ಹೋಗುವುದಾಗಿ ತಿಳಿಸಿದರು. ಅವರು ಸೂಚಿಸಿದ ಮಾರ್ಗವಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಮಹಾಬಲ ವಿಧಿಯಿಲ್ಲದೆ ಒಪ್ಪಿಕೊಂಡ.

## ೨೫

ಮಹಾಬಲನಿಗೆ ಮನೆ ಶೂನ್ಯವಾಯಿತು. ಎತ್ತ ಕಾಲಿಟ್ಟರೂ ನೆನಪು ಕಾಡುತ್ತಿತ್ತು. ನರಸೂ ಮನೆಗೆ ಬಂದಂದಿನಿಂದ ಅವಳು ಹೊರಟುಹೋದ ದಿನದವರೆಗೆ ಆದ ಘಟನೆಗಳು ಹಲವುಬಾರಿ ಅವನ ಚಿತ್ರಫಲಕದ ಮೇಲೆ ಸುಳಿದಾಡಿದವು. ಅವಳ ಸಹನೆ, ಶಾಂತಿ, ಕರುಣೆ ಒಪ್ಪ ಓರಣ ಮನೆಯಲ್ಲಿ ಅಚ್ಚೊತ್ತಿದಂತಾಗಿತ್ತು. ಗಳಿಗೆ ಕೆಡದಂತೆ ಹೊಸ ಸೀರೆಗಳು ಜೋಡಿಸಲ್ಪಟ್ಟಿದ್ದವು. ಒಡವೆಗಳ ಮೆರಗೂ ಮಾಸಿರಲಿಲ್ಲ.

ನಾಗೇಂದ್ರನನ್ನು ಕಳುಹಿಸಿಕೊಡುವ ದಿವಸದ ದೃಶ್ಯದ ನೆನಪು ಬಂದರೆ ಮಹಾಬಲ ಹಣ್ಣಾಗುತ್ತಿದ್ದ. ಮಗು ಹೊರಡುವ ಮುನ್ನ ತನ್ನ ಕುತ್ತಿಗೆ

ಬಿಗಿದಪ್ಪಿಕೊಂಡು ಗೋಳಾಡಿದ ದೃಶ್ಯ ಮಹಾಬಲನ ಕರುಳನ್ನು ಕತ್ತರಿಸು ತ್ತಿತ್ತು.

ಮಹಾಬಲ ಪ್ರತಿವಾರವೂ ತಪ್ಪದೆ ಚಿತ್ರದುರ್ಗಕ್ಕೆ ಹೋಗಿ ಮಕ್ಕಳನ್ನು ನೋಡಿಕೊಂಡು ಬರುತ್ತಿದ್ದ. ಅವನು ಹೋದಾಗಲೆಲ್ಲಾ ನಾಗೇಂದ್ರ

"ನಾನು ಅಮ್ಮನ ಹತ್ತಿರ ಹೋಗಬೇಕು"

ಎಂದು ಚಂಡಿ ಹಿಡಿಯುತ್ತಿದ್ದ. ನಾಗೇಂದ್ರನನ್ನು ರಮಿಸಿ ಅವನಿಗೆ ಸುಳ್ಳು ಸಮಾಧಾನ ಹೇಳಿ ಹಿಂದಿರುಗಬೇಕಾದರೆ ಮಹಾಬಲನಿಗೆ ಸಾಕು ಸಾಕಾಗಿ ಹೋಗುತ್ತಿತ್ತು. ಎರಡನೆಯ ಮಗು ವೆಂಕಟರಾಮು ಅಜ್ಜಿಯ ಆರೈಕೆಯಲ್ಲಿ ಬೆಳೆಯುತ್ತಿತ್ತು.

ಒಂದು ಸಲ ಮಹಾಬಲ ವಾರಾಂತ್ಯದಲ್ಲಿ ಚಿತ್ರದುರ್ಗಕ್ಕೆ ಹೋಗಿದ್ದಾಗ ಊಟ ಮುಗಿಸಿ ಹೊರಗಡೆ ಬಂದು ಕುಳಿತಿದ್ದ. ಅವನ ಮಾವನವರು ಬಂದು ಜತೆಯಲ್ಲಿ ಕುಳಿತರು. ಮಾತು ಸಾಗಿತು. ಅನಂತರಾಮಯ್ಯನವರು ಅಳಿಯನಿಗೆ

"ಮುಂದಿನ ವಿಷಯ ಏನು ಯೋಚನೆಮಾಡಿದ್ದೀರಿ?"

"ಯಾವ ವಿಷಯ?"

"ನಿಮ್ಮ ಸಂಸಾರದ ವಿಷಯ."

"ಅದರ ಕಥೆ ಮುಗಿಯಿತಲ್ಲಾ. ಈ ಎರಡು ಮಕ್ಕಳು ಬೆಳೆದು ವಿದ್ಯಾವಂತರಾಗಿ ಒಂದು ನೆಲೆ ಕಾಣುವುದಷ್ಟೇ ನಾನು ಯೋಚಿಸುತ್ತಿರುವುದು.

"ಹಾಗಂದರಾಗುತ್ತದೆಯೆ? ನಿಮಗಿನ್ನೂ ಚಿಕ್ಕ ವಯಸ್ಸು. ಚಿಗುರುತ್ತಿದ್ದ ಬಾಳಿನ ವೃಕ್ಷ ಕಡಿದು ಬಿತ್ತು. ಮನೆಯಲ್ಲಿ ನೀವು ಒಬ್ಬಂಟಿಗರು."

"ಬಂದದ್ದು ಅನುಭವಿಸಬೇಕು."

"ಮಕ್ಕಳನ್ನು ಬಿಟ್ಟು ಎಷ್ಟುದಿವಸ ಇರಬಲ್ಲಿರಿ? ಮಕ್ಕಳನ್ನು ಇಲ್ಲಿ ನಾವು ಇಟ್ಟುಕೊಂಡಿರುವುದಕ್ಕೆ ವ್ಯಥೆಪಡುತ್ತಿದ್ದೇನೆಂದು ಭಾವಿಸಬೇಡಿ. ನನ್ನ ಮಗಳ ಮಕ್ಕಳು ನನಗೆ ಭಾರವಿಲ್ಲ. ಆದರೆ ಮಕ್ಕಳನ್ನು ಯಾರು ಎಷ್ಟು ಚೆನ್ನಾಗಿ ನೋಡಿಕೊಂಡರೂ ತಾಯಿತಂದೆ ನೋಡಿಕೊಂಡ ಹಾಗಾಗುವುದಿಲ್ಲ."

"ನೀವು ಹೇಳುವುದು ನ್ಯಾಯವಾಗಿದೆ. ಬೆಂಗಳೂರಿನಲ್ಲಿ ನನ್ನ ದೇಹ ವಿದ್ದರೂ ಮನಸ್ಸೆಲ್ಲಾ ಇಲ್ಲಿಯೇ ಇರುತ್ತದೆ."

"ನೀವು ಹೀಗೆ ಕೊರಗಿ ಕೊರಗಿ ಸೊರಗುತ್ತಿರುವುದನ್ನು ನಾನು ನೋಡಲಾರೆ."

"ನನ್ನ ಏನು ಮಾಡೆಂದು ಹೇಳುವಿರಿ?"

"ಆ ವಿಷಯ ನಾನೂ ನಿಮ್ಮ ಅತ್ತೆಯೂ ಯೋಚನೆಮಾಡಿದ್ದೇವೆ. ಹೇಳೆಂದರೆ ಹೇಳುತ್ತೇನೆ. ನೀವು ಅನ್ಯಥಾ ಭಾವಿಸಬಾರದು."

"ನೀವಲ್ಲದೆ ನನ್ನ ಹಿತೈಷಿಗಳು ಬೇರೆ ಯಾರಿದ್ದಾರೆ. ನಿಮ್ಮ ಸದುದ್ದೇಶಕ್ಕೆ ನಾನೇಕೆ ಅಪಾರ್ಥ ಕಲ್ಪಿಸಲಿ."

"ಈ ಮಾತು ನಿಮಗೆ ಹೇಳಬೇಕಾದರೆ ನಮ್ಮ ಕರುಳು ಕಿತ್ತು ಬರುತ್ತದೆ. ಆದರೆ ನಿಮ್ಮ ಯೋಗಕ್ಷೇಮ, ಈ ಎರಡು ಮಕ್ಕಳ ಯೋಗ ಕ್ಷೇಮ ನರಸು ನಮ್ಮ ಕೊರಳಿಗೆ ಕಟ್ಟಿ ಹೋಗಿದ್ದಾಳೆ. ನೀವು ಅಸುಖಿಗಳಾಗಿದ್ದರೆ ಅವಳ ಆತ್ಮಕ್ಕೆ ಶಾಂತಿಯಿಲ್ಲ."

"ಅವಳ ಗುಣ ವರ್ಣಿಸುವ ಶಕ್ತಿ ನನಗಿಲ್ಲ. ನಾಲ್ಕೇ ದಿನವಿದ್ದು ಮನೆಯನ್ನು ಬೆಳಕುಮಾಡಿ ಹೋಗಿಬಿಟ್ಟಳು."

"ನಮ್ಮ ಮಾತು ಒಂದು ನೀವು ನಡೆಸಿಕೊಡಬೇಕು. ವಚನವಿತ್ತರೆ ಹೇಳುತ್ತೇನೆ."

"ಹೇಳಿ. ನಿಮ್ಮ ಮಾತು ಯಾವುದೂ ತೆಗೆದು ಹಾಕುವುದಿಲ್ಲ"

"ನನ್ನ ಸೋದರಮಾವನ ಮಗಳು ಒಂದು ಹುಡುಗಿ ಇದೆ. ಗುಣಾಢ್ಯೆ. ಕಷ್ಟದಲ್ಲಿ ಬೆಳೆದ ಮಗು. ಅವಳಿಗೂ ವಿವಾಹವಯಸ್ಸು. ನೀವು ಆಗಬಹುದು ಎಂದರೆ ಮುಂದಿನ ಏರ್ಪಾಟು ಮಾಡುತ್ತೇನೆ."

"ಯಾವ ಮನಸ್ಸಿನಿಂದ ನಾನು ಇನ್ನೊಂದು ಮದುವೆ ಮಾಡಿ ಕೊಳ್ಳಲಿ. ನರಸೂ ಸ್ಥಾನಕ್ಕೆ ಬರಲು ಯಾರಿಗೂ ಸಾಧ್ಯವಿಲ್ಲ"

"ಸತ್ಯವಾದ ಮಾತು. ಈ ವಿಷಯ ನೀವು ಈಗಲೇ ನಿರ್ಧರಿಸಬೇಕಾಗಿಲ್ಲ. ಮುಂದಿನವಾರ ನೀವು ಬರುವುದಾದರೆ ಹುಡುಗಿಯನ್ನು ಕರೆಸಿರುತ್ತೇನೆ. ಅವಳನ್ನೊಮ್ಮೆ ನೋಡಿ—ಸಾವಕಾಶವಾಗಿ ವಿಚಾರಮಾಡಿ ನಿರ್ಧಾರಮಾಡಿ."

"ನಿಮಗೆ ಹೇಗೆ ಸೂಕ್ತವೋ ಹಾಗೆ ಮಾಡಿ" ಎಂದು ಹೇಳಿದ.

"ನರಸೂ ಸ್ಥಾನಕ್ಕೆ ಬರುವವಳು ನರಸೂ ಆಗಬಲ್ಲಳೆ' ಎಂದು ಮಹಾಬಲ ದೀರ್ಘವಾಗಿ ಆಲೋಚನೆ ಮಾಡಿದ.

"ಅನಂತರಾಮಯ್ಯನವರ ಸಲಹೆಯನ್ನು ಅಂಬುಜಮ್ಮನವರಲ್ಲಿ ಹೇಳಿದಾಗ ಅವರು

"ಹೆಣ್ಣು ನೋಡಿಕೊಂಡು ಬಾಪ್ಪ. ದೈವಸಂಕಲ್ಪ ಹೇಗಿದೆಯೋ ಬಲ್ಲವರಾರು" ಎಂದರು.

"ನಾನು ಪುನಃ ಮದುವೆಮಾಡಿಕೊಳ್ಳಬೇಕೆಂದು ನೀವೂ ಹೇಳುವಿರಾ ?"

"ಇನ್ನೇನು ಮಾಡಲು ಸಾಧ್ಯ ಮಹಾಬಲ. ನಿನ್ನ ಮಾವನವರ ಕಷ್ಟ ಸುಖ ಹೇಗಿದೆಯೋ ? ನಿನ್ನ ಮಕ್ಕಳು ಎಷ್ಟು ದಿವಸ ಕಂಡವರ ಮನೆಯಲ್ಲಿ ಬೆಳೆಯುವುದಕ್ಕಾಗುತ್ತದೆ. ನಿನ್ನ ಮಾವನವರ ಸಂಸಾರವೂ ದೊಡ್ಡ ಸಂಸಾರ. ಅವರು ತಾನೆ ಎಷ್ಟು ನಿರ್ವಹಿಸಬಲ್ಲರು ?"

ಮಹಾಬಲನಿಗೆ ಬೇರೆ ದಿಕ್ಕು ತೋರಲಿಲ್ಲ. ಶನಿವಾರ ರಾತ್ರಿ ಹೊರಟು ಭಾನುವಾರ ಬೆಳಿಗ್ಗೆ ಚಿತ್ರದುರ್ಗ ಸೇರಿದ.

ಅನಂತರಾಮಯ್ಯನವರು ಮೊದಲೇ ಕಾಗದ ಬರೆದು ತಮ್ಮ ಸೋದರ ಸೊಸೆಯನ್ನು ಕರೆಸಿಕೊಂಡಿದ್ದರು.

ಪುಟ್ಟತಾಯಿಗೆ ಹತ್ತೊಂಭತ್ತು ತುಂಬಿತ್ತು. ಕೇಳಿದವರಿಗೆ ಅವಳ ತಾಯಿ ಲಕ್ಷ್ಮಮ್ಮ ಹದಿನಾರು ವಯಸ್ಸೆಂದು ಹೇಳುತ್ತಿದ್ದರು.

ಪುಟ್ಟತಾಯಿ ಸುರೂಪಿಯಾಗಿದ್ದಳು. ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದುದರಿಂದ ಶಿಕ್ಷಣ ಮುಂದೆ ಸಾಗಿರಲಿಲ್ಲ ಕನ್ನಡ ಲೋವರ್ ಸೆಕೆಂಡರಿ ಮಾಡಿಕೊಂಡಿದ್ದಳು. ಆರೋಗ್ಯ ಅವಳ ಮೈಯಿಂದ ಚಿಮ್ಮುತ್ತಿತ್ತು.

ಮಹಾಬಲ ಹೆಣ್ಣನ್ನು ನೋಡಿದ. ಸಂಜೆಗೆ ಅನಂತರಾಮಯ್ಯನವರು ಕೇಳಿದರು.

"ಅವರಿಗೆ ಏನಾದರೂ ಹೇಳುವಿರೇನು. ಈಗ ಸಾಧ್ಯವಿಲ್ಲದಿದ್ದರೆ ಊರಿಗೆ ಹೋಗಿ ಕಾಗದ ಬರೆಯಿರಿ."

"ಈ ವಿಷಯದಲ್ಲಿ ನಾನು ಸ್ವತಂತ್ರವಾಗಿ ಯಾವ ನಿರ್ಧಾರಕ್ಕೂ

ಬರಲಾರೆ. ನೀವೂ ಅತ್ತೆಮ್ಮನವರೂ ಹೇಗೆ ನಿರ್ಧರಿಸಿದರೆ ಹಾಗೆ ಮಾಡಲು ಸಿದ್ಧನಾಗಿದ್ದೇನೆ."

"ಹಾಗಾದರೆ ಮುಂದಿನ ಏರ್ಪಾಡು ನೋಡಿಕೊಳ್ಳುತ್ತೇನೆ. ಮುಂದಿನ ವೈಶಾಖಕ್ಕೆ ಲಗ್ನಕಾರ್ಯ ಮುಗಿದುಹೋಗಲಿ. ಇಲ್ಲೇ ನಾನು ಎಲ್ಲಾ ವ್ಯವಸ್ಥೆ ಮಾಡುತ್ತೇನೆ."

"ನಿಮ್ಮ ಇಷ್ಟ" ಎಂದು ಹೇಳಿದ.

'ಶುಭಸ್ಯ ಶೀಘ್ರಂ' ಎಂದು ಅನಂತರಾಮಯ್ಯನವರು ಲಗ್ನದ ವ್ಯವಸ್ಥೆ ಮಾಡಿದರು.

ವೈಶಾಖ ಮಾಸ ಓಡುತ್ತ ಬಂದಿತು. ಮಹಾಬಲನ ಲಗ್ನವನ್ನು ಅನಂತರಾಮಯ್ಯನವರೇ ಸಾಂಗವಾಗಿ ನೆರವೇರಿಸಿದರು.

ಲಗ್ನಕಾರ್ಯ ಮುಗಿದ ಮೇಲೆ ಹೆಂಡತಿ, ಅತ್ತೆಯೊಂದಿಗೆ ತನ್ನ ಇಬ್ಬರು ಮಕ್ಕಳನ್ನು ಕರೆದುಕೊಂಡು ಮಹಾಬಲ ಬೆಂಗಳೂರಿಗೆ ಬಂದ.

ಲಕ್ಷಮ್ಮನವರಿಗೂ ಯಾರೂ ದಿಕ್ಕಿಲ್ಲದಿದ್ದುದರಿಂದ ಅಳಿಯನ ಮನೆಯಲ್ಲಿಯೇ ಕಾಲದೂಡಲು ನಿಶ್ಚಯಿಸಿದರು.

ಮಕ್ಕಳು ಮನೆಗೆ ಬಂದವಲ್ಲಾ ಎಂದು ಮಹಾಬಲ ಸಂತೃಪ್ತನಾದ.

## ೨೬

ಗಂಡನ ಮನೆಗೆ ಬಂದ ಪುಟ್ಟತಾಯಿಯನ್ನು ಸ್ವಾಗತಿಸಲು ಮನೆಯವರಾಗಿ ಯಾರೂ ಇರಲಿಲ್ಲ. ಅಂಬುಜಮ್ಮನವರು ತಮ್ಮ ಸೊಸೆ ರಾಜಲಕ್ಷ್ಮಿಯನ್ನು ಕರೆದುಕೊಂಡು ಬಂದು ಪುಟ್ಟತಾಯಿಗೆ ಆರತಿ ಮಾಡಿಸಿ ಬರಮಾಡಿಕೊಂಡರು.

ತನ್ನ ಮನೆಯಲ್ಲಿ ಅಂಬುಜಮ್ಮನವರಿಗಿದ್ದ ಸ್ಥಾನಮಾನವನ್ನು ಮಹಾಬಲ ಹೆಂಡತಿಗೆ ವಿವರಿಸಿದ್ದ. ಪುಟ್ಟತಾಯಿಯೂ ಅವರ ವಿಷಯದಲ್ಲಿ ತುಂಬ ಭಕ್ತಿ ಗೌರವದಿಂದ ನಡೆದುಕೊಳ್ಳುತ್ತಿದ್ದಳು.

ಒಂದು ದಿನ ಅಂಬುಜಮ್ಮನವರು ಪುಟ್ಟತಾಯಿಯನ್ನು ಕೂರಿಸಿಕೊಂಡು ನರಸೂ ಮಹಾಬಲನಿಗೆ ಗೊತ್ತಾದುದು, ಅವರ ಲಗ್ನ, ಸಂಸಾರ ಅವಳ ಅವಸಾನದ ಕಥೆಯನ್ನು ವಿಶದವಾಗಿ ನಿರೂಪಿಸಿ,

"ನಿನ್ನ ಜವಾಬ್ದಾರಿ ಹೆಚ್ಚು ಇದೆ ಕಣೇ ತಾಯಿ. ದೊಡ್ಡಮನೆ, ಅದರ ಆಡಳಿತ ನೀನು ನೋಡಿಕೊಳ್ಳಬೇಕು; ನಿನ್ನ ಗಂಡನ ಯೋಗಕ್ಷೇಮ ನೀನು ನೋಡಿಕೊಳ್ಳಬೇಕು; ನರಸೂ ಎರಡು ಮಕ್ಕಳನ್ನು ನಿನ್ನ ಕೊರಳಿಗೆ ಕಟ್ಟಿ ಹೋಗಿದ್ದಾಳೆ—ಅವುಗಳ ಯೋಗಕ್ಷೇಮ ನೋಡಿಕೊಳ್ಳಬೇಕು. ಇವೆಲ್ಲಕ್ಕಿಂತ ಹೆಚ್ಚಾಗಿ ನರಸೂ ಎಲ್ಲರ ವಿಶ್ವಾಸ ಗೌರವ ಸಂಪಾದಿಸಿದ ಹಾಗೆ ನೀನೂ ಸಂಪಾದಿಸಿ ಈ ಮನೆಯ 'ಗೃಹಲಕ್ಷ್ಮಿ' ಯಾಗಬೇಕು."

"ನನಗೆ ದಾರಿತೋರಿಸುವುದಕ್ಕೆ ನೀವಿರುವಾಗ ಭಯವೇನು ಅಂಬುಜಮ್ಮನವರೇ."

"ನಿನ್ನ ಮನೆಯಲ್ಲಿ ಒಂದು ಸೂಕ್ಷ್ಮ ವಿಚಾರವಿದೆ ಪುಟ್ಟತಾಯಿ. ಅದನ್ನು ನೀನು ತಿಳಿದುಕೊಳ್ಳಬೇಕು. ನೀನು ಜಾಣೆ—ನಾನು ಹೇಳಬೇಕಾದದ್ದು ಏನೂ ಇಲ್ಲ. ಆದರೆ........?"

"ಹೇಳಿ ನೀವು ಹೇಳದೆ ಇನ್ನು ಯಾರು ನನಗೆ ಹೇಳಬೇಕು."

"ನಾಗೇಂದ್ರ, ವೆಂಕಟರಾಮು ತಾಯಿಯಿಲ್ಲದ ಮಕ್ಕಳು. ಅವರ ಯೋಗಕ್ಷೇಮ ನೀನು ತುಂಬ ಎಚ್ಚರದಿಂದ ನೋಡಿಕೊಳ್ಳಬೇಕು. ಸವತಿ ಎಷ್ಟೇ ಒಳ್ಳೆಯವಳಾದರೂ ದೂರುವುದು ಜನರ ವಾಡಿಕೆ. ಅಂಥ ದೂರಿಗೆ ಅವಕಾಶ ಕೊಡಬೇಡ."

"ಇಲ್ಲ ಅಂಬುಜಮ್ಮನವರೇ. ಅಕ್ಕನ ಮಕ್ಕಳು ನನ್ನ ಮಕ್ಕಳೇ ಅಲ್ಲವೆ? ಅವರನ್ನು ಗೋಳು ಹುಯ್ದುಕೊಂಡು ನಾನು ಯಾವ ಸುಖ ಪಡಬೇಕು. ನಾಳೆ ಈ ಮಕ್ಕಳು ವಯಸ್ಸಿಗೆ ಬಂದ ಮೇಲೆ 'ನಮ್ಮ ಚಿಕ್ಕಮ್ಮ ಒಳ್ಳೆಯವಳು—ತಾಯಿ ಇಲ್ಲವೆನಿಸಲಿಲ್ಲ' ಎಂದು ಹೇಳಿದರೆ ಅದಕ್ಕಿಂತ ನನಗೆ ಉಡುಗೊರೆ ಬೇಕೆ?"

"ನೂರು ವರ್ಷ ಆಯುಸ್ಸು ಹಾಕಿಕೊಂಡು ಚೆನ್ನಾಗಿ ಬಾಳು ನನ್ನಮ್ಮಾ. ನಿನ್ನ ಮಾತು ಕೇಳಿ ನನ್ನ ಭಯವೆಲ್ಲಾ ಹಾರಿಹೋಯಿತು."

ಎಂದು ತೃಪ್ತಿಪಟ್ಟುಕೊಂಡರು.

ಪುಟ್ಟತಾಯಿಗೆ ಇದ್ದಷ್ಟು ತಾಳ್ಮೆ, ಸಹನೆ ಅವಳ ತಾಯಿ ಲಕ್ಷಮ್ಮನವರಿಗಿರಲಿಲ್ಲ. ನಾಗೇಂದ್ರ ಸ್ವಭಾವತಃ ತುಂಟ. ಮಡಿಯಲ್ಲಿರುತ್ತಿದ್ದ ಅಜ್ಜಿಯನ್ನು ಮುಟ್ಟಿ ಮೈಲಿಗೆ ಮಾಡಿ ಅವರ ಕೈಯಲ್ಲಿ ಪೂಜೆ ಮಾಡಿಸಿಕೊಳ್ಳು

ವುದೆಂದರೆ ಅವನಿಗೆ ಹಿಗ್ಗು, ಪುಟ್ಟತಾಯಿ ಅವನನ್ನೆತ್ತಿಕೊಂಡು ಹೋಗಿ, ಜೇಬಿನ ತುಂಬ ದ್ರಾಕ್ಷಿ, ಬಾದಾಮಿ ತುಂಬಿ ನಯವಾಗಿ

"ನಾಗೇಂದ್ರೂ, ಏನು ತುಂಟತನ ಬೇಕಾದರೂ ಮಾಡು. ಆದರೆ ಅಜ್ಜಿಯ ತಂಟೆಗೆ ಮಾತ್ರ ಹೋಗಬೇಡಪ್ಪಾ. ಅವಳು ಸ್ವಲ್ಪ ಸಿಡುಕು— ನಿನ್ನ ಅವಳು ಗದರಿಸಿದರೆ ನನಗೆ ದುಃಖವಾಗುತ್ತದೆ."

ನಾಗೇಂದ್ರ ವಿನಮ್ರನಾಗಿ 'ಇಲ್ಲ ಚಿಕ್ಕಮ್ಮ' ಎಂದು ಹೇಳುತ್ತಿದ್ದ. ಆದರೆ ಬಾಲ್ಯದ ಸಹಜ ಪ್ರವೃತ್ತಿ ಮತ್ತೆ ಮತ್ತೆ ಅಜ್ಜಿಯನ್ನು ಕೆಣಕುವಂತೆ ಅವನನ್ನು ಪ್ರೇರೇಪಿಸುತ್ತಿತ್ತು, ಇದರಿಂದ ಒಂದು ದಿನ ಸ್ವಲ್ಪ ಹಗರಣವೇ ಆಯಿತು.

ಶನಿವಾರ ಲಕ್ಷ್ಮಮ್ಮನವರ ಪೂಜಾ ಕಲಾಪಗಳು ಬಹಳ. ಅದೇ ಸ್ನಾನ ಮಾಡಿ ಅವರು ದೇವರ ಮನೆಗೆ ಬಂದಿದ್ದಾರೆ. ನಾಗೇಂದ್ರ ಎಲ್ಲಿದ್ದನೋ ಇದ್ದಕ್ಕಿದ್ದಂತೆ ಅವತರಿಸಿ ಅಜ್ಜಿಯನ್ನು ಮುಟ್ಟಿಬಿಟ್ಟು 'ಮುಟ್ಟಿಬಿಟ್ಟೆ' ಎಂದು ಕೇಕೆ ಹಾಕಿದ. ಲಕ್ಷ್ಮಮ್ಮನವರಿಗೆ ವಿಪರೀತ ಕೋಪ ಬಂತು. ನಾಗೇಂದ್ರನನ್ನು ಅಟ್ಟಿಸಿಕೊಂಡು ಹೋದರು. ಓಡಾಟದಲ್ಲಿ ನಾಗೇಂದ್ರ ಹೊಸಲು ಎಡವಿ ಬಿದ್ದುಬಿಟ್ಟ. ಹಣೆಗೆ ಸ್ವಲ್ಪ ಪೆಟ್ಟುತಾಕಿ ರಕ್ತ ಕಾಣಿಸಿಕೊಂಡಿತು. ಲಕ್ಷ್ಮಮ್ಮ ಅವನನ್ನು ಸಮಾಧಾನಮಾಡಲೆತ್ನಿಸಿದರು. ನಾಗೇಂದ್ರ 'ಹೋ' ಎಂದು ಪ್ರಲಾಪ ಆರಂಭಿಸಿದ. ಮನೆಗೆಲಸದಲ್ಲಿದ್ದ ಪುಟ್ಟತಾಯಿ ಓಡಿಬಂದಳು. ನಾಗೇಂದ್ರನ ಬಾಯಲ್ಲಿ ಅಸ್ಪಷ್ಟವಾಗಿ ಹೊರಟ ಮಾತುಗಳಿಂದ ಲಕ್ಷ್ಮಮ್ಮ ಅವನನ್ನು ಹೊಡೆದಿದ್ದಾರೆಂದು ಭಾವಿಸಿ ತಾಯಿಯ ಮೇಲೆ ಕೆರಳಿ,

"ನೀನು ಯಾಕಮ್ಮ, ಅವನ ಮೇಲೆ ಕೈಮಾಡಿದ್ದು"

ಎಂದು ಕೇಳಿದಳು. ಲಕ್ಷ್ಮಮ್ಮ ಸಾವಕಾಶವಾಗಿ ನಡೆದುದನ್ನು ವಿವರಿಸಿದರೂ ಪುಟ್ಟತಾಯಿಗೆ ಸಮಾಧಾನವಾಗಲಿಲ್ಲ.

"ಅವನು ಏನು ಬೇಕಾದರೂ ಮಾಡಿಕೊಳ್ಳಲಿ. ಅವನ ತಂಟೆಗೆ ಯಾರೂ ಬರಬೇಡಿ. ಯಾರಾದರೂ ನಾಗೇಂದ್ರನ ಮೇಲೆ ಕೈಮಾಡಿದರೆ ನಾನು ಸುಮ್ಮನೆ ಇರುವುದಿಲ್ಲ." ಎಂದು ಹೇಳಿದಳು.

ಲಕ್ಷ್ಮಮ್ಮನವರ ಮನಸ್ಸು ನೊಂದಿತು. ಅಂದು ಬಾಯಿಗೆ ನೀರು

ಕೂಡ ಹಾಕದೆ ನಿಟ್ಟುಪವಾಸ ಮಾಡಿದರು. ಮೂರನೆಯ ದಿನ ಮಗಳೇ ಬಲವಂತಮಾಡಿ ತಾಯಿಗೆ ಪಾರಣೆ ಮಾಡಿಸಬೇಕಾಯಿತು.

ಲಕ್ಷ್ಮಮ್ಮನವರು ಇದ್ದರೂ ಅಡಿಗೆಯಾಕೆ ಕಾಡಮ್ಮನವರನ್ನು ಹೋಗೆಂದು ಹೇಳಲಿಲ್ಲ.

"ಅಮ್ಮ ಇರುವಾಗ ಕಾಡಮ್ಮನವರು ಏಕೆ?"

ಎಂದು ಪುಟ್ಟತಾಯಿ ಗಂಡನನ್ನು ಕೇಳಿದಳು.

"ಅತ್ತೆಯನ್ನು ಕರೆದುಕೊಂಡು ಒಂದು ಮನೆಚಾಕರಿಗೆ ಹಾಕಿಕೊಳ್ಳು ವುದು ಯಾವ ನ್ಯಾಯ. ಅವರು ಸುಖವಾಗಿರಲಿ. ಕಾಡಮ್ಮನವರು ಮನೆ ಗೆಲಸ ನೋಡಿಕೊಳ್ಳುತ್ತಾರೆ"

ಎಂದು ಸಮಾಧಾನ ಹೇಳಿದ.

ವರ್ಷ ಕಳೆದಕೂಡಲೆ ಪುಟ್ಟತಾಯಿ ಗರ್ಭಧರಿಸಿದಳು. ಅಂಬುಜಮ್ಮ, ರಾಜಲಕ್ಷ್ಮಿ ಆಗಾಗ್ಗೆ ಬಂದು ಗರ್ಭಿಣಿಯ ಉಪಚಾರ ಮಾಡುತ್ತಿದ್ದರು. ಚೌಡಪ್ಪನವರ ಮನೆ ನಂದಗೋಕುಲವಾಗುತ್ತಿರುವುದನ್ನು ಕಂಡು ಅಂಬು ಜಮ್ಮನವರು ಹಿರಿಹಿರಿ ಹಿಗ್ಗಿದರು.

ಲಕ್ಷ್ಮಮ್ಮನವರು ಮಗಳ ಆರೈಕೆ ನೋಡಿಕೊಂಡು ಹೆರಿಗೆ ಮಾಡಿದರು. ಒಳ್ಳೆಯ ನಕ್ಷತ್ರದಲ್ಲಿ ಪುಟ್ಟತಾಯಿ ಗಂಡುಮಗುವನ್ನು ಪ್ರಸವಿಸಿದಳು.

ಮನೆಯಲ್ಲಿ ಲಕ್ಷ್ಮಮ್ಮನವರಿಗೂ, ಕಾಡಮ್ಮನವರಿಗೂ ಕೈತುಂಬ ಕೆಲಸ ವಾಗಿತ್ತು. ನಾಗೇಂದ್ರ, ವೆಂಕಟರಾಮುವನ್ನು ನೋಡಿಕೊಳ್ಳುವ ಭಾರ ಕಾಡಮ್ಮನವರು ಹೊರಬೇಕಾಗಿತ್ತು.

ಹೊಲೆಮನೆಯಲ್ಲಿದ್ದರೂ ಪುಟ್ಟತಾಯಿ ಲಕ್ಷ್ಯವೆಲ್ಲಾ ನಾಗೇಂದ್ರ, ವೆಂಕಟರಾಮು ಮೇಲೆಯೇ ಇರುತ್ತಿತ್ತು. ಆ ಮಕ್ಕಳಿಗೆ ಯಾವ ಕೊರತೆಯೂ ಆಗದಂತೆ ನೋಡಿಕೊಳ್ಳುತ್ತಿದ್ದಳು.

ಮಹಾಬಲನ ಗೃಹಸಂಪತ್ತಿ ಬೆಳೆದಂತೆ ವ್ಯಾಪಾರ ಸಂಪತ್ತಿಯೂ ಬೆಳೆಯಲಾರಂಭವಾಯಿತು. ಸುಬ್ಬುಕೃಷ್ಣ

"ಮಹಾಬಲ, ನಿನಗೀಗ ಶುಕ್ರದೆಸೆ ಹೊಡೆದು ಬಾರಿಸುತ್ತಿದೆ ಕಣಯ್ಯ. ನೀನು ಮುಟ್ಟಿದ್ದೆಲ್ಲಾ ಚಿನ್ನ"

ಎಂದು ಹೇಳುತ್ತಿದ್ದ.

ಸುಬ್ಬುಕೃಷ್ಣನ ಮಾತಿನಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿರಲಿಲ್ಲ. ಮಹಾಬಲ ಸ್ವಂತಗಳಿಕೆಯಿಂದ ಎಂಭತ್ತು ಸಾವಿರ ರೂಪಾಯಿ ಬ್ಯಾಂಕಿನಲ್ಲಿ ಶೇಖರಿಸಿದ್ದ. ವರ್ತಕವರ್ಗದಲ್ಲಿ ಅವನಿಗೆ ವಿಶೇಷ ಗೌರವಾದರ ಸಂದಾಯವಾಗುತ್ತಿತ್ತು.

ವರ್ತಕರಲ್ಲಿಯೂ, ಇತರರಲ್ಲಿಯೂ ಮಹಾಬಲ ಗೌರವ ದೊರಕಿಸಿಕೊಳ್ಳುವುದಕ್ಕೆ ಮತ್ತೊಂದು ಕಾರಣವಿತ್ತು. ಲಕ್ಷಾಂತರ ರೂಪಾಯಿಗಳಿಸಿದರೂ ದಾನ ಧರ್ಮಕ್ಕೆ ಬಿಡಿಗಾಸು ಕೊಡಲು ಹಿಂದೆ ಮುಂದೆ ನೋಡುತ್ತಿದ್ದ ಶ್ರೀಮಂತ ವರ್ತಕರಿಗೆ ಮಹಾಬಲ ಮಾದರಿಯಾಗಿದ್ದ. ಯಾರು ಜೋಳಿಗೆ ಹಿಡಿದು ಬಂದರೂ ಇಲ್ಲವೆನ್ನುವ ಅಭ್ಯಾಸ ಅವನಲ್ಲಿರಲಿಲ್ಲ. ಬಡಬಗ್ಗರಿಗೆ ಅನ್ನಸಂತರ್ಪಣೆ ಮಾಡಿಸಬೇಕೆಂದರೆ ಮಹಾಬಲ ಎಲ್ಲರಿಗಿಂತ ಮುಂದಾಗಿ ನಿಂತು ಧಾರಾಳವಾಗಿ ಖರ್ಚುಮಾಡುತ್ತಿದ್ದ.

ವ್ಯಾಪಾರದಲ್ಲಿಯೂ ಅವನು ನೀತಿಮಾರ್ಗವನ್ನು ಬಿಡುತ್ತಿರಲಿಲ್ಲ. ನ್ಯಾಯವಾದ ಲಾಭವನ್ನಲ್ಲದೆ ಹೆಚ್ಚು ಸ್ವೀಕರಿಸುತ್ತಿರಲಿಲ್ಲ ; ಅವನ ಗಿರಾಕಿಗಳು ಅಂಗಡಿಯ ನೀತಿನೈಪುಣ್ಯ ನೋಡಿ ಸಂತೃಪ್ತರಾಗುತ್ತಿದ್ದರು. ಇದರಿಂದ ಮಹಾಬಲನಿಗೆ ಅನುಕೂಲವಾಯಿತೇ ವಿನಾ ಅನಾನುಕೂಲವಾಗಲಿಲ್ಲ. ಮಹಾಬಲ ಕೊಡುತ್ತಿದ್ದ ಸಾಮಾನು, ನಿಷ್ಕರ್ಷಿಸುತ್ತಿದ್ದ ಧಾರಣೆಯನ್ನು ಗಿರಾಕಿಗಳು ಪ್ರತಿಭಟಿಸುತ್ತಿರಲಿಲ್ಲ.

ಮಹಾಬಲನ ಅಭ್ಯುದಯವನ್ನು ಲಕ್ಷ್ಯಗೊಟ್ಟು ಗಮನಿಸುತ್ತಿದ್ದವರಲ್ಲಿ ಉಮಾಪತಿಯೂ ಒಬ್ಬ. ಅವನ ತಂದೆ ಚಿಂತಾಮಣಿ ಶ್ರೀನಿವಾಸ ಶೆಟ್ಟರು ವೈಕುಂಠವಾಸಿಗಳಾದ ಮೇಲೆ ಉಮಾಪತಿಯೇ ಅವರ ಎಲ್ಲ ಆಸ್ತಿಗೂ ಹಕ್ಕುದಾರನಾಗಿದ್ದ.- ಮೊದಲಿನಿಂದ ವ್ಯಾಪಾರದಲ್ಲಿ ಖದೀಮನಾದ ಉಮಾಪತಿಗೆ ತಂದೆಯ ವ್ಯವಹಾರ ಮುಂದುವರಿಸಿಕೊಂಡು ಹೋಗುವುದು ಕಷ್ಟವಾಗಲಿಲ್ಲ.

ಮಹಾಬಲನ ವ್ಯವಹಾರ ಸಂಬಂಧ ತಾನು ಕಳೆದುಕೊಂಡದ್ದು ತಪ್ಪಾಯಿತೆಂದು ಉಮಾಪತಿ ಭಾವಿಸಿದ. ಹೇಗಾದರೂ ಮಾಡಿ ಮತ್ತೆ ಮಹಾಬಲನನ್ನು ಜತೆಯಲ್ಲಿ ಕರೆದುಕೊಳ್ಳಬೇಕೆಂಬ ಆಕಾಂಕ್ಷೆ ಅವನಲ್ಲಿ ಬಲವಾಯಿತು.

ಕೆಲವು ತಿಂಗಳು ಕಳೆದ ಮೇಲೆ, ಉಮಾಪತಿಗೆ ಒಂದು ಸದವಕಾಶ ಸಿಕ್ಕಿತು. ಅಂಜನಪ್ಪನವರ 'ಮಾರುತಿ ವೀವಿಂಗ್ ಮಿಲ್ಸ್' ಮಾರಾಟಕ್ಕೆ ಬಂದಿತ್ತು. ಅದನ್ನೇ ವ್ಯಾಜಮಾಡಿಕೊಂಡು ಉಮಾಪತಿ ಮಹಾಬಲ ನನ್ನು ಹುಡುಕಿಕೊಂಡು ಬಂದ.

ಬಹಳ ದಿವಸಗಳ ಮೇಲೆ ಬಂದ ಉಮಾಪತಿಯನ್ನು ವಿಶ್ವಾಸದಿಂದ ಸ್ವಾಗತಿಸಿ ಮಹಾಬಲ ತನ್ನ ಮಕ್ಕಳ ಪರಿಚಯ ಮಾಡಿಕೊಟ್ಟ.

"ಹಿರಿಯರಿದ್ದರೆ ಎಷ್ಟು ಸಂತೋಷಪಡುತ್ತಿದ್ದರೋ" ಎಂದು ಉಮಾ ಪತಿ ಉದ್ಗಾರತೆಗೆದ.

"ಆ ಅದೃಷ್ಟ ನನಗೆಲ್ಲಿಂದ ಬಂತು ಉಮಾಪತಿ."

"ನಿನ್ನ ಅದೃಷ್ಟದ ಮುಂದೆ ಯಾರದೇನು ನಿಲ್ಲುತ್ತದೆ ಮಹಾಬಲ. ಎಲ್ಲಾ ದೇವರುಗಳೂ ನಿನಗೇ ಸಹಾಯ ಮಾಡಲು ಹಟತೊಟ್ಟ ಹಾಗೆ ಕಾಣುತ್ತದೆ."

"ಯಾಕಯ್ಯ ಹೀಗನ್ನುತ್ತೀ, ದೇವರುಗಳು ನಿನಗೆ ಕಡಿಮೆ ಮಾಡಿರು ವುದೇನು ?"

"ವೆಂಕಟರಮಣಸ್ವಾಮಿ ಕೃಪೆಯಿಂದ ಏನೂ ಕಡಿಮೆಯಾಗಿಲ್ಲಾನ್ನು. ಆದರೆ ನಿನ್ನ ಅದೃಷ್ಟ ಯಾರಿಗಾದರೂ ಹೊಟ್ಟೆಕಿಚ್ಚು ಬರಿಸುವಂಥದು ಮಹಾಬಲ."

"ನಿನಗೆ ಹೊಟ್ಟೆಯ ಕಿಚ್ಚೇ ?"

"ಛೆ! ಛೆ! ನನ್ನ ಸ್ನೇಹಿತ ಪ್ರವೃದ್ಧಮಾನಕ್ಕೆ ಬರುತ್ತಿದ್ದಾನೆಂದರೆ ನನಗೆ ಹೊಟ್ಟೆಯಕಿಚ್ಚೆ ?"

"ನನ್ನ ಅಭ್ಯುದಯ ನಿನಗೆ ಸೇರಿದ್ದು ಉಮಾಪತಿ. ಈ ವ್ಯಾಪಾರ ಮಾರ್ಗ ನನಗೆ ತೋರಿಸಿ, ಮೊದಲು ನೀನು ಉಪಕಾರ ಮಾಡದಿದ್ದರೆ ನನ್ನ ಗತಿ ಏನಾಗುತ್ತಿತ್ತೋ. ನಿನ್ನ ಉಪಕಾರ ನಾನೆಂದಿಗೂ ಮರೆಯಲಾರೆ."

ಮಹಾಬಲನ ಕೃತಜ್ಞತಾಪೂರ್ವಕವಾದ ನುಡಿ ಉಮಾಪತಿಗೆ ಸಂತಸ ವನ್ನುಂಟುಮಾಡಿತು.

"ನಾನು ಒಂದು ಕೆಲಸಕ್ಕೆ ಬಂದಿದ್ದೇನೆ ಮಹಾಬಲ."

"ಏನು ಹೇಳು."

"ನೀನು ಒಲ್ಲೆಯೆನ್ನಕೂಡದು."

"ವಿಷಯ ತಿಳಿಯದೆಯೇ ನಾನು ಹೇಗೆ ನಿರ್ಧರಿಸಲಿ."

"ಅಂಜನಪ್ಪನನ್ನು ಬಲ್ಲೆಯಷ್ಟೇ ?"

"ಬಲ್ಲೆ."

"ಅವನ 'ಮಾರುತಿ ವೀವಿಂಗ್ ಮಿಲ್ಸ್' ಮಾರಾಟಕ್ಕೆ ಬಂದಿದೆ."

"ಸುದ್ದಿ ಕೇಳಿದ್ದೆ. ಅವನು ಏತಕ್ಕೆ ಮಿಲ್ಸ್‌ಮಾರಲು ಹೊರಟದ್ದಾನೆ."

"ಅಂಜನಪ್ಪ ನಿಜವಾಗಿಯೂ ಚಾಣಾಕ್ಷ. ಅವನ ಕರ್ತೃತ್ವಶಕ್ತಿಗೆ ಸರಿಹೋಲುವವರು ನಮ್ಮಲ್ಲಿ ಯಾರೂ ಇಲ್ಲ. ನೋಡು–ಅವನು ಕೇವಲ ಇಪ್ಪತ್ತುಸಾವಿರ ರೂಪಾಯಿ ಬಂಡವಾಳದ ಮೇಲೆ ಮಿಲ್ಸ್ ಆರಂಭಿಸಿದ. ವಿಲಾಯಿತಿಯಿಂದ ಅವನು ತರಿಸಿದ್ದು ಎರಡೇ ಪವರ್ ಲೂಮ್ಸ್ (looms). ಆ ಲೂಮ್ಸ್‌ಗಳ ಮಾದರಿಯಿಟ್ಟುಕೊಂಡು ಸ್ಥಳೀಯ ಕೆಲಸಗಾರರಿಂದ ಎಂಟು ಲೂಮ್ಸ್ ತಯಾರಿಸಿ ಕಾರ್ಖಾನೆ ಆರಂಭಿಸಿದ. ವಿಲಾಯಿತಿಯ ಲೂಮ್ಸ್‌ಗಿಂತಲೂ, ಅಂಜನಪ್ಪ ತಯಾರು ಮಾಡಿಸಿದ ಲೂಮ್ಸ್ ಚೆನ್ನಾಗಿ ಕೆಲಸಮಾಡುತ್ತಿವೆ. ಬಂಡವಾಳಕ್ಕೆ ಅಲ್ಲಿ ಇಲ್ಲಿ, ಯದ್ವಾತದ್ವ ಬಡ್ಡಿಯ ಮೇಲೆ ಸಾಲಮಾಡಿದ. ಹಣದ ಬೆಲೆ ಈಗ ಇಳಿದುಹೋಗಿದೆ. ದುಡ್ಡು ಹುಟ್ಟುತ್ತಿಲ್ಲ. ಅಂಜನಪ್ಪ ಮಿಲ್ಸ್ ಮಾರಿಬಿಡಲು ಯೋಚಿಸುತ್ತಾ ಇದ್ದಾನೆ."

"ಮಿಲ್ಸ್ ಎಷ್ಟು ಬಾಳಬಹುದು ?"

"ಈಗಿನ ಧಾರಣೆಯಂತೆ ಒಂದು ಲಕ್ಷರೂಪಾಯಿ ಅಂಜನಪ್ಪ ಬೇಡುತ್ತಿದ್ದಾನೆ. ಸದ್ಯದ ಲೆಕ್ಕಾಚಾರದಲ್ಲಿ ಒಂದು ಲಕ್ಷ ಸ್ವಲ್ಪ ಹೆಚ್ಚಾಗಬಹುದು–ಆದರೆ ಒಂದೆರಡು ವರ್ಷಗಳಲ್ಲಿ ಅದರ ಬೆಲೆ ನಾಲ್ಕರಷ್ಟಾದರೂ ಏರುವುದರಲ್ಲಿ ಸಂದೇಹವಿಲ್ಲ."

"ನೀನು ಮಿಲ್ಸ್ ಕೊಳ್ಳುವ ಯೋಚನೆ ಮಾಡಿದ್ದೀಯೇನು ?"

"ನಾನೊಬ್ಬನೇ ಅಲ್ಲ–ನಾನೂ ನೀನೂ ಕೂಡಿ ಅದನ್ನು ಕೊಂಡರೆ ಒಳ್ಳೆಯದು. ಈಗ ನಿನಗೆ ಒಳ್ಳೆಯಕಾಲ. ನೀನು ಕೈಹಾಕಿದರೆ ಈ ಪ್ರಯತ್ನದಲ್ಲಿ ನಮಗೆ ಅತಿಶಯ ಜಯ, ಲಾಭ ದೊರೆಯುತ್ತದೆ."

"ಅಷ್ಟು ಬಂಡವಾಳ ನನ್ನಲ್ಲಿಲ್ಲ."

"ನೀನು ಎಷ್ಟು ಬಂಡವಾಳ ಹಾಕುವೆ ಹೇಳು—ಉಳಿದದ್ದು ನಾನು ಕೊಡುತ್ತೇನೆ."

"ಈ ವಿಷಯ ನನ್ನ ಲಾಯರು ಸುಬ್ಬುಕೃಷ್ಣಯ್ಯನವರನ್ನು ಕೇಳಿ ಹೇಳುತ್ತೇನೆ."

"ನಾವಿಬ್ಬರೂ ಸ್ಥೂಲವಾಗಿ ಮಾತನಾಡಿಕೊಳ್ಳೋಣ. ಮುಂದೆ ಲಾಯರನ್ನೂ ಕರೆದುಕೊಂಡು ಮಿಲ್ಸ್ ನೋಡಿಬಂದು, ಇತ್ಯರ್ಥಮಾಡೋಣ."

"ಒಂದು ವೇಳೆ ಇದನ್ನು ನಾವಿಬ್ಬರು ತೆಗೆದುಕೊಂಡೆವು ಎಂದಿಟ್ಟುಕೊಳ್ಳೋಣ—ಮುಂದೆ ಮಿಲ್ಸ್ ನೋಡಿಕೊಳ್ಳುವವರು ಯಾರು ?"

"ನೀನು."

"ನನಗೆಲ್ಲಿ ಪುರಸತ್ತಿದೆ ಉಮಾಪತಿ. ಈಗ ನಾನು ಬೆಳಸಿಕೊಂಡಿರುವ ಬಿಸಿನೆಸ್ (Business) ಬಿಟ್ಟು ಬೇರೊಂದಕ್ಕೆ ಕೈಹಾಕಿದರೆ ಇದೂ ಹೋಗುತ್ತದೆ, ಅದೂ ಹೋಗುತ್ತದೆ."

"ಪರಿಹಾರ ನೀನೇ ಸೂಚಿಸು."

"ಮುಂದೆ ಅಂಜನಪ್ಪ ಏನು ಮಾಡಬೇಕೆಂದಿದ್ದಾನೆ."

"ನಾನು ಆ ವಿಷಯ ಅವನ ಹತ್ತಿರ ಪ್ರಸ್ತಾಪಿಸಿಲ್ಲ."

"ಅವನನ್ನೂ ಜತೆಗೆ ತೆಗೆದುಕೊಳ್ಳೋಣ. ನೀನೂ ನಾನೂ ಬಂಡವಾಳ ಒದಗಿಸುವ ಪಾಲುಗಾರರು, ಅಂಜನಪ್ಪ ಕೆಲಸಮಾಡುವ ಪಾಲುಗಾರ."

"ಅದೂ ಯೋಚಿಸಬಹುದು. ನೀನು ಬಂಡವಾಳ ಎಷ್ಟು ಹಾಕಬಲ್ಲೆ ಹೇಳು."

"ಇಪ್ಪತ್ತೈದುಸಾವಿರ ಕೊಡಬಲ್ಲೆ."

"ನಲವತ್ತಾದರೂ ಕೊಡಲಾರೆಯಾ ?"

ಮಹಾಬಲ ಯೋಚಿಸಿ

"ಸುಬ್ಬುಕೃಷ್ಣಯ್ಯ ಒಪ್ಪಿದರೆ ನಲವತ್ತು ಕೊಡುತ್ತೇನೆ."

"ಸರಿ ಹಾಗಾದರೆ."

"ನೀನು ಐವತ್ತು ಸಾವಿರ ಕೊಡಬೇಕಾಗುವುದು"

"ಅದಕ್ಕೆ ಸಿದ್ಧನಾಗಿದ್ದೇನೆ. ನೀನು ನಲವತ್ತು ಕೊಟ್ಟರೆ ನಾನು ಅರವತ್ತು, ಸಾವಿರ ಹಾಕಬೇಕಾಗುತ್ತದೆ."

"ಕಂಪೆನಿಯ ಬಂಡವಾಳ ಒಂದು ಲಕ್ಷ, ಎಂದು ಹಿಡಿಯೋಣ ಹತ್ತು ಸಾವಿರದಂತೆ ಹತ್ತು ಷೇರುಗಳಾಗುತ್ತವೆ. ನಿನ್ನದು ಐವತ್ತು ಸಾವಿರ-ಐದು ಷೇರುಗಳು; ನನ್ನದು ನಲವತ್ತು ಸಾವಿರ-ನಾಲ್ಕು ಷೇರುಗಳು; ಅಂಜನಪ್ಪ ನದು ಹತ್ತುಸಾವಿರ- ಒಂದು, ಅಂಜನಪ್ಪ ತೊಂಭತ್ತುಸಾವಿರ ತೆಗೆದು ಕೊಂಡು ಈ ವ್ಯವಸ್ಥೆಗೆ ಒಪ್ಪುವಂತೆ ಮಾಡಬೇಕು."

"ಅವನನ್ನು ಒಪ್ಪಿಸಬಹುದು. ಅಂಜನಪ್ಪನ ಸಹಕಾರ ಬೇಕಾದರೆ ಅವನನ್ನು ಸಂಬಳದ ಮೇಲೆ ಏಕಿಟ್ಟುಕೊಳ್ಳಬಾರದು ?"

"ಅದು ಜಾಣತನವಲ್ಲ ಉಮಾಪತಿ. ಸ್ವಲ್ಪ ವಿಚಾರಮಾಡು. ಇದು ಅವನು ರಕ್ತಬಸಿದು ಕಟ್ಟಿದ ಮಿಲ್ಲು. ಈಗ ಕಷ್ಟಕ್ಕೆ ಸಿಕ್ಕಿ ಮಾರುತ್ತಿ ದ್ದಾನೆ. ಈ ಪರಿಸ್ಥಿತಿಯಲ್ಲಿ ಅವನು, ತಾನೇ ಸ್ಥಾಪಿಸಿದ ಮಿಲ್ಲಿನಲ್ಲಿ ನೌಕರ ನಾಗಿ ನಿಂತರೆ ಅವನ ಮನಸ್ಸಿಗೆ ಶಾಂತಿ ಸಮಾಧಾನವಿರುತ್ತದೆಯೇ? ಕೆಲಸದಲ್ಲಿ ಅವನಿಗೆ ಉತ್ಸಾಹವಿರುತ್ತದೆಯೇ? ಅವನು ಮನಃಪೂರ್ವಕ ವಾಗಿ ದುಡಿದು ಮಿಲ್ಲನ್ನು ಮುಂದಕ್ಕೆ ತರಬೇಕಾದರೆ ನಾನು ಸೂಚಿಸಿರುವ ವ್ಯವಸ್ಥೆಯೇ ಸರಿಯೆನಿಸುತ್ತದೆ. ಅವನ ಸಂಸಾರ ನಿರ್ವಹಣಕ್ಕೆ ತಿಂಗಳಿಗೆ ಮುನ್ನೂರು ರೂಪಾಯಿ ಕೊಡೋಣ."

"ಆಗಬಹುದು"

ಮಹಾಬಲನ ವ್ಯವಹಾರನೈಪುಣ್ಯ ಕಂಡು ಉಮಾಪತಿ ಬೆಕ್ಕಸ ಬೆರ ಗಾದ.

"ಮಹಾಬಲ—ನಾನು ಏನೋಂತಿದ್ದೆನಯ್ಯಾ. ನೀನು ಗುರುವಿಗೇ ತಿರುಮಂತ್ರ ಕಲಿಸಿದೆ. ವ್ಯವಹಾರದಲ್ಲಿ ನೀನು ಇಷ್ಟು ಚೂಟಿಯಾಗುತ್ತೀ ಎಂದು ನಾನು ಕನಸು ಮನಸಿನಲ್ಲಿಯೂ ಭಾವಿಸಿರಲಿಲ್ಲ."

"ಅದರ ರಹಸ್ಯ ಇಷ್ಟೇ ಉಮಾಪತಿ. ವ್ಯವಹಾರದ ಲೆಕ್ಕ ಹಾಕು ವಾಗಲೆಲ್ಲಾ ನಾವು, ನಮ್ಮ ಹಿತವೊಂದನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಲೆಕ್ಕ ಹಾಕುತ್ತೇವೆ. ಅದನ್ನು ಸ್ವಲ್ಪ ಮರೆತು, ಇತರರ ಹಿತವನ್ನೂ ಲಕ್ಷ್ಯದಲ್ಲಿ ಟ್ಟುಕೊಂಡರೆ ನಮಗೂ ಸುಖವಿದೆ, ಅವರಿಗೂ ಸುಖವಿದೆ."

ಉಮಾಪತಿ ಅವನ ಸಿದ್ಧಾಂತಕ್ಕೆ ಸಮ್ಮತಿ ಸೂಚಿಸಿದ.

ಮಾರನೆಯ ದಿನವೇ ಉಮಾಪತಿ ಅಂಜನಪ್ಪನಿಗೆ ತಿಳಿಸಿ ಮಹಾಬಲ

ನನ್ನೂ, ಸುಬ್ಬುಕೃಷ್ಣನನ್ನೂ ಕರೆದುಕೊಂಡು ಹೋಗಿ ಮಿಲ್ಸ್ ತೋರಿಸಿಕೊಂಡುಬಂದ.

ಸುಬ್ಬುಕೃಷ್ಣ ಕೂಡಲೆ ಯಾವ ಅಭಿಪ್ರಾಯವನ್ನೂ ತಿಳಿಸಲಿಲ್ಲ. ಒಂದು ವಾರ ಕಾಲಾವಧಿ ತೆಗೆದುಕೊಂಡ.

ಮಿಲ್ಸ್ ವ್ಯವಹಾರಕ್ಕೆ ಸಂಬಂಧಪಟ್ಟ ಮಾರಾಟಗಾರರು, ತಂತ್ರ ವಿಶಾರದರನ್ನು ಕರೆದುಕೊಂಡುಬಂದು ಸುಬ್ಬುಕೃಷ್ಣ ಅದರ ಸಾಧಕಬಾಧಕಗಳನ್ನು ಸರಿಯಾಗಿ ತಿಳಿದುಕೊಂಡು, ಈ ವ್ಯವಹಾರದಲ್ಲಿ ಯಾವ ಮೋಸವೂ ಇಲ್ಲವೆಂದು ಮನಸ್ಸಿಗೆ ಖಚಿತವಾದಮೇಲೆ ಕಾಗದ ಪತ್ರ ಮಾಡಿಸಲು ಅಡ್ಡಿಯಿಲ್ಲವೆಂದು ತಿಳಿಸಿದ.

ಅಂಜನಪ್ಪ ಪತ್ರದ ನಕಲು ನೋಡಿ ಆಶ್ಚರ್ಯಗೊಂಡು

"ಇದೇನು ಸ್ವಾಮಿ, ನಾನು ಇದ್ದುದನ್ನು ಮಾರಿಕೊಂಡು, ಎಲ್ಲಿಯಾದರೂ ತಲೆಮರಸಿಕೊಂಡು ಹೋಗೋಣವೆಂದಿದ್ದರೆ, ಕರಾರು ಏನೇನೋ ಹಾಕಿರುವಿರಲ್ಲಾ ?"

"ಅಂಜನಪ್ಪನವರೇ, ಈ ಕರಾರುಗಳನ್ನು ಸೂಚಿಸಿದವರು ಮಹಾಬಲರಾಯರು. ಅವರನ್ನೇ ಕೇಳಿ."

ಮಹಾಬಲ ಹತ್ತಿರ ಸರಿದು, ಅಂಜನಪ್ಪನವರ ಬಳಿ ಕುಳಿತುಕೊಂಡು

"ಅಂಜನಪ್ಪನವರೇ, ಈ ಸಂಸ್ಥೆ ಕಟ್ಟುವುದಕ್ಕೆ ನೀವು ಒಂದು ಜೀವಮಾನ ತೇದಿರುವಿರಿ. ಮಾರುತಿ ವೀವಿಂಗ್ ಮಿಲ್ಸ್ ನಿಮ್ಮ ಬುದ್ಧಿಯ ಶಿಶು. ವ್ಯವಹಾರದಲ್ಲಿ ಲಾಭನಷ್ಟ ಆಗುವುದು ಸ್ವಾಭಾವಿಕ. ನಿಮ್ಮ ಪರಿಸ್ಥಿತಿಯ ದುರುಪಯೋಗಮಾಡಿಕೊಂಡು ಅದರ ಲಾಭ ತೆಗೆದುಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ನಾನೂ ಕಷ್ಟಪಟ್ಟು ಸಂಪಾದಿಸಿದವನು. ಹಣದ ಬೆಲೆ, ದುಡಿಮೆಯ ಬೆಲೆ ಎರಡೂ ನನಗೆ ಗೊತ್ತಿದೆ. ಮುಂದೆಯೂ ಇದು ನಿಮ್ಮದೇ ಮಿಲ್ಲು ಎಂದು ತಿಳಿದುಕೊಂಡು ನೀವೇ ಯಜಮಾನರಾಗಿ ನಿಂತುಕೊಂಡು ಸಂಸ್ಥೆಯನ್ನು ನಡೆಸಿಕೊಂಡು ಹೋಗಬೇಕು. ಬಂಡವಾಳ ಒದಗಿಸುವ ಭಾರ ಉಮಾಪತಿಶೆಟ್ಟರಿಗೆ, ನನಗೆ ಇರಲಿ. ನಿಮ್ಮ ಎಲ್ಲ ಸೇವೆ ಸಾರ್ಥಕವಾಗುವ ಕಾಲ ಬಂದೇ ಬರುತ್ತದೆ. ಆಗ ದೊರೆಯುವ ಪ್ರಯೋಜನದ ಸಮಭಾಗ ನಿಮ್ಮದೂ ಆಗಬೇಕು. ದಯಿವಿಟ್ಟು ಈ ಕರಾರುಗಳಿಗೆ ಒಪ್ಪಿಕೊಳ್ಳಿ."

ಅಂಜನಪ್ಪನ ಅಂತಃಕರಣ ಉಕ್ಕೇರಿಬಂತು. ಉತ್ತಮರ ನೆರವು, ಸಮಯೋಚಿತ ಸಹಾಯ ದೊರೆತುದಕ್ಕೆ ಅವನು ತನ್ನ ಭಾಗ್ಯದೇವತೆಯನ್ನು ಮನಸಾರೆ ವಂದಿಸಿದ.

ಕಾಗದಪತ್ರಗಳಾದವು. ಅಂಜನಪ್ಪ ಸಾಲಗಾರರ ಕಾಟದಿಂದ ಬಿಡುಗಡೆ ಹೊಂದಿ ಮಿಲ್ಲಿನ ಕೆಲಸದಲ್ಲಿ ಆಲಿಪ್ತನಾದ. ಮಹಾಬಲ, ಉಮಾಪತಿ ತಮ್ಮ ನಿತ್ಯವ್ಯವಹಾರದಲ್ಲಿ ಎಂದಿನಂತೆ ಇರುತ್ತಿದ್ದರು. ಆದರೆ ಇಬ್ಬರೂ ದಿನಕ್ಕೆ ಒಂದು ಬಾರಿಯಾದರೂ ಮಿಲ್ಲಿಗೆ ಬಂದು ಅದರ ಕಾರ್ಯಕಲಾಪಗಳನ್ನು ಪರಾಮರ್ಶಿಸುತ್ತಿದ್ದರು. ಮಿಲ್ಲಿನ ಲೀಗಲ್ ಅಡ್ವೈಸರಾಗಿ ನೇಮಕವಾಗಿದ್ದ ಸುಬ್ಬುಕೃಷ್ಣನೂ ಅದರ ಕೆಲಸಕಾರ್ಯಗಳಲ್ಲಿ ಆಸಕ್ತಿವಹಿಸಿದ್ದ.

೨೭

ಎರಡನೆಯ ಮಹಾಯುದ್ಧದ ಕಾರ್ಮೋಡಗಳು ಆಗಸದಲ್ಲಿ ದಟ್ಟವಾಗಿ ಕವಿಯುತ್ತಿದ್ದವು. ಹಿಟ್ಲರನ ಪ್ರಬಲಪಕ್ಷ 'ರೀಷ್'ಗೆ ಬೆಂಕಿಯಿಟ್ಟು ಪ್ರಜಾಭಿಪ್ರಾಯವನ್ನು ತುಳಿದುಬಿಟ್ಟಿತು. ಯೂರೋಪಿನ ಸಣ್ಣ ಪುಟ್ಟ ರಾಷ್ಟ್ರಗಳು ಹಿಟ್ಲರನ ರಾಕ್ಷಸೀಮಹತ್ವಾಕಾಂಕ್ಷೆಗೆ ತುತ್ತಾಗವು. ಇಂಗ್ಲೆಂಡಿನ ಪ್ರಧಾನಾಮಾತ್ಯರು ಜರ್ಮನಿಗೆ ರಾಯಭಾರಿಗಳಾಗಿ ಹೋಗಿ ಹಿಟ್ಲರನ ರಾಜ್ಯದಾಹವನ್ನು ಉಪಶಮನಮಾಡಿಬಂದರು. ಸಮಯ ಸಾಧಿಸಿ ಹಿಟ್ಲರ್ ಇಂಗ್ಲೆಂಡಿನೊಡನೆ ಮಾಡಿಕೊಂಡಿದ್ದ ಒಪ್ಪಂದವನ್ನು ಮುರಿದುಬಿಟ್ಟ. ವಿಶ್ವದಲ್ಲಿ ಅಶಾಂತಿ ಮೂಡಿತು. ಯುದ್ಧದ ಝಂಝಾಮಾರುತ ಎಲ್ಲೆಡೆಯಲ್ಲಿಯೂ ಬೀಸಿತು.

ಇಂಗ್ಲೆಂಡಿನ ರಾಜ್ಯತಂತ್ರವಿಶಾರದರು ಭಾರತವನ್ನು ಯುದ್ಧಕ್ಕಿಳಿಸಲು ಹವಣಿಸಿದರು. ರಾಜ್ಯತಂತ್ರವಿಶಾರದ ಕ್ರಿಪ್ಸನನ್ನು ಭಾರತ ನಾಯಕರೊಂದಿಗೆ ಸಂಧಾನಮಾಡಲು ಕಳಿಸಿಕೊಟ್ಟರು. ಭಾರತ ನಾಯಕರು ಕ್ರಿಪ್ಸ ಪ್ರಭೃತಿಯ ಚಿನ್ನದ ಚೂರಿಗೆ ಮಣಿಯದೆ 'ಕ್ವಿಟ್ ಇಂಡಿಯಾ' ರಣಕಹಳೆಯನ್ನೂದಿದರು. ಬ್ರಿಟಿಷ್ ಸಾಮ್ರಾಜ್ಯಶಾಹಿಸರ್ಕಾರ ಅಪಮಾನ ಸಹಿಸಲಾಗದೆ ಭಾರತನಾಯಕರನ್ನು ಬಂಧಗ್ರಸ್ತರನ್ನಾಗಿ ಮಾಡಿತು. ದೇಶ ಅಲ್ಲೋಲ ಕಲ್ಲೋಲವಾಯಿತು.

ಜಗತ್ತಿನ ವಿಷಮಪರಿಸ್ಥಿತಿ ಆರ್ಥಿಕಭದ್ರತೆಯನ್ನು ಹಿಡಿದಲುಗಿಸಿತು.

ನಿತ್ಯಜೀವನಕ್ಕೆ ಬೇಕಾಗುವ ಆಹಾರವಸ್ತ್ರಗಳ ಬೆಲೆ ಏರುತ್ತ ಹೋಯಿತು. ಅಸ್ವತಂತ್ರ ಭಾರತ ಎಲ್ಲರಿಗಿಂತಲೂ ಹೆಚ್ಚಿನ ಸಂಕ್ಷೋಭೆಗೆ ತುತ್ತಾಯಿತು.

ಸರ್ಕಾರ ಒಂದು ಕಡೆ ಜನರ ರಕ್ತ ಹೀರತೊಡಗಿತು; ರಣಹದ್ದುಗಳಾದ ಬಂಡವಾಳಗಾರರು ಒಂದೆಡೆ ಜನರ ರಕ್ತ ಹೀರತೊಡಗಿದರು. ದಿನದಿನಕ್ಕೆ ಸಾಮಾನುಗಳ ಬೆಲೆ ಆಳತೆಮೀರಿ ಏರುತ್ತ ಹೋಯಿತು. ಶ್ರೀಮಂತರು ದಾಸ್ತಾನುಮಾಡಿ ಕಳ್ಳಪೇಟೆ ವ್ಯಾಪಾರ ಆರಂಭಿಸಿದರು.

ಎರಡೇ ವರ್ಷಗಳ ಹಿಂದೆ ಒಂದು ಲಕ್ಷರೂಪಾಯಿ ಬಂದರೆ ಧನ್ಯತೆ ಪಡೆಯುತ್ತಿದ್ದ 'ಮಾರುತಿ ವೀವಿಂಗ್ ಮಿಲ್ಸ್' ಬೆಲೆ ಹತ್ತು ಲಕ್ಷಕ್ಕೇರಿತು. ಇಳಿಗಾಲದಲ್ಲಿ ಅಂಜನಪ್ಪ ಶೇಖರಿಸಿದ್ದ ರೇಶ್ಮೆಯ ಧಾರಣೆ ಒಂದಕ್ಕೆ ಹತ್ತಾಯಿತು.

ಮಹಾಬಲನ ಶುಕ್ರದೆಸೆ 'ಮಾರುತಿ ವೀವಿಂಗ್ ಮಿಲ್ಸ್' ಗೂ ತಾಕಿತು. ಅದೇ ವರ್ಷ ಉಮಾಪತಿ-ಮಹಾಬಲ, ಹಾಕಿದ್ದ ಬಂಡವಾಳ ಹಿಂದಕ್ಕೆ ಬಂದುದಲ್ಲದೆ, ಮೂರು ಮಂದಿ ಪಾಲುಗಾರರಿಗೂ ಐವತ್ತು ಸಾವಿರಕ್ಕೂ ಮಿಕ್ಕು ಲಾಭ ಬಂದಿತ್ತು.

ಮಹಾಬಲನ ಮನೆಯಲ್ಲಿ ಲಕ್ಷ್ಮಿ ಲಾಸ್ಯವಾಡತೊಡಗಿದಳು. ಪುಟ್ಟತಾಯಿಯ ಮೈಮೇಲೆ ವಜ್ರ, ಕೆಂಪು, ಚಿನ್ನ ಮೆರೆದಾಡತೊಡಗಿದವು. ಲಕ್ಷ್ಮಮ್ಮನವರೂ ಕೂಡ ಮಧುರೆ ಮಡಿಸೀರೆ ತ್ಯಜಿಸಿ ಕೆಂಪಿನ ಧರ್ಮಾವರ ಸೀರೆ ಉಟ್ಟು, ಮೇಲೆ ಕಾಶ್ಮೀರ ಶಾಲು ಹೊದೆಯಲಾರಂಭಿಸಿದರು.

ನಾಗೇಂದ್ರ ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದ; ವೆಂಕಟರಾಮು ಮನೆಯ ಸಮೀಪದಲ್ಲಿದ್ದ 'ನರ್ಸರಿ ಸ್ಕೂಲಿ'ಗೆ ಹೋಗುತ್ತಿದ್ದ. ಪುಟ್ಟತಾಯಿ ರಾಮು, ಲಕ್ಷ್ಮಣ, ಭರತರ ಜತೆಗೆ ಒಬ್ಬ ಶತ್ರುಘ್ನನನ್ನೂ ಕೊಟ್ಟಳು. ಆದರೆ ಪುಟ್ಟತಾಯಿ ಚೊಚ್ಚಿಲು ಬಾಣಂತನ ಕಳೆದಷ್ಟು ಸುಲಭವಾಗಿ ಮರುಚಲು ಬಾಣಂತನ ಕಳೆಯಲಾಗಲಿಲ್ಲ. ಅವಳ ಶಕ್ತಿ ಕಳೆಗುಂದಿಹೋಯಿತು.

ಪುಟ್ಟತಾಯಿ ಬಾಣಂತನ ಮುಗಿದಮೇಲೆ ಡಾಕ್ಟರು ನಿತ್ಯ ಅವಳು ವಾಯುಸೇವನೆಗೆ ಹೊರಗೆ ಹೋಗಿ ಬರುವುದು ಒಳ್ಳೆಯದೆಂದು ಸೂಚಿಸಿದರು.

ಮಹಾಬಲ ಹಿಂದೆಮುಂದೆ ನೋಡದೆ ಒಂಭತ್ತು ಸಾವಿರ ರೂಪಾಯಿ ತೆತ್ತು ಒಂದು ಆಸ್ಟಿನ್‌ಕಾರು ಕೊಂಡ.

ಸಂಜೆಯಾಗುತ್ತಲೇ ಪುಟ್ಟತಾಯಿ, ಕಾರಿನಲ್ಲಿ ಮಕ್ಕಳನ್ನೆಲ್ಲಾ ತುಂಬಿಕೊಂಡು ಲಾಲ್‌ಬಾಗ್ ಕಡೆಗೋ ಕಬ್ಬನ್‌ಪಾರ್ಕಿನ ಕಡೆಗೋ ಹೋಗಿ ಬರುತ್ತಿದ್ದಳು. ಆಟಗೂಳಿಯಾದ ನಾಗೇಂದ್ರ ಮಾತ್ರ ಚಿಕ್ಕಮ್ಮನ ಕೈಗೆ ಸಿಕ್ಕುತ್ತಿರಲಿಲ್ಲ.

ಭಾನುವಾರ ಪುರಸತ್ತುಮಾಡಿಕೊಂಡು ಮಹಾಬಲನೇ ಎಲ್ಲರನ್ನೂ ಜತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದ.

ಅವನ ತುಂಬಿದ ಸಂಸಾರ, ಅದರ ವೈಭವ, ದಂಪತಿಗಳ ಅನ್ಯೋನ್ಯ ಕಂಡು ಅಂಬುಜಮ್ಮನವರು ಹಿಗ್ಗುತ್ತಿದ್ದರು. ಆದರೆ ಪುಟ್ಟತಾಯಿಯ ದೇಹಸ್ಥಿತಿ ಎಲ್ಲರಿಗೂ ವ್ಯಥೆಯನ್ನುಂಟುಮಾಡುತ್ತಿತ್ತು.

ತನ್ನ ಪರಿಸ್ಥಿತಿ ನೆನೆದು ಪುಟ್ಟತಾಯಿ ಕರುಳು ಹಿಂಡಿಹೋಗುತ್ತಿತ್ತು. ದೇವರು ಎಲ್ಲವನ್ನೂ ಕೊಟ್ಟಿದ್ದ. ಸಂಪತ್ತು, ಮಕ್ಕಳು, ಆದರ್ಶಪತಿ ಆದರೆ ಆರೋಗ್ಯದಿಂದ ವಂಚಿತಳನ್ನಾಗಿ ಮಾಡಿದ್ದ. ಗಂಡ ದುಡಿದು, ದಣಿದು ಮನೆಗೆ ಬಂದಾಗ ಅವನನ್ನುಪಚರಿಸಿ, ಊಟಕ್ಕೆ ಬಡಿಸಿ, ನಾಲ್ಕು ಪ್ರಿಯವಾದ ಮಾತುಕೂಡ ಆಡಲಾಗದಂತೆ ಹಾಸಿಗೆ ಹಿಡಿದು ಮಲಗಿದೆನಲ್ಲಾ ಎಂದು ಕೊರಗುತ್ತಿದ್ದಳು.

ಪುಟ್ಟತಾಯಿಗೆ ಸಣ್ಣಗೆ ಜ್ವರ ಬರುತ್ತಿತ್ತು. ಜ್ವರ ಇದ್ದಕ್ಕಿದ್ದಂತೆ ನಿಂತೂ ಹೋಗುತ್ತಿತ್ತು. ಅವಳ ದೇಹ ಜ್ವರದ ಚಲ್ಲಾಟಕ್ಕೆ ಸಿಕ್ಕಿ ಕ್ಷಯಿಸುತ್ತ ಬಂತು.

ಹೆಂಡತಿಯ ಆರೋಗ್ಯ ಹೀಗಾಯಿತಲ್ಲಾ ಎಂದು ಮಹಾಬಲನ ಮನಸ್ಸಿಗೆ ನೋವಾಯಿತು. ಆದರೆ ಅದನ್ನು ತೋರಗೊಡುತ್ತಿರಲಿಲ್ಲ. ತನಗೆ ನೂರು ತೊಂದರೆಯಾದರೂ ನುಂಗಿಕೊಂಡು ಪುಟ್ಟತಾಯಿ ಜತೆ ನಗುನಗುತ್ತಲೇ ಮಾತನಾಡುತ್ತಿದ್ದ. ಗಂಡನ ಸಂಯಮ ಪುಟ್ಟತಾಯಿಗೆ ಮತ್ತಷ್ಟು ದುಃಖವಾಗುತ್ತಿತ್ತು.

ಒಂದು ದಿನ ಉಕ್ಕಿ ಬರುತ್ತಿದ್ದ ದುಃಖ ತಾಳಲಾರದೆ

"ಡಾಕ್ಟರು ಏನು ಹೇಳುತ್ತಾರೆ." ಎಂದು ಕೇಳಿದಳು.

"ಬಾಣಂತಿಯರಿಗೆ ಹೀಗಾಗುವುದುಂಟಂತೆ? ಕೆಲವರಿಗೆ ಬೇಗ ಗುಣವಾಗುತ್ತದೆ. ಕೆಲವರಿಗೆ ಸ್ವಲ್ಪ ಕಾಲ ಹಿಡಿಯುತ್ತದೆ-ಎಂದು ಹೇಳುತ್ತಾರೆ."

"ಅವರ ಮೋಸದ ಮಾತನ್ನು ನೀವು ನಂಬುತ್ತೀರಾ ?"

"ಮೋಸವೆಲ್ಲಿಂದ ಬಂತು ?"

"ನನ್ನ ಹುಟ್ಟು ನೋಡಿ – ಗುಣವಾಗುವ ಚಿನ್ಹೆಯಿದೆಯೇ ? ಗುಣವಾಗಬೇಕಾಗಿದ್ದರೆ ಒಂದು ವರ್ಷ ಬೇಕಾಗಿತ್ತೇ ?"

"ನೀನು ಇಲ್ಲಸಲ್ಲದ ಚಿಂತೆ ಮನಸ್ಸಿಗೆ ಹಚ್ಚಿಕೊಳ್ಳಬೇಡ ಪುಟ್ಟು. ದೇವರಮೇಲೆ ಭಾರಹಾಕಿ ನಿಶ್ಚಿಂತಳಾಗಿರು."

"ನಮ್ಮಜ್ಜಿಯೊಬ್ಬರು ಹೀಗೆಯೇ ತೀರಿಕೊಂಡರಂತೆ. ನನಗೆ ಕ್ಷಯವೆಂದು ನಿಮ್ಮ ಡಾಕ್ಟರು ಬಾಯಿಬಿಟ್ಟೇಕೆ ಹೇಳಬಾರದು ?"

"ಬಂದ ಜ್ವರಕ್ಕೆಲ್ಲಾ ಕ್ಷಯವೆಂದು ಹೆಸರಿಡುತ್ತ ಹೋದರೆ ಯಾರೂ ಉಳಿಯುವಹಾಗಿಲ್ಲ."

"ಕ್ಷಯದ ಜ್ವರವೇ ಆಗಿದ್ದರೆ"

"ಆ ಭಾವನೆ ನಿನ್ನ ಮನಸ್ಸಿನಿಂದ ಕಿತ್ತುಹಾಕುವೆಯೋ ಇಲ್ಲವೋ ?"

"ಸ್ವಲ್ಪ ಹತ್ತಿರ ಬಂದು ಕುಳಿತುಕೊಳ್ಳಿ"

ಮಹಾಬಲ ಅವಳ ಪಕ್ಕಕ್ಕೆ ಜರುಗಿದ. ಅವನ ಕೈಹಿಡಿದು

"ನಾನು ತುಂಬ ಪುಣ್ಯವಂತೆ"

"ಸಂದೇಹವೇನು ? ನನ್ನ ಮನೆ ಬೆಳಗಿದೆ."

"ನನ್ನ ಅಕ್ಕ ಮಹಾಪತಿವ್ರತೆ. ಅವರ ಆಶೀರ್ವಾದ ನನ್ನ ಕಾಪಾಡಿಕೊಂಡು ಬಂದಿತು."

"ಆ ಅಕ್ಕನಿಗೆ ತಕ್ಕ ತಂಗಿ ನೀನು. ನಿಮ್ಮಿಬ್ಬರ ಕೈಹಿಡಿದ ನಾನು ಭಾಗ್ಯಶಾಲಿ."

"ಇಷ್ಟು ಸದ್ಗುಣವನ್ನು ನೀವೇಕೆ ತುಂಬಿಟ್ಟುಕೊಂಡಿರುವಿರಿ ? "

"ಹುಚ್ಚಿ—ಸೂರ್ಯ ಸೊಡರನ್ನು ನೋಡಿ, ನಿನ್ನ ಪ್ರಕಾಶ ಎಷ್ಟು ಚೆನ್ನಾಗಿದೆ ಎಂದ ಹೇಳಿದ ಹಾಗಾಯಿತು."

"ನನಗೊಂದು ಉಪಕಾರಮಾಡಿ – ಸೆರೆಗೊಡ್ಡಿ ಬೇಡಿಕೊಳ್ಳುತ್ತೇನೆ."

"ಏನು ಹೇಳು"

"ನನ್ನ ಅಕ್ಕ ನನ್ನ ಆಶೀರ್ವದಿಸಿದಂತೆ ನಾನು, ನನ್ನ ತಂಗಿಯನ್ನು ಆಶೀರ್ವದಿಸಲಾರೆನೇ ?"

"ನಿನ್ನ ತಂಗಿ! ಅದು ಈ ಜೀವಮಾನದಲ್ಲಿ ಸಾಧ್ಯವಿಲ್ಲ. ನನಗೆ ಯಾವ ಸುಖಕ್ಕೆ ಕೊರತೆಯಾಗಿದೆಯೆಂದು ಬೇರೆ ಮದುವೆಯ ಯೋಚನೆ ಮಾಡಲಿ."

"ನೀವು ನನ್ನ ಯಾವ ಮಾತನ್ನೂ ನಿರಾಕರಿಸಿದವರಲ್ಲ. ಈ ಮಾತನ್ನೇಕೆ ನಿರಾಕರಿಸುವಿರಿ."

"ಪುಟ್ಟೂ - ದಯವಿಟ್ಟು ಈ ವಿಷಯ ಪುನಃ ಪ್ರಸ್ತಾಪಿಸಬೇಡ. ನಾನು ಮನುಷ್ಯನಾಗಿಯೇ ಸಾಯಬೇಕೆಂದಿದ್ದೇನೆ. ಪಶುವೃತ್ತಿ ನನಗೆ ಪ್ರಿಯವಾದುದಲ್ಲ."

ಮುತ್ತಿನ ಹನಿಗಳಂತೆ ಪುಟ್ಟುತಾಯಿಯ ಕಣ್ಣುಗಳಿಂದ ಕಂಬನಿಗಳು ದುರಿದವು. ಮಹಾಬಲ ಅವುಗಳನ್ನು ಒರಸಿದ.

"ಈ ಕಂಬನಿಯನ್ನು ನೀವು ಅಳಿಸಲಾರಿರಿ"

ಎಂದು ಪುಟ್ಟೂ ಹೇಳಿದಳು. ಮಹಾಬಲ ಅವಳಿಗುತ್ತರಕೊಡುವ ಸಾಹಸಮಾಡಲಿಲ್ಲ.

೨೮

ಆದರೆ ಪುಟ್ಟುತಾಯಿಯ ಸೂಚನೆ ಮಹಾಬಲನ ಮನಸ್ಸಿನ ಯಾವುದೋ ಮೂಲೆಯಲ್ಲಿ ಸ್ಥಳಮಾಡಿಕೊಂಡು ನಿಂತಿತು. ಪುನರ್ವಿವಾಹದ ಯೋಚನೆ ಆಗಾಗ್ಗೆ ತಟ್ಟನೆ ಅವನ ಮನಸ್ಸಿನ ಮೇಲೆ ಹೊಳೆಯುತ್ತಿತ್ತು.

" 'ಛಿ' ನನಗೆ ದಾಂಪತ್ಯಸುಖದ ಭಾಗ್ಯವಿಲ್ಲ—ಪುನಃ ಮದುವೆ ಮಾಡಿಕೊಂಡರೂ ಇದೇ ಹಣೇಬರಹ ತಪ್ಪುವುದಿಲ್ಲ."

ಎಂದು ಸಮಾಧಾನಮಾಡಲೆತ್ನಿಸುತ್ತಿದ್ದ. ಪ್ರಕೃತಿಯೊಂದಿಗೆ ಮಹಾಬಲ ಪ್ರಬಲ ಹೋರಾಟಕ್ಕೆ ನಿಂತಿದ್ದ. ಅವನ ಧೀಃಶಕ್ತಿಗೆ ಬೆದರಿ ಪ್ರಕೃತಿ ತಾತ್ಕಾಲಿಕ ಪರಾಜಯವನ್ನೊಪ್ಪಿಕೊಂಡಿತ್ತು. ಆದರೆ ಸೋಲನ್ನೊಪ್ಪಿಕೊಂಡು ಎದೆಗುಂದಿ ಪ್ರಕೃತಿ ಅಲ್ಲಿಯೇ ಮರೆಯಾಗಲಿಲ್ಲ. ಸಮಯ ಸಾಧಿಸಿ ಪ್ರತೀಕಾರ ಮಾಡಬೇಕೆಂದು ಅದು ಹಂಚಿಕೆ ಹೂಡಿತ್ತು.

ಮಹಾಬಲನ ಆರ್ಥಿಕಸ್ಥಿತಿ ಸುಧಾರಿಸುತ್ತ ಬಂದಂತೆ, ಮನೆಯಲ್ಲಿ ಪುಟ್ಟತಾಯಿಯ ಶಾರೀರಕಸ್ಥಿತಿ ಕ್ಷೀಣಿಸುತ್ತಬಂತು.

ಡಾಕ್ಟರು ಮಲೇರಿಯಾ, ಇನ್‌ಫ್ಲುಯಂಜಾ ಕಾಯಿಲೆಗಳಿಗೆ ಚಿಕಿತ್ಸೆ ಮಾಡಿ ಮಾಡಿ ಬಗೆಹರಿಯದೆ, ಕೊನೆಗೆ ಪುಟ್ಟತಾಯಿಯ ಕಾಹಿಲೆ 'ಕ್ಷಯ' ವೆಂದು ತಮ್ಮ ನಿರ್ಧಾರಸೂಚಿಸಿದರು.

ಮಹಾಬಲ ಭೂಮಿಗಿಳಿದು ಹೋದ.

ಅವನಿಗಿಂತ ಹೆಚ್ಚಾಗಿ ಪುಟ್ಟತಾಯಿ ಭೂಮಿಗಿಳಿದುಹೋದಳು.

"ಮಕ್ಕಳೆಲ್ಲಾ ಸಣ್ಣವರು - ಅವರ ಕೆನ್ನೆಯ ಹಾಲುಕೂಡ ಬತ್ತಿಲ್ಲ. ಮುಂದೆ ಅವರ ಗತಿಯೇನು ?"

ಎಂದು ಒಂದೇಸಮನಾಗಿ ಚಿಂತಿಸಿದಳು.

ಮದುವೆಯ ಪ್ರಸ್ತಾಪವನ್ನೂ ನಾಲ್ಕಾರು ಬಾರಿ ಮಾಡಿ ನೋಡಿದಳು. ಮಹಾಬಲ ಯಾವ ಸನ್ನಾಹಕ್ಕೂ ಮಣಿಯಲಿಲ್ಲ.

ಮಿಲ್ ವ್ಯವಹಾರ, ಅಂಗಡಿಯ ವ್ಯವಹಾರ ಮಹಾಬಲನಿಗೆ ಸಾಕಷ್ಟು ಪ್ರವಾಸವನ್ನೂ ಗಂಟುಹಾಕಿತ್ತು. ಅವನು ಮುಂಬಯಿ, ಅಹಮದಾಬಾದ್, ಕಾರ್ಣಪುರ, ಕೋಯಿಮತ್ತೂರು, ಸೇಲಂ, ಮದ್ರಾಸ್ ನಗರಗಳಿಗೆ ಮೇಲಿಂದ ಮೇಲೆ ಹೋಗಿ ಬರಬೇಕಾಗುತ್ತಿತ್ತು.

ಮನೆ ಬಿಟ್ಟು ಹೋಗುವುದಕ್ಕೆ ಮಹಾಬಲನಿಗೆ ಮನಸ್ಸಿಲ್ಲ. ಹೋಗದಿದ್ದರೆ ನಿರ್ವಾಹವಿಲ್ಲ. ಪ್ರತಿಸಲ ಊರಿಂದ ಹೊರಡುವಾಗಲೂ ಅವನ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಹಿಂತಿರುಗಿ ಬರುವ ವೇಳೆಗೆ ಯಾವ ಸುದ್ದಿ ಕೇಳಬೇಕಾಗುತ್ತದೋ ಎಂದು ಅಧೀರನಾಗುತ್ತಿದ್ದ.

ಪುಟ್ಟತಾಯಿಯ ಕಾಯಿಲೆ ವಿಚಿತ್ರರೀತಿಯದಾಗಿತ್ತು. ಕೆಲವು ದಿನ ಅವಳು ಹಾಸಿಗೆ ಬಿಟ್ಟೇಳಲಾಗುತ್ತಿರಲಿಲ್ಲ. ಔಷಧ, ಪಥ್ಯ ಅವಳಿಗೆ ಸ್ವಲ್ಪ ಚೇತನಕೊಟ್ಟರೆ ಎದ್ದು ಕೂಡುತ್ತಿದ್ದಳು. ಮುಖದಮೇಲೆ ಕಳೆಯೂ ಕಾಣಿಸಿಕೊಳ್ಳುತ್ತಿತ್ತು. ಆ ಸ್ಥಿತಿಯಲ್ಲಿ ಅವಳನ್ನು ನೋಡಿದವರು ಯಾರೂ, ಅವಳಿಗೆ ಭಯಂಕರ ಕಾಯಿಲೆಯಿದೆ - ಎನ್ನುವುದನ್ನು ನಂಬುವುದಕ್ಕಾಗುತ್ತಿರಲಿಲ್ಲ.

ಕಾಲಚಕ್ರ ತಡೆಯಿಲ್ಲದೆ ಉರುಳಿತು.

ಸುಂದರಮೂರ್ತಿಗೆ ಐದು ತುಂಬಿ ಆರನೆಯ ವರ್ಷ ನಡೆಯುತ್ತಿತ್ತು. ಅವನನ್ನು ಸ್ಕೂಲಿಗೆ ಸೇರಿಸಲಾಗಿತ್ತು.

ಸ್ವಾಮಿ ಪ್ರೈಮರಿ ಎರಡನೆಯ ಕ್ಲಾಸ್ ಮುಗಿಸಿದ್ದ.

ವೆಂಕಟರಾಮು ಮಿಡ್ಲ್‌ಸ್ಕೂಲಿನಲ್ಲಿದ್ದ.

ನಾಗೇಂದ್ರ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಅಭ್ಯಾಸಮಾಡುತ್ತಿದ್ದ.

ಪುಟ್ಟತಾಯಿಗೆ ಎಲ್ಲರ ಚಿಂತೆಗಿಂತಲೂ ಹೆಚ್ಚಾಗಿ ನಾಗೇಂದ್ರನ ಚಿಂತೆ ಹತ್ತಿತ್ತು. ಅವನ ಮಾತಿನ ವಕ್ರತೆ ಕಂಡು ಒಮ್ಮೊಮ್ಮೆ ನಡುಗುತ್ತಿದ್ದಳು. ನಾಗೇಂದ್ರ ಸರಿಯಾದ ದಾರಿಯಲ್ಲಿ ನಡೆಯದಿದ್ದರೆ ತಾನೆಂಥ ಅಪಖ್ಯಾತಿ ಹೊರಬೇಕೆಂಬುದನ್ನು ನೆನೆದು ದುಃಖಕ್ಕೀಡಾಗುತ್ತಿದ್ದಳು.

ನಾಗೇಂದ್ರನ ನಡತೆ ಚಿಂತೆಗೆ ಸಾಕಷ್ಟು ಕಾರಣಗಳನ್ನು ಒದಗಿಸಿತ್ತು.

ಮನೆಯಲ್ಲಿ ಮೆರೆದಾಡುತ್ತಿದ್ದ ಶ್ರೀಮಂತಿಕೆ ಗಳಿಸಲು ತಂದೆ ಎಷ್ಟು ಶ್ರಮಪಟ್ಟರು ಎಂಬ ಪರಿಜ್ಞಾನ ನಾಗೇಂದ್ರನಿಗಿರಲಿಲ್ಲ. ಅವನ ಕೋರಿಕೆ ನ್ಯಾಯದ್ದಾಗಿರಲಿ, ಅನ್ಯಾಯದ್ದಾಗಿರಲಿ ಅದನ್ನು ಪೂರೈಸುವುದು ತನ್ನ ಕರ್ತವ್ಯವೆಂದು ಪುಟ್ಟತಾಯಿ ಭಾವಿಸಿದ್ದುದು ಅವನಿಗೆ ಚೆನ್ನಾಗಿ ಗೊತ್ತಾಗಿತ್ತು. ನಾಗೇಂದ್ರನ ಉಡುಗೆತೊಡುಗೆ, ಸಿಸ್ತು, ಸಿಂಗಾರ, ಮೇಲುಖರ್ಚಿಗೇ ತಿಂಗಳಿಗೆ ನೂರಾರು ರೂಪಾಯಿ ಖರ್ಚಾಗುತ್ತಿತ್ತು. ಪುಟ್ಟತಾಯಿ ಯಾವುದನ್ನೂ ಗಂಡನ ಕಿವಿಯ ಮೇಲೆ ಹಾಕುತ್ತಿರಲಿಲ್ಲ. ಮಹಾಬಲನ ಕಣ್ಣಿಗೆ ಅಕಸ್ಮಾತ್ತಾಗಿ ನಾಗೇಂದ್ರನ ದುಂದುವೆಚ್ಚ ಬಿದ್ದು ಅವನು ಗದರಿಕೊಂಡರೆ ಪುಟ್ಟತಾಯಿ 'ವಯಸ್ಸಿನ ಹುಡುಗ. ಅವನಿಗೂ ತುಂಬ ಸ್ನೇಹಿತರು. ನಾಲ್ಕು ಒಳ್ಳೆಯ ಬಟ್ಟೆ ಹಾಕಿಕೊಳ್ಳಬೇಕು. ಸ್ನೇಹಿತರನ್ನು ಜತೆಯಲ್ಲಿ ಕರೆದುಕೊಂಡು ಸಿನಿಮಾಕ್ಕೆ ಹೋಗಬೇಕೆಂದು ಬಯಸುವುದು ಸ್ವಾಭಾವಿಕ. ಅಷ್ಟಕ್ಕೆ ನಾವೇಕೆ ಅಡ್ಡಿಯಾಗಬೇಕು' ಎಂದು ಹೇಳುತ್ತಿದ್ದಳು.

"ಅಡ್ಡಿಯ ಮಾತಲ್ಲ ಪುಟ್ಟೂ. ಹುಡುಗ ಬರೀ ಖರ್ಚುಮಾಡುವುದನ್ನೇ ಕಲಿತರೆ ನಾಳೆಯೇನು ಗತಿ ? ಇವತ್ತು ಅವನ ಜತೆ ಮೆರೆದಾಡುವ ಸ್ನೇಹಿತರು ನಾಳೆ ಅವನ ಕಷ್ಟಕ್ಕೆ ಸಿಕ್ಕಿದರೆ ಬಂದು ಸಹಾಯಮಾಡುತ್ತಾರೇನು ?"

"ದೇವರು ನಮಗೆ ಯಾವದಕ್ಕೆ ಕಡಿಮೆಮಾಡಿದ್ದಾನೆ. ತಂದೆಯ ಸಂಪಾದನೆ ಮಗನದು ತಾನೇ ?"

"ಹೌದು. ಆದರೆ ಇನ್ನೂ ಮೂವರಿದ್ದಾರೆ. ಎಲ್ಲಾ ನಾಗೇಂದ್ರನ ತೊಳ್ಳೆಗೇ ಸುರಿದು ಉಳಿದ ಮಕ್ಕಳ ಕೈಗೆ ಭಿಕ್ಷಾಪಾತ್ರೆ ಕೊಡಬೇಕೇನು! ನಿನ್ನ ಮಗನಿಗೆ ಬುದ್ಧಿಹೇಳಬೇಕು. ಮೊನ್ನೆ ಹೇಳಲಿಲ್ಲ ಕೇಳಲಿಲ್ಲ - ಕಾರು ತೆಗೆದುಕೊಂಡುಹೋದ. ಬೆಳಿಗ್ಗೆ ಹೋದವನು ಸಾಯಂಕಾಲ ಬಂದ."

"ತಿಪ್ಪಗೊಂಡನ ಹಳ್ಳಿಗೆ ಹೋಗಿದ್ದನಂತೆ"

"ಅವನಿಗೆ ದಿನಕ್ಕೊಂದೊಂದು ಇದ್ದೇ ಇರುತ್ತದೆ."

"ಈ ವಯಸ್ಸಿನಲ್ಲಿ ನಾಲ್ಕುದಿನ ಸ್ವತಂತ್ರವಾಗಿ ಸುಖವಾಗಿರಲಿ. ನಾಳೆ ಸಂಸಾರ ತಾಪತ್ರಯ ಇದ್ದೇ ಇದೆ."

"ಅವನು ಸುಖವಾಗಿರುವುದಕ್ಕೆ ನಾನು ಬೇಡವೆನ್ನುವುದಿಲ್ಲ. ಮಕ್ಕಳು ಮನೆಯ ಜವಾಬ್ದಾರಿ ತಿಳಿದುಕೊಳ್ಳಬೇಕು. ನೀನಿಷ್ಟು ಕಾಯಿಲೆ ಮಲಗಿದ್ದೀಯಲ್ಲಾ—ಯಾವಾಗಲಾದರೂ ಬಂದು ವಿಚಾರಿಸಿಕೊಳ್ಳುತ್ತಾನೆಯೇ? ಯಾರಿಗೆ ಏನಾದರೂ ಸರಿಯೇ, ತಾನು ಸುಖವಾಗಿದ್ದರೆ ಸಾಕು ಎನ್ನುವ ಮನೋಭಾವ ನಾನು ಸಹಿಸಲಾರೆ."

"ನಾಗೇಂದ್ರ ನನ್ನ ಬೇಕಾದಷ್ಟು ವಿಚಾರಿಸಿಕೊಳ್ಳುತಾನೇಂದ್ರೆ. ಒಂದೊಂದು ಸಂಜೆ ಆಟಕ್ಕೂ ಹೋಗದೆ ನನ್ನ ಹತ್ತಿರ ಕುಳಿತುಕೊಂಡು ನನ್ನ ಬೇಸರ ಪರಿಹರಿಸುತ್ತಾನೆ."

ಮಹಾಬಲ ಹೆಂಡತಿಯ ಮುಖವನ್ನು ದಿಟ್ಟಿಸಿ ನೋಡಿದ. ಅವನನ್ನು ಅದೇ ರೀತಿ ನೋಡಲಾರದೆ ಪುಟ್ಟತಾಯಿ ತಲೆ ತಗ್ಗಿಸಿದಳು.

ಗಂಡನಿಗೆ ಸುಳ್ಳು ಹೇಳಿದೆನಲ್ಲಾ ಎಂದು ಪುಟ್ಟತಾಯಿ ಮಮ್ಮಲ ಮರುಗಿದಳು. ಆದರೆ ಸುಳ್ಳು ಹೇಳದೆ ಸತ್ಯ ನುಡಿದಿದ್ದರೆ ತಂದೆ ಮಕ್ಕಳಿಗೆ ಹಣಾಹಣಿ ಜಗಳವಾಗುತ್ತಿತ್ತು.

"ಹೀಗೆ ಇನ್ನೆಷ್ಟು ದಿನ ಸುಳ್ಳು ಹೇಳುವುದು" ಎಂದು ಯೋಚಿಸಿದಳು.

ವಿಚಾರಮಾಡಿ ಕೊನೆಗೆ, ಒಂದು ದಿನ ನಾಗೇಂದ್ರನ ಜತೆ ಮಾತನಾಡುವುದೆಂದು ಪುಟ್ಟತಾಯಿ ನಿಶ್ಚಯಿಸಿದಳು.

ಒಂದು ಸಂಜೆ ಕಳೆದಿತ್ತು. ರಾತ್ರಿ ಹಣಿಕಿಹಾಕುತ್ತಿತ್ತು. ನಾಗೇಂದ್ರ ಮನೆಗೆ ಬಂದವನು ತನ್ನ ಟೆನಿಸ್ ಷೂಸ್ ಬಿಚ್ಚುತ್ತ ಕುಳಿತಿದ್ದ. ಪುಟ್ಟ

ತಾಯಿ ಸುಂದರೂ ಕೈಯಲ್ಲಿ ಹೇಳಿಕಳಿಸಿದಳು. ನಾಗೇಂದ್ರ ತನ್ನ ವೈಟ್ ಫ್ಲಾನಲ್ ಷರಾಯಿ ಮಡಿಸಿಟ್ಟು, ಬ್ರೌನ್ ಬ್ಲೇಜರ್ ಕೋಟನ್ನು ಗೂಟಕ್ಕೆ ತಗುಲಿಸಿ ಚಿಕ್ಕಮ್ಮನ ಕೋಣೆಗೆ ಹೋದ.

ಅಂದು ಪುಟ್ಟತಾಯಿಯ ಕಾಯಿಲೆ ಉಲ್ಬಣಾವಸ್ಥೆಗೆ ಬಂದಿತ್ತು. ಕೆಮ್ಮು ಹೆಚ್ಚಾಗಿತ್ತು.

"ಏನು ಚಿಕ್ಕಮ್ಮ—ಬರಹೇಳಿದೆಯಂತೆ ?"

"ಬಾ ನಾಗೇಂದ್ರ—ಹತ್ತಿರ ಕುಳಿತುಕೋ ಬಾ."

ನಾಗೇಂದ್ರ ಚಿಕ್ಕಮ್ಮನ ಹಾಸಿಗೆಯ ಅಂಚಿನಲ್ಲಿ ಕುಳಿತುಕೊಂಡ.

"ಟೆನಿಸ್ಸಿಗೆ ಹೋಗಿದ್ದೆಯಾ ?"

"ಹೂ"

"ಈ ವರ್ಷ ಪರೀಕ್ಷೆಗೆ ಕಟ್ಟಿದ್ದೀಯಲ್ಲವೇ ?"

"ಕಟ್ಟಿದ್ದೇನೆ."

"ಚೆನ್ನಾಗಿ ಓದಿಕೊಳ್ಳುತ್ತಿರುವೆಯಾ ?"

"ಓದುತ್ತಾ ಇದ್ದೇನೆ."

"ನೀನು ಪುಸ್ತಕ ಹಿಡಿದಿದ್ದು ನಾನು ಒಂದು ದಿನವೂ ನೋಡಲೇ ಇಲ್ಲವಲ್ಲಾ ನಾಗೇಂದ್ರ"

"ನಿನ್ನ ಮುಂದೆ ಕುಳಿತುಕೊಂಡು ಓದುವುದಕ್ಕಾಗುತ್ತದೆಯೇ ಚಿಕ್ಕಮ್ಮ"

"ನನ್ನ ಮುಂದೆ ಕುಳಿತುಕೊಂಡು ಓದಬೇಕೆಂದು ನಾನು ಹೇಳಲಿಲ್ಲ. ಮನೆಯಲ್ಲಿಯೂ ನೀನು ಇರುವುದಿಲ್ಲ ಅದಕ್ಕೋಸ್ಕರ ಕೇಳಿದೆ."

"ಸ್ನೇಹಿತರ ಜತೆ ಓದಿಕೊಳ್ಳುತ್ತಿದ್ದೇನೆ."

"ಎಲ್ಲಿಯಾದರೂ ಓದು, ಪಾಸಾದರೆ ಸರಿ."

"ಪಾಸು ಫೇಲು ಯಾರ ಅಧೀನ ಚಿಕ್ಕಮ್ಮ, ಎಲ್ಲಾ ದೈವೇಚ್ಛೆ."

"ನಿಜ—ಆದರೆ ಮನುಷ್ಯ ತನ್ನ ಪ್ರಯತ್ನವನ್ನೂ ಮಾಡಬೇಕು ನಾಗೇಂದ್ರ. ಹಿಂದೆ ಹೋದ ಆಯಸ್ಸು ಮುಂದೆ ಬರುವುದಿಲ್ಲ. ಚೆನ್ನಾಗಿ ಓದಿ ಪಾಸು ಮಾಡುವ ಈ ದಿವಸಗಳನ್ನು ಕಳೆದುಕೊಂಡರೆ ಮುಂದೆ ತೊಂದರೆಯಾಗುತ್ತದೆ. ಹೋದ ದಿನ ಮರಳಿ ಬರುವುದಿಲ್ಲ."

ಚಿಕ್ಕಮ್ಮ ಹೇಳಿದ ಬುದ್ಧಿಯಮಾತು ನಾಗೇಂದ್ರನಿಗೆ ಪಥ್ಯವಾಗಲಿಲ್ಲ. ಅವನ ತಲೆಯಲ್ಲಿ ಬಗೆಬಗೆಯ ಯೋಚನೆಗಳು ಸುಳಿದಾಡಿದವು.

"ಅಣ್ಣ ಏನಾದರೂ ಹೇಳಿದನೇ."

"ಏನು ಹೇಳಬೇಕಾಗಿತ್ತು ?"

"ನಾನು ಸರಿಯಾಗಿ ಓದುತ್ತಿಲ್ಲವೆಂದು ಆಕ್ಷೇಪಣೆ ಮಾಡಿದನೇ ?"

"ಅವರು ಯಾವ ಮಾತಿಗೂ ಬರುವುದಿಲ್ಲ. ನಿನ್ನ ಒಳ್ಳೆಯದಕ್ಕೆ ನಾನೇ ಬುದ್ಧಿಯಮಾತು ಹೇಳಲು ಮುಂದುವರಿದೆ."

"ಫೇಲ್ ಆದರೆ ನನಗೆ ತಾನೇ ಕಷ್ಟವಾಗುವುದು."

"ನಿನ್ನ ಕಷ್ಟ ಸುಖದಲ್ಲಿ ನಾನೂ ಭಾಗಿಯೆಂದು ತಿಳಿದುಕೊಂಡಿದ್ದೇನೆ ನಾಗೇಂದ್ರ."

"ಇನ್ನು ಮೇಲೆ ಹಾಗೆ ತಿಳಿದುಕೊಳ್ಳಬೇಕಾದುದಿಲ್ಲ"

ಎಂದವನೇ ನಾಗೇಂದ್ರ ಅಲ್ಲಿ ನಿಲ್ಲದೆ ಹೊರಟುಹೋದ.

ನಾಗೇಂದ್ರನ ವರ್ತನೆ ಪುಟ್ಟತಾಯಿಯ ಹೃದಯಕ್ಕೆ ಶಲ್ಯ ನೆಟ್ಟಂತಾಯಿತು.

'ಅವನ ಹಿತದ ಸಲುವಾಗಿ ಒಂದು ಮಾತು ಹೇಳುವ ಅಧಿಕಾರ ನನಗಿಲ್ಲವೇ ? ನಾನು ಅವನ ಹೆತ್ತತಾಯಿಯಲ್ಲ—ಆದರೆ ಸಾಕಿದ ತಾಯಿಯಲ್ಲವೇ ? ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳ ಮೇಲಣ ಪ್ರೇಮಕ್ಕಿಂತಲೂ ಹೆಚ್ಚಿನ ಪ್ರೇಮದಿಂದ ಅವನನ್ನು ಸಾಕಲಿಲ್ಲವೇ ? ಕೊನೆಗೂ ನಾಗೇಂದ್ರನಿಂದ ಇಂಥ ಮಾತು ಕೇಳಬೇಕಾಯಿತೇ ?'

ಎಂದು ಒಂದೇ ಸಮನಾಗಿ ಕೊರಗಿದಳು.

ಪುಟ್ಟತಾಯಿಯ ಮನಸ್ಸಿಗಾದ ತಾಪ ದೇಹದಮೇಲೆ ವಿಪರೀತ ಪರಿಣಾಮವನ್ನುಂಟುಮಾಡದಿರಲಿಲ್ಲ. ಆವಳು ಕೆಮ್ಮಿದರೆ ಗೆಡ್ಡೆ ಗೆಡ್ಡೆ ರಕ್ತ ಬೀಳುತ್ತಿತ್ತು. ನಿತ್ಯ ಸಣ್ಣನೆಯ ಜ್ವರ ಬರುತ್ತಿತ್ತು. ಪುಟ್ಟತಾಯಿ ಸವೆಯುತ್ತ ಒಣಗಿದ ಕಾಷ್ಠದಂತಾಗುತ್ತ ಬಂದಳು

ಪುಟ್ಟತಾಯಿಯ ಮಾನಸಿಕ ಚಿಂತೆಯ ಕಾರಣವನ್ನರಿಯಲು ಮಹಾಬಲ ವಿಶ್ವಪ್ರಯತ್ನ ಮಾಡಿದ. ಆವಳು ಬಾಯಿ ಬಿಡಲಿಲ್ಲ.

ಚಿಕ್ಕಮ್ಮನ ಪ್ರಶ್ನೆಗೆ ಯದ್ವಾತದ್ವಾ ಉತ್ತರ ಕೊಡುವಾಗ ನಾಗೇಂದ್ರ

ನಿಗಿದ್ದ ಧೈರ್ಯ ಅನಂತರ ಉಳಿಯಲಿಲ್ಲ. ಅವನು ತಂದೆಯ ಎದುರಿಗೆ ನಿಲ್ಲುತ್ತಿರಲಿಲ್ಲ. ತನಗೇನು ಬೇಕಾದರೂ ಚಿಕ್ಕಮ್ಮನನ್ನೇ ಕೇಳಬೇಕಾಗಿತ್ತು

'ಇನ್ನು ಮೇಲೆ ಅವಳು ಮುರುತುಕೊಂಡು ಕೇಳಿದ್ದಕ್ಕೆ ಇಲ್ಲವೆಂದು ಹೇಳಲಾರಂಭಿಸಿದರೆ ಏನು ಗತಿ'

ಎಂಬ ಚಿಂತೆ ನಾಗೇಂದ್ರನ ಮನಸ್ಸನ್ನು ಕೊರೆಯತೊಡಗಿತು. ಅದೇ ಸಮಯಕ್ಕೆ ಸರಿಯಾಗಿ ಜಿಂಗಾಡೆ ಅಂಗಡಿಯಲ್ಲಿ ಸೊಗಸಾದ ಇಂಗ್ಲಿಷ್ ಟ್ವೀಡ್ ಬಂದಿತ್ತು. ಟ್ವೀಡ್ ಸೂಟಿಗೆ ಇನ್ನೂರು ರೂಪಾಯಿ ನಾಗೇಂದ್ರನಿಗೆ ಅತ್ಯವಶ್ಯಕವಾಗಿ ಬೇಕಾಗಿತ್ತು. ಏನು ಮಾಡುವುದೆಂದು ಚಿಂತಿಸಲಾರಂಭಿಸಿದ.

ರಾತ್ರಿಯೆಲ್ಲಾ ಯೋಚನೆಮಾಡಿ ಒಂದು ನಿರ್ಧಾರಕ್ಕೆ ಬಂದ. ಚಿಕ್ಕಮ್ಮನಿಗೆ ತಲೆ ತಗ್ಗಿಸಬೇಕಲ್ಲಾ ಎಂಬ ಸಂಕಟ—ಆದರೆ ಕಾರ್ಯವಾಗಬೇಕು. ಈಗ ಬಿಗುಮಾನ ಮಾಡಿದರೆ ಅಂಗಡಿಯಲ್ಲಿರುವ ಒಂದೇ ಥಾನ್ ಟ್ವೀಡ್ ಮಾಯವಾಗುತ್ತದೆ. ಅನಂತರ ಪಶ್ಚಾತ್ತಾಪ ಪಡಬೇಕಾಗುತ್ತದೆ.

ಮನಸ್ಸನ್ನು ಗಟ್ಟಿಮಾಡಿಕೊಂಡು ನಾಗೇಂದ್ರ ಮಾರನೆಯ ಬೆಳಿಗ್ಗೆ ಚಿಕ್ಕಮ್ಮನ ಕೋಣೆಗೆ ಹೋದ.

ಪುಟ್ಟತಾಯಿ ಎಂದಿನಂತೆ

"ಬಾ, ನಾಗೇಂದ್ರಾ, ಕುಳಿತುಕೊ ಬಾ"

ಎಂದು ಕರೆದಳು.

ಅವಳ ಹಾಸಿಗೆಯ ಅಂಚಿನಲ್ಲಿ ಕುಳಿತು ನಾಗೇಂದ್ರ ಹೆಬ್ಬೆರಳಿನಿಂದ ನೆಲ ಕೊರೆಯತೊಡಗಿದ.

"ಏನಪ್ಪಾ-ಏನು ಸಮಾಚಾರ"

ಎಂದು ಪುಟ್ಟತಾಯಿ ಕೇಳಿದಳು.

ಅವಳ ನುಡಿಯಲ್ಲಿ ಕುಹಕ, ಕೊಂಕು ಇರಲಿಲ್ಲ. ನಾಗೇಂದ್ರನ ಭರ್ತ್ಸನೆಯ ನುಡಿ ತನ್ನ ಮನಸ್ಸಿಗೆ ನೋವುಂಟುಮಾಡಿತೆಂಬುದನ್ನೂ ಅವಳು ತೋರಗೊಡಲಿಲ್ಲ.

ಮಾತನಾಡಲು ನಾಗೇಂದ್ರನಿಗೆ ಬಾಯೇ ಇಲ್ಲದಂತಾಯಿತು.

ಅವಳ ನನ್ನಿಯ ನುಡಿ ಅವನ ಅಂತಃಕರಣವನ್ನು ಕಲಕಿತು. ಕತ್ತೆತ್ತಿ ಚಿಕ್ಕಮ್ಮನನ್ನು ನೋಡಿದ, ಅವಳ ದೇಹದಲ್ಲಿ ರಕ್ತ, ಮಾಂಸವಿರಲಿಲ್ಲ. ದೇಹ ಜೀರ್ಣವಾಗಿ ಸಾವಿಗೆ ಸ್ವಾಗತ ಬಯಸಿತ್ತು. ಅವಳ ಮುಖದಲ್ಲಿ ಉತ್ಕಟ ನೋವು, ಚಿಂತೆ ಮೂಡಿತ್ತು.

"ನಿನ್ನೆ ರಾತ್ರಿ ಬಹಳ ಕೆಮ್ಮುತ್ತಿದ್ದೆ, ನಿದ್ದೆ ಬರಲಿಲ್ಲವೇ?"

"ಕಣ್ಣು ಮುಚ್ಚಲಿಲ್ಲ ನಾಗೇಂದ್ರ. ಯಾವ ಜನ್ಮದಲ್ಲಿ ಏನು ಕರ್ಮ ಮಾಡಿದ್ದೆನೋ ಈಗ ಅನುಭವಿಸುತ್ತಿದ್ದೇನೆ. ನನ್ನ ಜತೆಗೆ ನೀವೂ ಅನುಭವಿಸುವಂತೆ ಮಾಡುತ್ತಿದ್ದೇನೆ. ಮೃತ್ಯುವಿಗೂ ನನ್ನ ಮೇಲೆ ದಯೆ ಬಾರದು."

"ಹಾಗೆನ್ನಬೇಡ ಚಿಕ್ಕಮ್ಮ, ನೀನು ಹೋದಮೇಲೆ ಈ ಮನೆಯಲ್ಲಿ ಯಾರಿರಲು ಸಾಧ್ಯ. ನಿನ್ನೆ ನಾನು ಹುಚ್ಚು ಹುಚ್ಚಾಗಿ ಆಡಿದೆ. ನನ್ನ ತಪ್ಪು ಕ್ಷಮಿಸು."

ಎಂದು ಚಿಕ್ಕಮ್ಮನ ಪಾದಗಳನ್ನು ಮುಟ್ಟಿ ನಮಸ್ಕರಿಸಿದ. ಪುಟ್ಟ ತಾಯಿ ಮಗನನ್ನು ಹತ್ತಿರ ಕರೆದು ಅವನ ತಲೆ ನೇವರಿಸಿ

"ನನಗೇನೂ ಕೋಪವಿಲ್ಲ ನಾಗೇಂದ್ರ; ಮಕ್ಕಳು ನೀವು ತಿಳಿಯದೆ, ಒಂದು ಮಾತು ಆಡಿದರೆ ತಂದೆತಾಯಿಗಳು ನಾವೇ ಕೋಪಮಾಡಿಕೊಂಡರೆ ಹೇಗಾಗುತ್ತದೆ. ಪರೀಕ್ಷೆಗೆ ಚೆನ್ನಾಗಿ ಓದಪ್ಪ. ನನಗೆ ನೀನೂ ವೆಂಕಟ ರಾಮೂ ಬೇರೆಯಲ್ಲ. ನಾನೂ ನಿನ್ನ ತಾಯಿ ನಾಗೇಂದ್ರ-ಹೊರಗಿನವ ಳಲ್ಲ. ನಿನಗೆ ಒಳ್ಳೆಯದಾಗಬೇಕು-ನೀನು ಚೆನ್ನಾಗಿರಬೇಕೆಂದು ನಾನು ಸದಾ ಹಾರೈಸುತ್ತೇನೆ."

"ನಾನು ಅವಿವೇಕಿ ಚಿಕ್ಕಮ್ಮ, ಕ್ಷಮಿಸು."

"ಎಂದೋ ಕ್ಷಮಿಸಿದ್ದೇನೆ. ನೀನು ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಕೊರಗಬೇಡ."

ಎಂದು ಮಗನನ್ನು ಸಂತೈಸಿದಳು.

ಟ್ರೇಡ್‌ಸೂಟಿಗೆ ಹಣ ಕೇಳಲು ಇದೇ ಒಳ್ಳೆಯ ಸಮಯವೆಂದು ನಾಗೇಂದ್ರ ಭಾವಿಸಿದ. ಬಾಯಿಬಿಟ್ಟು ಹೇಳಲು ಧೈರ್ಯ ಬಾರದು. ಅವನ ಮನಸ್ಸಿನ ಹೊಯ್ದಾಟ ನೋಡಿ ಪುಟ್ಟತಾಯಿ,

"ಏನೋ ಕೇಳಬೇಕೆಂದಿರುವ ಹಾಗೆ ಕಾಣುತ್ತದೆ. ಹೇಳು, ಸಂಕೋಚವೇತಕ್ಕೆ?"

"ಜಿಂಗಾಡೆ ಅಂಗಡಿಯಲ್ಲಿ ಇಂಗ್ಲಿಷ್ ಟ್ವೀಡ್ ಬಂದಿದೆ. ಈಗ ತೆಗೆದುಕೊಳ್ಳದಿದ್ದರೆ ಮುಂದೆ ಇಂಥ ಬಟ್ಟೆ ಸಿಕ್ಕುವುದಿಲ್ಲವೆಂದು ಹೇಳುತ್ತಾನೆ."

"ಎಷ್ಟು ಬೇಕಾಗಿತ್ತು?"

"ಮೂರು ಗಜ ಸಾಕು."

"ಎಷ್ಟಾಗುತ್ತದೆ?"

"ಬಟ್ಟೆಗೆ ನೂರಿಪ್ಪತ್ತು ರೂಪಾಯಿ; ಕೂಲಿ ಎಪ್ಪತ್ತೈದು ರೂಪಾಯಿ."

ಪುಟ್ಟತಾಯಿ ಮರುಮಾತಾಡಲಿಲ್ಲ ಹಾಸಿಗೆಯ ಕೆಳಗಿದ್ದ ಬೀಗದಕೈ ಗೊಂಚಲನ್ನು ತೆಗೆದುಕೊಂಡು ನಾಗೇಂದ್ರನ ಕೈಗಿತ್ತು,

"ಮಂಚದ ಕೆಳಗೆ ನನ್ನ ಟ್ರಂಕಿದೆ, ಅದನ್ನು ತೆಗೆ"

ಎಂದಳು. ನಾಗೇಂದ್ರ ಟ್ರಂಕ್ ತೆಗೆಯಲು

"ಎಡಗಡೆ ಮೂಲೆಯಲ್ಲಿ, ಧರ್ಮಾವರದ ಸೀರೆ ಕೆಳಗೆ ಪರ್ಸಿದೆ ತೆಗೆದುಕೋ"

ಎಂದಳು. ನಾಗೇಂದ್ರ ಪರ್ಸ್ ಕೈಗೆತ್ತಿಕೊಂಡ.

"ನಿನಗೆಷ್ಟು ಬೇಕೋ ತೆಗೆದುಕೋ"

ಎಂದಳು. ನಾಗೇಂದ್ರ ಇನ್ನೂರು ರೂಪಾಯಿ ತೆಗೆದುಕೊಂಡು, ಟ್ರಂಕ್‌ಬಾಗಿಲು ಹಾಕಿ, ಬೀಗದಕೈ ಗೊಂಚಲನ್ನು ಚಿಕ್ಕಮ್ಮನಿಗೆ ಹಿಂದಿರುಗಿಸಿದ.

"ಸಂತೋಷವಾಗಿ ಸೂಟ್ ಹೊಲೆಹಾಕಿ ಪಾಠ ಓದುವುದಕ್ಕೆ ಕುಳಿತುಕೋ"

ಎಂದು ಹೇಳಿದಳು.

"ಹಾಗೇ ಆಗಲಿ ಚಿಕ್ಕಮ್ಮ"

ಎಂದು ಹೇಳಿ ನಾಗೇಂದ್ರ ಅಲ್ಲಿಂದ ಹಾರಿದ. ಕುಣಿದು ಕುಪ್ಪಳಿಸುವಷ್ಟು ಅವನ ಮನಸ್ಸಿಗೆ ಸಂತೋಷವಾಗಿತ್ತು. ಪುಟ್ಟತಾಯಿ ನಿಟ್ಟುಸಿರು ಬಿಟ್ಟು, ಬೀಗದಕೈ ಗೊಂಚಲನ್ನು ದಿಂಬಿನ ಕೆಳಗಿಟ್ಟುಕೊಂಡು ಮಲಗಿದಳು.

## ೨೯

ಮನೆಯಲ್ಲಿ ಎಲ್ಲರಿಗೂ ಸಂಭ್ರಮ, ಎಲ್ಲರಿಗೂ ಉತ್ಸಾಹ. ಸ್ವಾಮಿ ಮಿಡ್ಲ್‌ಸ್ಕೂಲಿಗೆ ಬಂದಿದ್ದ; ವೆಂಕಟರಾಮು ಹೈಸ್ಕೂಲಿನ ಮೊದಲನೆಯ ವರ್ಷದ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದ; ನಾಗೇಂದ್ರ ತನ್ನ ಬಿ. ಎಸ್ ಸಿ. ಪರೀಕ್ಷೆಯ ಫಲಿತಾಂಶ ಎದುರು ನೋಡುತ್ತಿದ್ದ.

ಮಹಾಬಲರಾಯನಿಗಂತೂ ಮಗನನ್ನು ಎಲ್ಲಿ ಕೂಡಿಸಿದರೂ ಸಾಲದು, ಎಷ್ಟು ಹೊಗಳಿದರೂ ತೃಪ್ತಿಯಿಲ್ಲ. ಉಮಾಪತಿಯ ಜತೆ ಮಾತನಾಡುತ್ತಾ

"ನಾನು ಒಂದು ಡಿಗ್ರಿ ತೆಗೆದುಕೊಳ್ಳಲಿ ಎಂದು ನಮ್ಮ ತಂದೆ ಭಗೀರಥ ಪ್ರಯತ್ನಮಾಡಿದರು. ಈ ಮನೆಯಲ್ಲಿ ಡಿಗ್ರಿ ಪಡೆದವರು ಯಾರೂ ಇರಲಿಲ್ಲ, ನಾನಾದರೂ ಆ ಕೀರ್ತಿಗಳಿಸಲಿ ಎಂದು ತಂದೆಯವರ ಹಂಬಲವಾಗಿತ್ತು. ಅವರ ಹಂಬಲ ಬರೀ ಹಂಬಲವಾಗಿಯೇ ಉಳಿಯಿತು. ಡಿಗ್ರೀಗೂ ನನಗೂ ಋಣಾನುಬಂಧವಿರಲಿಲ್ಲ. ಆದರೆ ಅಜ್ಜನ ಇಚ್ಛೆಯನ್ನು ಮೊಮ್ಮಗ ಪೂರೈಸಿದಂತಾಯಿತು. ನನ್ನ ಮಗ ಪಾಸುಮಾಡುತ್ತಾನೆ. ಕಾಲೇಜಿಗೆ ಬರುತ್ತಾನೆ ಎಂದು ನಾನು ಕನಸಿನಲ್ಲಿಯೂ ಕಂಡಿರಲಿಲ್ಲ. ಹಗಲಿರುಳೂ ಓದುವವರಿಗೆ ಪಾಸಾಗುವುದು ಕಷ್ಟ. ಇನ್ನು ಬರೀ ಷೋಕಿಯಲ್ಲಿ ಕಾಲಕಳೆಯುತ್ತಿದ್ದ ನಾಗೇಂದ್ರ ಪಾಸಾಗುತ್ತಾನೆಂದು ಹೇಗೆ ನಂಬಲಿ. ಅವನ ಅಜ್ಜನ ಆಶೀರ್ವಾದ ಬಲವಾಗಿದೆ. ಹುಡುಗ ಜಯಭೇರಿ ಹೊಡೆಯುತ್ತಿದ್ದಾನೆ."

"ಈ ವರ್ಷದ ರಿಸಲ್ಟ್ ಬಂತೇನು?"

"ಇವತ್ತು ಬರುತ್ತದೆ. ನಾಗೇಂದ್ರ ಪಾಸಾಗುವುದು ಖಂಡಿತ."

"ಪಾಸಾಯಿತು ಎಂದು ಇಟ್ಟುಕೊಳ್ಳೋಣ ಮಹಾಬಲ-ಮುಂದೆ? ಅವನ ವಿದ್ಯಾಭ್ಯಾಸ ಮುಂದುವರಿಸುತ್ತೀಯೋ ಅಥವಾ ವ್ಯಾಪಾರಕ್ಕೆ ಹಾಕುತ್ತೀಯೋ?"

"ಅದನ್ನಿನ್ನೂ ನಿರ್ಧರಿಸಿಲ್ಲ. ಅವನ ಮನಸ್ಸಿನಲ್ಲೇನಿದೆ ತಿಳಿದುಕೊಳ್ಳಬೇಕಲ್ಲ."

"ಈ ವರ್ಷ ಅವನ ಮದುವೆಮಾಡಿಬಿಡಯ್ಯಾ."

"ಮಾಡಲೇ ಬೇಕಪ್ಪ. ಅವಳ ದೇಹಸ್ಥಿತಿ ವಿಷಯ ನಿನಗೆ ಗೊತ್ತೇ

ಇದೆ. 'ನಾನು ಬದುಕಿರುವಾಗಲೇ ನಾಗೇಂದ್ರನ ಮದುವೆ ಮಾಡಿಬಿಡಿ' ಎಂದು ಒತ್ತಾಯ ಮಾಡುತ್ತಿದ್ದಾಳೆ."

"ಅವರು ಹೇಳುತ್ತಿರುವುದು ನ್ಯಾಯವಾಗಿದೆ. ಮದುವೆ ಮಾಡಿ ಅವನನ್ನು ಒಂದು ದಾರೀಗೆ ಹಚ್ಚಿದರೆ ನಿನ್ನ ಕರ್ತವ್ಯ ನೆರವೇರಿಸಿದಂತಾಗುತ್ತದೆ."

"ಹಿತೈಷಿ ನೀನು ಇದ್ದೀಯಲ್ಲಪ್ಪಾ. ಏನು ಬೇಕಾದರೂ ಮಾಡು"

ಪರೀಕ್ಷೆಯ ಫಲಿತಾಂಶ ಎಲ್ಲರ ಮನಸ್ಸಿಗೂ ಹಿಗ್ಗನ್ನು ತಂದಿತ್ತು. ನಾಗೇಂದ್ರ ಎರಡನೆಯ ತರಗತಿಯಲ್ಲಿ ತೇರ್ಗಡೆಯಾಗಿದ್ದ.

ಮನೆಯಲ್ಲಿ ನಾಲ್ಕಾರು ದಿವಸಗಳು ಸಂತೋಷ ಸಮಾರಂಭಗಳಾದವು. ನಾಗೇಂದ್ರನ ಗೆಳೆಯರು, ವೆಂಕಟರಾಮು ಗೆಳೆಯರು, ಮಹಾಬಲರಾಯನ ಗೆಳೆಯರು ಎಲ್ಲರಿಗೂ ಸೊಗಸಾದ ಔತಣಗಳಾದವು.

ಒಂದು ದಿನ ಮಹಾಬಲರಾಯ ಮಗನನ್ನು ಹತ್ತಿರ ಕರೆದು ಅವನ ಭವಿಷ್ಯತ್ತಿನ ವಿಷಯ ಪ್ರಸ್ತಾಪಮಾಡಿದ.

"ಮುಂದೆ ಓದಬೇಕೆಂದು ಇಚ್ಛೆ ಇದೆಯೇ ನಾಗೇಂದ್ರ."

"ಲಾ ಓದುವುದಕ್ಕೆ ಮದರಾಸಿಗೆ ಹೋಗು ಎಂದು ನನ್ನ ಸ್ನೇಹಿತರು ಸೂಚಿಸಿದ್ದಾರೆ."

"ಅವರ ಸೂಚನೆ ಹಾಗಿರಲಿ. ನೀನೇನು ಯೋಚನೆಮಾಡಿದ್ದೀ ?"

"ನಾನಿನ್ನೂ ಏನೂ ಯೋಚನೆಮಾಡಿಲ್ಲ."

"ಮದರಾಸಿಗೆ ಹೋಗುವುದು ತೀರ್ಮಾನವಾದಲ್ಲಿ ಈಗಿನಿಂದಲೇ ಸೀಟಿಗೆ ಪ್ರಯತ್ನಮಾಡಬೇಕು."

" ಲಾ ಕಾಲೇಜಿನಲ್ಲಿ ಸೀಟಿಗೆ ಅಭಾವವಿಲ್ಲ. ಸಿಕ್ಕೇಸಿಕ್ಕುತ್ತದೆ."

"ನನ್ನ ಮಾತು ಕೇಳುವಿಯಾ ?"

"ಕೇಳುವುದಿಲ್ಲ ಎಂದು ಯಾವಾಗಲಾದರೂ ಹೇಳಿರುವೆನೇ ?"

"ನನ್ನ ವ್ಯಾಪಾರ ಬೆಳೆದಿರುವುದನ್ನು ನೀನೇ ನೋಡುತ್ತಿದ್ದೀ. ಅನುಮಾನಿಸುತ್ತಲೇ ಮಿಲ್ಸ್‌ಗೆ ಕೈಹಾಕಿದೆ. ಕೈಹಾಕಿದ ಹೊತ್ತು ಒಳ್ಳೆಯದು. ಎಲ್ಲದಕ್ಕಿಂತಲೂ ಅದು ಲಾಭದಾಯಕವಾಯಿತು. ಅಂಗಡಿ ವ್ಯಾಪಾರವೂ ಅಳತೆ ಮೀರಿ ಬೆಳೆದುಬಿಟ್ಟಿದೆ. ಎರಡನ್ನೂ ನಾನು ನೋಡಿಕೊಂಡು ಹೋಗು

ವುದು ಸಾಧ್ಯವಿಲ್ಲ. ನೀನು ಮಿಲ್ಸ್ ಕೆಲಸ ವಹಿಸಿಕೊಂಡರೆ ನನಗೂ ಸ್ವಲ್ಪ ಹಗುರವಾಗುತ್ತದೆ. ಅಂಗಡಿ ವ್ಯಾಪಾರ ಮತ್ತಷ್ಟು ವೃದ್ಧಿಮಾಡಲು ಅವಕಾಶವಾಗುತ್ತದೆ. ಲಾ ಪರೀಕ್ಷೆ ಮಾಡಿ ಒಂದು ಬೋರ್ಡ್ ಹಾಕಿಕೊಂಡು ತಿಂಗಳಿಗೆ ನೂರೋ ನೂರೈವತ್ತೋ ಸಂಪಾದನೆ ಮಾಡುವುದಕ್ಕೆ ಧಾವಂತ ಪಡುವುದಕ್ಕಿಂತ ಸೊಗಸಾಗಿ ನಡೆಯುತ್ತಿರುವ ಮಿಲ್ಸ್ ಕೆಲಸ ಕೈಗೊಳ್ಳುವುದು ನಿನಗೇ ಒಳ್ಳೆಯದೆಂದು ನನ್ನ ಭಾವನೆ. ಯೋಚನೆಮಾಡಿ ನೋಡು, ನಿನಗೆ ಹೇಗೆ ಸೂಕ್ತವೋ ಹಾಗೆ ಮಾಡು."

"ನೀನು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ."

"ಬೊಂಬಾಯಿಯಲ್ಲಿ ಒಂದು ಬ್ರಾಂಚು ತೆಗೆಯಬೇಕೆಂದು ಮಾತು ನಡೆದಿದೆ. ಅಂಜನಪ್ಪ, ಉಮಾಪತಿ ಇಬ್ಬರೂ ಈ ಊರು ಬಿಡುವುದು ಸಾಧ್ಯವಿಲ್ಲ. ಈ ಕೆಲಸವೂ ನನ್ನ ತಲೆಯಮೇಲೇ ಬೀಳುತ್ತದೆ. ನನಗೆ ಎಷ್ಟು ತೊಂದರೆ ಇದೆ ನೋಡು. ಊರು ಬಿಟ್ಟುಹೋದರೆ ಇಲ್ಲಿನ ಕೆಲಸ ಕೆಟ್ಟುಹೋಗುತ್ತದೆ—ಹೋಗದಿದ್ದರೆ ಬೊಂಬಾಯಿನಲ್ಲಿರುವ ಅವಕಾಶ ಕಳೆದುಕೊಳ್ಳಬೇಕಾಗುತ್ತದೆ."

"ಅದಕ್ಕೇನು ಮಾಡಬೇಕೆಂದಿರುವೆ ?"

"ಸದ್ಯ ನೀನು ಇಲ್ಲಿನ ಕೆಲಸಕಾರ್ಯ ನೋಡಿಕೊಂಡರೆ ನಾನು ಬೊಂಬಾಯಿಗೆ ಹೋಗಿ ಅಲ್ಲಿ ಬ್ರ್ಯಾಂಚ್ ವ್ಯವಸ್ಥೆಮಾಡಿ ಬರುತ್ತೇನೆ. ಮುಂದಕ್ಕೆ ನೀನೇ ಅಲ್ಲಿಗೆ ಹೋಗಿ ಬ್ರ್ಯಾಂಚ್ ಮ್ಯಾನೇಜರಾಗಿ ನಿಲ್ಲಬಹುದು. ಆ ವೇಳೆಗೆ ಕೆಲಸದ ಪರಿಚಯವೂ ನಿನಗಾಗಿರುತ್ತದೆ."

"ಆಗಬಹುದು. ಹಾಗೇ ಮಾಡುತ್ತೇನೆ."

ಎಂದು ನಾಗೇಂದ್ರ ತನ್ನ ಸಮ್ಮತಿ ಸೂಚಿಸಿದ.

ಮಗ ತನ್ನ ಸಲಹೆ ಒಪ್ಪಿದುದಕ್ಕೆ ಮಹಾಬಲರಾಯನಿಗೆ ಪರಮ ಸಂತೋಷವಾಯಿತು. ಗಂಡನ ವಿವರಣೆ ಕೇಳಿ ಪುಟ್ಟತಾಯಿಯ ಮನಸ್ಸಿಗೂ ಆನಂದವಾಯಿತು.

"ಈಚೆಗೆ ನಾಗೇಂದ್ರನಿಗೆ ಬಹಳ ವಿವೇಕ ಬಂದುಬಿಟ್ಟಿದೆಯಂದ್ರೆ."

"ಎಲ್ಲಾ ಸರಿ-ಆದರೆ ಅವನ ದುಂದುವೆಚ್ಚವೊಂದೇ ನನಗೆ ಸರಿಬೀಳದಿರುವುದು."

"ಹುಡುಗತನ-ನಾಲ್ಕು ದಿವಸ ಖರ್ಚುಮಾಡಬೇಕೆನ್ನುವ ಚಪಲ. ಸ್ವಲ್ಪ ಅನುಭವ ಬಂದು, ಪ್ರಪಂಚದ ರೀತಿನೀತಿ ಗೊತ್ತಾದರೆ ತಾನೇ ಸರಿ ಹೋಗುತ್ತದೆ. ಅವನ ಮದುವೆ ವಿಷಯ ಏಕೆ ನೀವು ಕಿವಿಯ ಮೇಲೇ ಹಾಕಿಕೊಳ್ಳುವುದಿಲ್ಲ"

"ನಾನು ಬೇಡವೆಂದನೇ ಪುಟ್ಟೂ. ಅಣಿಯಾಗಿರುವ ಕಡೆ ಹೆಣ್ಣು ನೋಡಿ ನೀನೇ ಗೊತ್ತುಮಾಡು. ಮದುವೆ ಖರ್ಚಿಗೆ ಇಷ್ಟು ದುಡ್ಡು ಬೇಕು ಎಂದು ನೀನು ಹೇಳಿದರೆ ಕೊಡುವುದು ನನ್ನ ಭಾರ-ಉಳಿದ ವಿಷಯ ನನ ಗೇನು ಗೊತ್ತಾಗುತ್ತದೆ."

"ಹೊಳೇನರಸೀಪುರದಲ್ಲಿ ನಮ್ಮ ಜನದ್ದೊಂದು ಹೆಣ್ಣು ಇದೆಯಂತೆ. ಆರನೆಯ ಫಾರ್ಮು ಪಾಸಾಗಿದೆಯಂತೆ. ಹೆಣ್ಣು ತುಂಬಾ ಚೆನ್ನಾಗಿದೆ ಎಂದು ಕೇಳಿದೆ."

"ಯಾರು ಹೇಳಿದರು."

"ಅಂಬುಜಮ್ಮನವರು."

"ಮದುವೆ ಏರ್ಪಾಟು ಆಗಲೇ ನಡೆಸಿದ್ದೀ ?"

"ನಡಸದೇ ಸುಮ್ಮನೆ ಕುಳಿತಿರುವುದಕ್ಕಾಗುತ್ತದೆಯೇ ? ನೋಡಿದ ವರು ಏನನ್ನುತ್ತಾರೆ ?"

"ನಿನ್ನ ಯಾರು ಏನೂ ಅನ್ನಲು ಸಾಧ್ಯವಿಲ್ಲ ಪುಟ್ಟೂ. ಬಲತಾಯಿ ಯಾದರೂ ತಾಯಿಗಿಂತಲೂ ಹೆಚ್ಚಾಗಿದ್ದಿ."

"ನೀವು ಆಡುವ ಮಾತನ್ನೇ ನಾಳೆ ನಾಗೇಂದ್ರ, ವೆಂಕಟರಾಮು ಆಡಿಬಿಟ್ಟರೆ ಸಾಕು."

"ಅವರು ಬೇರೆ ಆಡಿದರೆ ದೇವರು ಮೆಚ್ಚುತ್ತಾನೆಯೇ ?"

## ೩೦

ನಾಗೇಂದ್ರನ ಮದುವೆ ದೂರ ನಿಲ್ಲಲಿಲ್ಲ. ಪುಟ್ಟತಾಯಮ್ಮ ಒಂದು ಗಳಿಗೆಯೂ ಸಮ್ಮನೆ ಕೂಡಲಿಲ್ಲ. ಅಂಬುಜಮ್ಮನವರನ್ನು ಮುಂದಿಟ್ಟು ಕೊಂಡು ಮದುವೆಯ ವ್ಯವಸ್ಥೆ ಮಾಡಿದಳು.

ಹೊಳೆಯನರಸೀಪುರದ ಪ್ಲೀಡರ್ ಸುಬ್ಬರಾಯರಿಗೆ ಸುಲೋಚನ

ಒಬ್ಬಳೇ ಮಗಳು. ಸುಬ್ಬರಾಯರೂ, ಅಂಬುಜಮ್ಮನವರ ಯಜಮಾನರು ಗುಂಡೂರಾಯರೂ ಬಾಲ್ಯಸ್ನೇಹಿತರಾಗಿದ್ದರು. ಇಬ್ಬರು ಒಟ್ಟಿಗೆ ಪ್ರಾಕ್ಟೀಸ್ ಆರಂಭಿಸಿದ್ದರು. ಸುಬ್ಬರಾಯರಿಗೆ ತಮ್ಮ ಮನೆ, ಗುಂಡಪ್ಪನವರ ಮನೆ ಬೇರೆ ಬೇರೆಯಾಗಿರಲಿಲ್ಲ.

ಸುಬ್ಬರಾಯರಿಗೆ ಬಹಳ ದಿವಸ ಮಕ್ಕಳಾಗಲಿಲ್ಲ. ಅವರ ಪತ್ನಿ ಸೀತಮ್ಮ ನೂರಾರು ದೇವರುಗಳಿಗೆ ಹರಕೆ ಹೊತ್ತು ಬಯಸಿ ಬಯಸಿ ಇಳಿವಯಸ್ಸಿನಲ್ಲಿ ಸುಲೋಚನೆಗೆ ಜನನವಿತ್ತರು. ಮಗಳನ್ನು ತಾಯಿ ತಂದೆ ಬಹು ಮುಚ್ಚಟೆಯಾಗಿ ಬೆಳೆಸಿದರು. ಅವಳ ಬಾಯಲ್ಲಿ ಬಂದುದು ವೇದ ವಾಕ್ಯವಾಗಿತ್ತು.

ಸುಲೋಚನೆಗೆ ಹದಿನೇಳು ತುಂಬಿ ಹದಿನೆಂಟನೆಯ ವಯಸ್ಸು ನಡೆ ಯುತ್ತಿತ್ತು. ಸುಬ್ಬರಾಯರ ಮನೆಯ ಸಂಬಂಧ ಮಾಡಬೇಕೆಂದು ಹಲವರು ಹಂಬಲಿಸಿದರು. ತಾವಾಗಿಯೇ ಮುಂದುವರಿದು ಹೆಣ್ಣು ಕೇಳಲು ಬಂದರು. ಸುಬ್ಬರಾಯರು ಅವರ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. 'ಒಬ್ಬಳೇ ಮಗಳನ್ನು ಮನೆಯಿಂದ ಕಳುಹಿಸುವುದು ಹೇಗೆ' ಎಂಬ ಚಿಂತೆ ಗಂಡಹೆಂಡಿರಿಬ್ಬರನ್ನೂ ಒಂದೇ ಸಮನಾಗಿ ಕಾಡಲಾರಂಭಿಸಿತು.

ಒಂದೊಂದು ಸಲ ಸುಬ್ಬರಾಯರಿಗೆ 'ಮದುವೆ ಮಾಡಿ ಮಗಳನ್ನು ಕಂಡವರ ಮನೆಗೆ ಕಳುಹಿಸಿಕೊಡಬೇಕೇ? ನನಗೆ ಹೇಗೂ ಗಂಡು ಮಕ್ಕ ಳಿಲ್ಲ. ಅವಳೇ ಗಂಡುಮಗ-ಹೆಣ್ಣು ಮಗಳೂ ಎರಡೂ ಆಗಿದ್ದಾಳೆ. ದೇವರು ಸಾಕಷ್ಟು ಅನುಕೂಲವನ್ನೂ ಒದಗಿಸಿದ್ದಾನೆ. ಸುಖವಾಗಿ ಊಟ ಮಾಡಿಕೊಂಡು ಇರಲಿ' ಎನ್ನುವ ಯೋಚನೆ ಹೊಳೆಯುತ್ತಿತ್ತು. ತಮ್ಮ ಯೋಚನೆಯನ್ನು ಹೆಂಡತಿಯ ಮುಂದೆ ವ್ಯಕ್ತಪಡಿಸಿದಾಗ ಸೀತಮ್ಮ ಕೆಣಕಿದ ಫಣಿಯಂತಾದರು.

"ನಿಮಗೆ ದೇವರು ಎಂಥಾ ವಿವೇಕ ಕೊಟ್ಟಾಂದ್ರೆ. ವಯಸ್ಸಿಗೆ ಬಂದ ಮಗಳಿಗೆ ಗಂಡು ಹುಡುಕಲು ಕೈಯಲ್ಲಾಗದೆ ಮನೆಯಲ್ಲಿಯೇ ಇಟ್ಟು ಕೊಂಡಿರುವ ಯೋಚನೆ ಮಾಡುತ್ತಿರುವಿರಲ್ಲಾ. ಎಲ್ಲಿಯಾದರೂ ಉಂಟೇ? ನಾಳೆ ಅವಳು ನಾಲ್ಕು ಜನದಂತೆ ಬಾಳಬೇಕೋ ಬೇಡವೋ. ನಮ್ಮ ವ್ಯಾಮೋಹಕ್ಕೆ ಮಗಳನ್ನು ಬಲಿಕೊಡುವುದು ಯಾವ ನ್ಯಾಯ. ಎದ್ದು,

ಚಟುವಟಿಕೆಯಾಗಿ ನಾಲ್ಕು ಕಡೆ ಹೋಗಿ ವರ ಗೊತ್ತುಮಾಡಿಕೊಂಡು ಬನ್ನಿ”

ಎಂದರು. ಸುಬ್ಬರಾಯರಿಗೆ ಕವಿದಿದ್ದ ಮಂಕು ಪರಿಹಾರವಾಯಿತು.

ಗುಂಡಪ್ಪನವರು ತೀರಿಕೊಂಡರೂ ಅವರ ಮನೆಯ ಸಂಬಂಧ ಸುಬ್ಬರಾಯರಿಗೆ ತಪ್ಪಿರಲಿಲ್ಲ. ಕಾರ್ಯಾರ್ಥಿಗಳಾಗಿ ಬೆಂಗಳೂರಿಗೆ ಬಂದರೆ ಗುಂಡಪ್ಪನವರಮನೆಯಲ್ಲಿಯೇ ಇಳಿದುಕೊಳ್ಳುತ್ತಿದ್ದರು. ಸುಬ್ಬುಕೃಷ್ಣ ತಂದೆಯ ಸ್ನೇಹಿತರನ್ನು ಗೌರವದಿಂದ ಕಂಡು ಅವರ ಆದರಾತಿಥ್ಯಮಾಡುತ್ತಿದ್ದ.

ಸುಲೋಚನ ಮದುವೆಗೆ ಬಂದಿರುವ ವಿಷಯ ತಿಳಿದೊಡನೆಯೇ ಅಂಬುಜಮ್ಮನವರು, ನಾಗೇಂದ್ರನಿಗೆ ಅವಳನ್ನು ಕೊಡಿಸಬೇಕೆಂದು ಮನಸ್ಸಿನಲ್ಲಿಯೇ ನಿರ್ಧರಮಾಡಿಕೊಂಡರು. ಸುಬ್ಬರಾಯರೊಂದಿಗೆ ಈ ವಿಷಯವನ್ನು ಒಂದು ದಿನ ಪ್ರಸ್ತಾಪಿಸಿದಾಗ

“ಹೇಗೆ ಸಾಧ್ಯ ತಾಯಿೞ ನಾವೆಲ್ಲಿ, ಅವರೆಲ್ಲಿ. ನಾನೊಬ್ಬ ಹಳ್ಳಿ ಲಾಯರು, ಅವರು ಲಕ್ಷಾಧೀಶ್ವರರು, ಬಡವರ ಮನೆಯ ಹೆಣ್ಣನ್ನು ತಂದುಕೊಳ್ಳಲು ಅವರು ಒಪ್ಪುತ್ತಾರೆಯೇ ?”

“ನಿಮಗೆ ಅಭ್ಯಂತರವಿಲ್ಲದಿದ್ದರೆ ಈ ಮದುವೆ ಕುದುರಿಸಬಲ್ಲೆ ಎನ್ನುವ ಧೈರ್ಯ ನನಗಿದೆ ಸುಬ್ಬರಾಯರೇ.”

ಸುಬ್ಬುಕೃಷ್ಣ ಮಧ್ಯೆ ಬಾಯಿಹಾಕಿ

“ಆ ವಿಷಯ ನೀವು ಯೋಚಿಸಲೇಬೇಡಿ ಸಾರ್. ಸಾಧ್ಯವಾಗದಿದ್ದ ಪಕ್ಷಕ್ಕೆ ಅಮ್ಮ ಆ ಪ್ರಸ್ತಾಪವನ್ನೇ ಮಾಡುತ್ತಿರಲಿಲ್ಲ. ನಿಮ್ಮ ಅಳಿಯನಾಗೋ ಹುಡುಗನನ್ನೂ ನಮ್ಮಮ್ಮನೇ ಸಾಕಿಸಲಹಿದ್ದಾಳೆ. ಮಹಾಬಲರಾಯರ ಮನೆಯಲ್ಲಿ ನಮ್ಮ ತಾಯಿ ಮಾತು ಎಂದರೆ ವೇದವಾಕ್ಯ.”

“ನೋಡೀಮ್ಮಾ, ನಿಮ್ಮ ಮಾತಿಗೆ ಪ್ರತಿಹೇಳಲಾರೆ. ಕನ್ಯಾಸೆರೆ ಬಿಡಿಸಿ ಪುಣ್ಯಕಟ್ಟಿಕೊಳ್ಳಿ”

ಎಂದರು.

ಅಂಬುಜಮ್ಮ ಕೈಯಲ್ಲಿ ಸೂತ್ರಗಳನ್ನು ಹಿಡಿದು ದಾಂಪತ್ಯ ಕೂಡಿಸಿಯೇಬಿಟ್ಟರು. ವೈಶಾಖಮಾಸದಲ್ಲಿ ಹೊಳೇನರಸೀಪುರದಲ್ಲಿ ಮದುವೆಯೂ ಆಗಿಹೋಯಿತು.

ವರನ ಕಡೆಯವರು ಊರಿಗೆ ಹಿಂದಿರುಗುವಾಗ ಜತೆಯಲ್ಲಿಯೇ ಸುಲೋಚನನನ್ನು ಕರೆದುಕೊಂಡು ಹೋಗಬೇಕೆಂದು ನಾಗೇಂದ್ರ ಹಟ ಹಿಡಿದ. ಅವನ ಅವಿವೇಕದ ಮಾತು ಮಹಾಬಲರಾಯನ ಕಿವಿಯಮೇಲೆ ಬಿದ್ದು ಬೀಗರ ಮನೆಯಲ್ಲಿ ರಾದ್ಧಾಂತವಾದೀತೆಂದು ಹೆದರಿ ಸುಬ್ಬುಕೃಷ್ಣ ಅವನಿಗೆ ಸಮಾಧಾನ ಹೇಳಿದ.

"ನಿನ್ನ ಹೆಂಡತಿ ನಿನ್ನ ಮನೆಗೆ ಬರದೆ ಇನ್ನೆಲ್ಲಿ ಹೋಗುತ್ತಾಳಯ್ಯ. ಅವಸರಪಟ್ಟು ಎಲ್ಲರ ಮನಸ್ಸಿಗೂ ದುಃಖವನ್ನುಂಟುಮಾಡಬಾರದು. ಊರಿಗೆ ಹೋಗಿ ಕಾಗದ ಬರೆಯೋಣ. ನಿನ್ನ ಮಾವ, ಅತ್ತೆ, ಸುಲೋಚನನನ್ನುಕರೆದುಕೊಂಡು ಬಂದು ಪ್ರಸ್ತದಶಾಸ್ತ್ರ ತೀರಿಸಿ ಊರಿಗೆ ಹೋಗುತ್ತಾರೆ."

ಸುಬ್ಬುಕೃಷ್ಣನ ನಿರ್ಣಯ ಮನಸ್ಸಿಗೆ ಪ್ರಿಯವಲ್ಲದಿದ್ದರೂ ನಾಗೇಂದ್ರ ಒಪ್ಪಿಕೊಂಡ.

ಊರಿಗೆ ಹಿಂದಿರುಗಿದಕೂಡಲೇ ನಾಗೇಂದ್ರ ಮಿಲ್ಲಿನ ಕೆಲಸಕ್ಕೆ ನಿಲ್ಲಬೇಕಾಗಿ ಬಂತು.

ಸುಬ್ಬುಕೃಷ್ಣ 'ಉಡಾಫೆ' ಮಾತು ಆಡಿ ತನ್ನ ಜವಾಬ್ದಾರಿ ಕಳೆದುಕೊಂಡಿರಲಿಲ್ಲ. ತಾನೇ ಸುಬ್ಬರಾಯರಿಗೆ ಕಾಗದ ಬರೆದು ಬೆಂಗಳೂರಿಗೆ ಬೇಗಬಂದು ಪ್ರಸ್ತದ ಶಾಸ್ತ್ರ ಮುಗಿಸಿಹೋಗಬೇಕೆಂದು ತಿಳಿಸಿದ.

ಮೂರು ತಿಂಗಳು ಕಳೆಯುವುದರೊಳಗಾಗಿ ಸುಲೋಚನ ಮಾವನ ಮನೆ ಸೇರಿದಳು.

ಪುಟ್ಟತಾಯಮ್ಮ ಸೊಸೆಗೆ ಮನೆಯ ವಹಿವಾಟನ್ನೆಲ್ಲಾ ತಿಳಿಸಿ

"ನನ್ನದು ಶಾಶ್ವತವಲ್ಲ ಸುಲೋಚನ. ಬಿದ್ದುಹೋಗೋ ಶರೀರ. ಈ ಮನೆಯ ಸಮಸ್ತ ಶ್ರೇಯಸ್ಸೂ ನಿನ್ನ ಮಡಲಿಗೆ ಬಿದ್ದಿದೆ. ಚಿಕ್ಕ ಪುಟ್ಟ ವಯಸ್ಸಿನ ಮಕ್ಕಳಿದ್ದಾರೆ. ಅವರ ಯೋಗಕ್ಷೇಮವೂ ನಿನಗೆ ಸೇರಿದ್ದು"

ಎಂದು ಹೇಳಿದರು.

ತಂದೆತಾಯಿಗಳ ಅಕ್ಕರೆಯ ಕಂದನಾಗಿ ಬೆಳೆದ ಸುಲೋಚನನಿಗೆ ಅತ್ತೆಯ ಮಾತಿನ ತೂಕ ಕೂಡಲೆ ಅರ್ಥವಾಗಲಿಲ್ಲ. ಅವಳ ಪ್ರಪಂಚ ತಾನು, ತನ್ನ ಗಂಡ ಬಿಟ್ಟು ದೂರ ವ್ಯಾಪಿಸಿರಲಿಲ್ಲ. 'ಇವತ್ತು ಕಬ್ಬನ್

ಪಾರ್ಕಿಗೆ ಹೋಗಬೇಕು—ಯಾವ ಸೀರೆ ಉಟ್ಟುಕೊಳ್ಳಲಿ ; ಇವತ್ತು 'ಗ್ಲೋಬ್' ಸಿನಿಮಾಕ್ಕೆ ಕರೆದುಕೊಂಡು ಹೋಗುತ್ತೇನೆಂದು ಹೇಳಿದ್ದಾರೆ. ಯಾವ ಕುಪ್ಪಸ ತೊಟ್ಟುಕೊಳ್ಳಲಿ, ಇವತ್ತು ಎಕ್ಸಿಬಿಷನ್ನಿಗೆ ಹೋಗಬೇಕು. ಅಲ್ಲಿ ಯಾವ ಯಾವ ಸೀರೆ ಕುಪ್ಪಸ ಖರೀದಿ ಮಾಡಲಿ ಎನ್ನುವ ಚಿಂತೆಯಲ್ಲಿ ಹೊತ್ತುಗಳೆಯುತ್ತಿದ್ದಳು. ಅತ್ತೆಯ ವಿಚಿತ್ರಕಾಹಿಲೆ ಆಗಾಗ ತನ್ನ ಕಾರ್ಯಕ್ರಮಕ್ಕೆ ಅಡ್ಡಿಬರುತ್ತಿದ್ದುದನ್ನು ಕಂಡು ಮನಸ್ಸಿನಲ್ಲಿಯೇ ಶಾಪಹಾಕುತ್ತಿದ್ದಳು.

ನಾಗೇಂದ್ರ ಹೆಂಡತಿಯ ಅಂದಚಂದಕ್ಕೆ ಮಾರುಹೋಗಿದ್ದ. ಮನೆಯಲ್ಲಿ ಅವಳ ವರ್ತನೆ ಹೇಗಿದೆಯೆನ್ನುವ ಯೋಚನೆ ಅವನಿಗೆ ಹೊಳೆಯುತ್ತಲೇ ಇರಲಿಲ್ಲ. ತಾನು ಮನೆಗೆ ಬಂದ ಹೊತ್ತಿನಲ್ಲಿ ಲಕ್ಷಣವಾಗಿ ಅಲಂಕಾರ ಮಾಡಿಕೊಂಡು ಸುಲೋಚನ ಜತೆಯಲ್ಲಿದ್ದುಬಿಟ್ಟರೆ ಅವನಿಗೆ ತೃಪ್ತಿಯಾಗಿ ಬಿಡುತ್ತಿತ್ತು.

ಸುಲೋಚನೆಯ ಅನಾಸಕ್ತಿ ಅಂಬುಜಮ್ಮನವರ ಸುರಿತ ಕಣ್ಣುಗಳಿಗೆ ಬೀಳದಿರಲಿಲ್ಲ. ಒಂದು ದಿನ ಅವರೇ

"ಪುಟ್ಟತಾಯಿ, ನಿನ್ನ ಸೊಸೆಗೆ ಬುದ್ಧಿಹೇಳುವ ಅಭ್ಯಾಸ ನೀನು ಮಾಡಿಕೊಳ್ಳಬೇಕು. ಈ ಸ್ವೇಚ್ಛಾವರ್ತನೆ ಸ್ವಲ್ಪವೂ ಚೆನ್ನಾಗಿಲ್ಲಮ್ಮ"

"ಚಿಕ್ಕ ವಯಸ್ಸು. ನಾಲ್ಕುದಿನ ಹಾಯಾಗಿರಲೀಂದ್ರೆ, ಅವರು ಸ್ವತಂತ್ರವಾಗಿರದೆ ನಾನಿರಲು ಸಾಧ್ಯವೇ? ನಮ್ಮ ಮಕ್ಕಳು ಸಂತೋಷವಾಗಿ ನಮ್ಮ ಕಣ್ಣುಮುಂದೆ ನಲಿದಾಡುವುದನ್ನು ನೋಡುವುದೇ ದೊಡ್ಡ ಭಾಗ್ಯ."

"ಅದು ಸರಿ ಕಣೇ ತಾಯೀ. ಅವರು ನಲಿದಾಡುವುದಕ್ಕೆ, ಹೊರಗೆ ಹೋಗಿಬರುವುದಕ್ಕೆ ಅಡ್ಡಿ ಮಾಡು ಎಂದು ನಾನು ಹೇಳಲಿಲ್ಲ. ಅವಳೇನೂ ಮಗುವಲ್ಲ-ಇನ್ನಾದರೂ ತನ್ನ ಜವಾಬ್ದಾರಿ ಅರ್ಥಮಾಡಿಕೊಳ್ಳಬೇಡವೇ? ಕಾಹಿಲೆ ಮಲಗಿದ್ದರೂ ನೀನೇ ಎಲ್ಲಾದಕ್ಕೂ ಒದ್ದಾಡಬೇಕೇ? ಹೆಣ್ಣು ಮಕ್ಕಳು ಲಂಗು ಲಗಾಮು ಇಲ್ಲದ ಕುದುರೆಗಳ ಹಾಗಿರುವುದು ಚೆನ್ನಲ್ಲ ತಾಯೀ-ನೀನು ಬೇಕಾದದ್ದನ್ನು."

"ಅಮ್ಮ—ನಿಮ್ಮ ಕಾಲ ಬೇರೆ—ಈಕಾಲ ಬೇರೆ. ಮನೆಯ ಹಿರಿ

ಯರು ತಮ್ಮ ಹಿರಿತನ ಉಳಿಸಿಕೊಳ್ಳಬೇಕಾದರೆ ಕಿರಿಯರು ಹೋದ ದಾರಿಯಲ್ಲೇ ಹೋಗುವುದು ಕ್ಷೇಮ. ಯಾವುದಕ್ಕೂ ಕಾಲ ಬರಬೇಕು ನೋಡಿ. ಸಂಸಾರಭಾರ ಹೆಗಲಮೇಲೆ ಬಿದ್ದರೆ, ಯಾರೂ ಹೇಳಿಕೊಡದೆಯೇ ಅವರೇ ಸರಿಹೋಗುತ್ತಾರೆ."

"ಮದುವೆಯಾದರೆ ನಾಗೇಂದ್ರನಿಗೆ ಬುದ್ಧಿಬರುತ್ತೆ ಎಂದಿದ್ದೆ. ಅವನ ಅವಿವೇಕ ಹೆಚ್ಚಾಯಿತು. ಕಪಿಗೆ ಹೆಂಡಕುಡಿಸಿದ ಹಾಗಾಯಿತು."

"ಬೇಜಾರುಮಾಡಿಕೊಳ್ಳಬೇಡಿ ಅಮ್ಮ. ಎಲ್ಲಾ ನಿಮ್ಮ ಆಶೀರ್ವಾದದಿಂದ ಸರಿಹೋಗುತ್ತೆ."

"ಏನು ಸರಿಹೋಗುತ್ತೆಯೋ? ನಿನ್ನ ನೋಡಿದರೆ ಯಾರ ಹೊಟ್ಟೆ ತಂಪಾಗಬೇಕು ಹೇಳು."

ಪುಟ್ಟತಾಯಿ ಅಂಬುಜಮ್ಮನವರಿಗೆ ಸಮಾಧಾನ ಹೇಳಿ ಮಾತು ಬದಲಾಯಿಸಿದಳು.

ಅಂಬುಜಮ್ಮನವರ ಅಂತಃಕರಣ ಪುಟ್ಟತಾಯಿಯ ಮನಸ್ಸಿಗೆ ವಿಶೇಷ ತೃಪ್ತಿಯನ್ನು ಕೊಟ್ಟಿತು. ಆದರೆ ಅವರ ನೊಸಚು ಮಾತಿನಲ್ಲಿದ್ದ ಸತ್ಯ ಅವಳ ಚಿತ್ತವನ್ನು ಸೆರೆಹಿಡಿಯದಿರಲಿಲ್ಲ. 'ಸುಲೋಚನನ್ನು ಕರೆದು ಒಂದು ಮಾತು ಹೇಳಿನೋಡಲೇ' ಎಂದು ಆಲೋಚಿಸಿದಳು. ಮರುಕ್ಷಣವೇ 'ನಾನು ಬಲತಾಯಿ. ಸಣ್ಣ ಮಾತು ದೊಡ್ಡದಾಗಿ ನಾಳೆ ನಾಗೇಂದ್ರ ಬೇರೆ ಸಂಸಾರ ಹೂಡುವ ಯೋಚನೆಮಾಡಬಹುದು. ತಂದೆ ಮಕ್ಕಳನ್ನು ಅಗಲಿಸಿದ ಪಾಪ ನನ್ನ ತಲೆಗೆ ಸುತ್ತಿಕೊಳ್ಳುತ್ತದೆ. ನಾವು ಎಷ್ಟು ಪ್ರಯತ್ನಪಟ್ಟರೇನು ಸಾರ್ಥಕ? ಅವರವರ ಹಣೆಯಲ್ಲಿ ಏನು ಬರೆದಿದೆಯೋ ಅದು ತಾನೇ ಆಗುವದು.—ಸುಲೋಚನ ನನಗೆ ಮಾಡಬೇಕಾದದ್ದು ಏನಿದೆ? ಮಹಾರಾಯರು ಎಲ್ಲ ನೋಡಿಕೊಳ್ಳುತ್ತಾರೆ.' ಎಂದು ತನಗೆ ತಾನೇ ವಿವೇಕ ಹೇಳಿಕೊಂಡಳು.

ಪುಟ್ಟತಾಯಿಯ ಮನಸ್ಸಿನಲ್ಲಾಗುತ್ತಿದ್ದ ಮಹಾಯುದ್ಧ, ಸಾವಿನೊಂದಿಗೆ ಅವಳು ಸತತವಾಗಿ ನಡಸುತ್ತಿದ್ದ ಹೋರಾಟ ನಾಗೇಂದ್ರನ ಕಣ್ಣಿಗೆ ಬೀಳಲಿಲ್ಲ-ಸುಲೋಚನ ಅವುಗಳನ್ನು ತನ್ನ ಕಣ್ಣಿಗೆ ಬೀಳಿಸಿಕೊಳ್ಳುವ ಪ್ರಯತ್ನಮಾಡಲಿಲ್ಲ.

೩೧

ಮಹಾಬಲರಾಯ ಮುಂಬಯಿಗೆ ಹೋಗುವುದು ಅನಿವಾರ್ಯವಾಯಿತು. ಮಿಲ್ಲಿನ ಕೆಲಸ ಮಗನಿಗೊಪ್ಪಿಸಿ, ಅಂಗಡಿಯಮೇಲೆ ಒಂದು ಕಣ್ಣು ಇಟ್ಟಿರುವಂತೆ ಅವನಿಗೆ ಹೇಳಿ ಮುಂಬಯಿಗೆ ಹೋಗುವ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದ.

'ಪುಟ್ಟತಾಯಿಯನ್ನು ಈ ಸ್ಥಿತಿಯಲ್ಲಿ ಬಿಟ್ಟುಹೋಗುವುದು ಹೇಗೆ' ಎಂಬ ಚಿಂತೆ ಮಹಾಬಲರಾಯನನ್ನು ಒಂದೇಸಮನಾಗಿ ಕಾಡಲಾರಂಭಿಸಿತು. ಗಂಡನ ಉಮ್ಮಳ ಕಂಡು ಪುಟ್ಟತಾಯಿಯೇ ಅವನಿಗೆ ಸಮಾಧಾನಹೇಳಿದಳು.

"ನೀವು ನಿಶ್ಚಿಂತೆಯಾಗಿ ಹೋಗಿ ಬನ್ನಿ. ನನ್ನ ದೇಹಸ್ಥಿತಿ ಈಗ ಮೊದಲಿಗಿಂತ ಎಷ್ಟೋ ವಾಸಿ. ಅಮ್ಮಾ ಇದ್ದಾಳೆ—ನೋಡಿಕೊಳ್ಳುತ್ತಾಳೆ. ಡಾಕ್ಟರು ಬರುತ್ತಿರುತ್ತಾರೆ. ನಾಗೇಂದ್ರ-ಸುಲೋಚನ ಇದ್ದಾರೆ, ನೋಡಿಕೊಳ್ಳುತ್ತಾರೆ."

ಹೆಂಡತಿಯ ಮಾತು ಕೇಳಿ ಮಹಾಬಲರಾಯ ನಿಟ್ಟುಸಿರುಬಿಟ್ಟು,

"ಪುಟ್ಟೂ. ನಿನ್ನ ಯೋಗಕ್ಷೇಮ ನಾಗೇಂದ್ರ ನೋಡಿಕೊಳ್ಳುತ್ತಿದ್ದರೆ ನನಗೇನು ಯೋಚನೆ ಇರುತ್ತಿತ್ತು."

"ನೀವು ಹೇಳುವುದು ನನಗೆ ಅರ್ಥವಾಗುತ್ತಿಲ್ಲ."

"ನಾ ಬಲ್ಲೆ ಪುಟ್ಟೂ. ಮನೆಯಲ್ಲಿ ನಾನು ಬಹಳಹೊತ್ತು ನಿಲ್ಲದಿದ್ದರೂ ಮನೆಯ ವಿಷಯ ನನಗೇನೂ ಗೊತ್ತಿಲ್ಲ ಎಂದು ಭಾವಿಸಬೇಡ. ಮಕ್ಕಳು ದೊಡ್ಡವರಾಗಲಿ-ವಿದ್ಯಾವಂತರಾಗಲಿ-ಮುಂದಕ್ಕೆ ಬರಲಿ, ನಮ್ಮ ಕೊನೆಗಾಲಕ್ಕೆ ಅವರ ಆಸರ ಸಿಕ್ಕಲಿ ಎಂದು ಹಾರೈಸುತ್ತೇವೆ. ನಮ್ಮೆಲ್ಲಾ ಸುಖವನ್ನೂ ಬದಿಗಿಟ್ಟು ಅವರ ಶ್ರೇಯಸ್ಸಿಗಾಗಿ ಹಗಲಿರಳೂ ದುಡಿಯುತ್ತೇವೆ. ವಯಸ್ಸಿಗೆ ಬಂದ ಮಕ್ಕಳು ಮಾಡುವ ಉಪಕಾರವೇನು ? ತಾವಾಯಿತು ತಮ್ಮ ಸುಖವಾಯಿತು ! ನಾಗೇಂದ್ರ ಅವನ ಹೆಂಡತಿ ನಿನ್ನ ಯೋಗಕ್ಷೇಮ ಎಷ್ಟು ವಿಚಾರಿಸಿಕೊಳ್ಳುತ್ತಿದ್ದಾರೆಂಬುದನ್ನು ನಾನರಿಯೆ ಎಂದು ತಿಳಿದಿರುವೆಯಾ ?"

"ಅವರು ನನ್ನ ವಿಷಯದಲ್ಲಿ ಹೇಗಾದರೂ ಇರಲಿ, ಅವರು ಸುಖವಾಗಿದ್ದಾರಷ್ಟೇ ?"

"ಅದಕ್ಕೇನು ಕಡಿಮೆ. ನಾನು ಯಾವದಕ್ಕೆ ಕೈಹಿಡಿದಿದ್ದೇನೆ."

"ಸರಿ—ನನುಗೆ ಅದಕ್ಕಿಂತ ಇನ್ನೇನು ಬೇಕಾದದ್ದು. ಗಿಡದಲ್ಲಿ ಕುಡಿಯೊಡೆದು, ಚಿಗುರೆಲೆ ಮೂಡುವಾಗ ಹಣ್ಣೆಲೆ ವ್ಯಸನಪಡುವುದಿಲ್ಲ. ನಾನು ಹೋದರೇನು-ನನ್ನ ಸ್ಥಾನಕ್ಕೆ ಇನ್ನೊಂದು ಎಲೆ ಸಿದ್ಧವಾಯಿತಲ್ಲಾ ಎಂದು ಸಂತೋಷಪಡುತ್ತದೆ."

"ಪುಟ್ಟೊ—ನಾನು ಬಹಳ ಭಾಗ್ಯಶಾಲಿ ಕಣೇ."

"ಈ ನಿರ್ಭಾಗ್ಯಳನ್ನು ಕಟ್ಟಿಕೊಂಡು ಯಾವ ಸುಖಪಟ್ಟಿರಿ ಸ್ವಾಮಿ. ಒಂದು ದಿನ ನಿಮ್ಮನ್ನು ಸರಿಯಾಗಿ ಉಪಚರಿಸಲಿಲ್ಲ, ಆದರಿಸಲಿಲ್ಲ. ಸದಾ ನನ್ನ ಹಾಳು ರೋಗದ ಚಿಂತೆಯೇ ನನಗಾಯಿತು. ಆದರೆ ಒಂದು ದಿನವೂ ನೀವು ಬೇಸರಪಟ್ಟುಕೊಳ್ಳಲಿಲ್ಲ. ನನಗೆ ಒಪ್ಪಿಸಿದ ಮನಸ್ಸನ್ನು ನನ್ನಿಂದ ಕಿತ್ತುಕೊಳ್ಳಲಿಲ್ಲ. ಬಹಳ ಜನ ಬದುಕಿನಲ್ಲಿ ಸುಖ ಕಾಣುತ್ತಾರೆ. ಸಾವಿನಲ್ಲಿ ಸುಖ ಕಾಣುವವರು ವಿರಳ. ಸಾವಿಗೂ ನಾನು ಅಂಜದಂತೆ ನನ್ನ ನಡೆಸಿಕೊಂಡುಬಂದಿರಿ. ನನ್ನ ಎಷ್ಟು ಜನ್ಮಗಳ ತಪಸ್ಸಿನ ಫಲದಿಂದ ನೀವು ನನಗೆ ಪತಿಯಾಗಿ ಲಭಿಸಿದಿರಿ."

"ಪುಟ್ಟೊ—ಹೀಗೆ ಮಾತಾಡಬೇಡಪ್ಪ. ಇಷ್ಟೊಂದು ಬೆಳಕನ್ನು ನಾನು ಒಟ್ಟಿಗೆ ನೋಡಲಾರೆ. ನನ್ನ ಕಣ್ಣುಗಳಲ್ಲಿ ಅಷ್ಟು ಶಕ್ತಿಯಿಲ್ಲ."

"ಯಾವ ಯೋಚನೆಯನ್ನೂ ಮಾಡದೆ ನಿಮ್ಮ ಕೆಲಸದಮೇಲೆ ಬೊಂಬಾಯಿಗೆ ಹೋಗಿಬನ್ನಿ."

"ನಿನಗೆ ಸ್ವಲ್ಪ ಹೆಚ್ಚು ಕಡಿಮೆಯಾದರೂ ಕೂಡಲೆ ತಾರುಮಾಡಿ ತಿಳಿಸಬೇಕು—ನಾನು ಬಂದುಬಿಡುತ್ತೇನೆ."

"ಹಾಗೇ ಆಗಲಿ—ಖಂಡಿತ ತಿಳಿಸುತ್ತೇನೆ."

"ಪ್ರತಿದಿನ ನಿನ್ನ ಆರೋಗ್ಯಕ್ಕೆ ಕಾಗದ ಬರೆಯುತ್ತಿರಬೇಕು."

"ಹುಡುಗರ ಕೈಯಲ್ಲಿ ಬರೆಸುತ್ತೇನೆ."

"ಬೊಂಬಾಯಿಯಿಂದ ನಿನಗೇನಾದರೂ ತರಲೇ ?"

"ನನಗೇನುಬೇಕಾಗಿದೆ—ಮಹಾರಾಯರು ಯಾವದಕ್ಕೆ ಕಡಿಮೆ ಮಾಡಿದ್ದೀರಿ—ನಿಮ್ಮ ಆಶೀರ್ವಾದ ಒಂದು ಮರೆಯದೆ ತೆಗೆದುಕೊಂಡು ಬನ್ನಿ."

ಮಹಾಬಲ ಅಲ್ಲಿ ಹೆಚ್ಚುಕಾಲ ಕೂಡಲಾಗಲಿಲ್ಲ. ಯಾವುದೋ ಕೆಲಸದ ನೆಪಮಾಡಿಕೊಂಡು ಹೊರಗೆದ್ದುಬಂದ. ಎಷ್ಟು ಪ್ರಯತ್ನಿಸಿದರೂ ಕಣ್ಣೀರು ತಡೆಯುವುದು ಅವನಿಂದಾಗಲಿಲ್ಲ.

ಮುಂಬಯಿಯಲ್ಲಿ ಬ್ರ್ಯಾಂಚ್ ತೆಗೆಯುವ ಸಂಬಂಧದಲ್ಲಿ ಕೆಲವು ಕಾಗದಪತ್ರಗಳನ್ನು ಕಾನೂನುರೀತ್ಯಾ ಮಹಾಬಲರಾಯ ಮಾಡಿಸಬೇಕಾಗಿತ್ತು. ಸುಬ್ಬುಕೃಷ್ಣನನ್ನು ಹುಡುಕಿಕೊಂಡು ಅವನ ಮನೆಗೆ ಹೋದ.

ಮಹಾಬಲರಾಯ ಬಂದಿದ್ದ ಕೆಲಸವೆಲ್ಲಾ ಮುಗಿದಮೇಲೆ ಸುಬ್ಬುಕೃಷ್ಣ.

"ಕಛೇರಿಗೆ ಜಾಗವೆಲ್ಲಿ ನೋಡಿದ್ದೀ ಮಹಾಬಲ?" ಎಂದು ಕೇಳಿದ.

"ಹಾರ್ನಬಿ ರೋಡಿನಲ್ಲಿ ಒಂದು ಅಂಗಡಿ ಸಿಕ್ಕುವ ಸಂಭವವಿದೆ. ಮನೆಯ ಯಜಮಾನ ಬಹಳ ಪಗಡಿ ಕೇಳುತ್ತಿದ್ದಾನೆ."

"ಹಾಗಾದರೆ........"

"ಉಮಾಪತಿ ಮುಂಬಯಿ ಪಾರ್ಟನರಿಗೂ ಮನೆಯಮಾಲಿಕನಿಗೂ ತುಂಬ ಸ್ನೇಹ. ಅವನ ದಾಕ್ಷಿಣ್ಯಕ್ಕೆ ಬಾಡಿಗೆ ಸ್ವಲ್ಪ ಕಡಿಮೆಯಾಗಬಹುದು."

"ನೀನು ಎಷ್ಟು ದಿವಸ ಅಲ್ಲಿರುತ್ತಿ ?"

"ಹೇಳಲು ಬರುವಂತಿಲ್ಲ. ಆಫೀಸಿನ ವ್ಯವಸ್ಥೆಯಾದ ಕೂಡಲೆ ಹಿಂದಿರುಗುತ್ತೇನೆ. ಅಲ್ಲಿ ಕುಳಿತುಕೊಂಡೇನು ಮಾಡಲಿ ಮನೆಯ ಸ್ಥಿತಿ ನಿನಗೆ ಗೊತ್ತಿದೆಯಲ್ಲಾ ?"

"ಮುಂಬಯಿ ಆಫೀಸಿಗೆ ಸರಿಯಾದ ಜನ ಸಿಕ್ಕಿದ್ದಾರೆಯೇ"

"ಕೆಲವರು ಸಿಕ್ಕಿದ್ದಾರೆ. ನಿನಗೆ ತಿಳಿದವರು ಯಾರಾದರೂ ಇದ್ದಾರೇನು ?"

"ಇದ್ದಾರೆ. ಅದಕ್ಕೇ ಕೇಳಿದ್ದು. ತಂದೆಯವರ ಗುರುತಿನವರು ಒಬ್ಬರಿದ್ದಾರೆ. ಹಿಂದೆ ಅವರು ಹ್ಯಾವೆರೋ ಕಂಪನಿಯಲ್ಲಿದ್ದರು. ಜರ್ಮನರ ಕೈಯಲ್ಲಿ ನುರಿತಿರುವ ಮನುಷ್ಯ. ತುಂಬ ದಕ್ಷ."

"ಈಗ ಅವರೆಲ್ಲಿದ್ದಾರೆ? ಅವರ ಹೆಸರೇನು"

"ಕಲ್ಯಾಣದಲ್ಲಿ ಒಂದು ಸೋಪು ಕಾರ್ಖಾನೆಯಲ್ಲಿದ್ದಾರೆ. ನಿನಗೆ ಅವ

ರಿಂದ ಪ್ರಯೋಜನವಾಗುವುದಾದರೆ ತಿಳಿಸು–ಕಾಗದ ಬರೆಯುತ್ತೇನೆ ಅವರ ಹೆಸರು ನಂಜುಂಡಯ್ಯ."

"ಖಂಡಿತ ಬರೆಯಪ್ಪ. ಹೊಸವ್ಯವಹಾರಕ್ಕೆ ಕೈಹಾಕುತ್ತಿರುವುದು–ನಂಬಿಕಸ್ಥರಾದ ಜನ ಸಿಕ್ಕಿದರೆ ಬೇಡವೆನ್ನುತ್ತೇವೆಯೇ ?''

"ಮುಂಬಯಿಯಲ್ಲಿ ನೀನು ಎಲ್ಲಿರುತ್ತೀ ?"

"ಮಾಡರ್ನ್ ಹಿಂದೂ ಹೋಟಲಿನಲ್ಲಿ."

"ಅಲ್ಲಿಯೇ ನಿನ್ನ ಬಂದು ಕಾಣುವಂತೆ ಬರೆಯುತ್ತೇನೆ."

"ಸಂತೋಷ—ನನ್ನ ಮನೆಯ ಕಡೆ ಸ್ವಲ್ಪ ವಿಚಾರಿಸಿಕೊಳ್ಳು ತ್ತಿರು"

"ಅವಶ್ಯಕವಾಗಿ ಆಗಲಿ.

"ಮನೆಯ ಉಸ್ತುವಾರಿ ನೋಡಿಕೊಳ್ಳುವಂತೆ ನಾಗೇಂದ್ರನಿಗೂ ನೀನು ಹೇಳಪ್ಪ."

"ಆಗತ್ಯವಾಗಿ ಹೇಳುತ್ತೇನೆ."

ಮಹಾಬಲ ಅರೆಮನಸ್ಸಿನಿಂದಲೇ ಪ್ರಯಾಣಸನ್ನದ್ಧನಾದ. ರಾತ್ರಿ ಪೂನಾ ಮೇಯಿಲ್‌ಗೆ ಹೋಗುವುದೆಂದು ನಿಶ್ಚಯವಾಯಿತು. ಊಟ ಮುಗಿಯಿತು. ಪುಟ್ಟತಾಯಿ ಒಂದು ಲೋಟ ಕಾಯಿಸಿದ ಹಾಲನ್ನು ಗಂಡನ ಕೈಗಿತ್ತಳು.

"ಈಗತಾನೆ ಊಟಮಾಡಿದ್ದೀನಿ. ಹಾಲು ಯಾರಿಗೆ ಸೇರುತ್ತದೆ."

"ಚಿಂತೆಯಿಲ್ಲ ತೆಗೆದುಕೊಳ್ಳಿ. ಒಂದು ಕಪ್‌ಹಾಲು ಹೆಚ್ಚಾಗುವುದಿಲ್ಲ, ಹಾಲು ಬೇಡ ಅನ್ನಬಾರದು.''

ಮಹಾಬಲ ಮರುಮಾತಾಡದೆ ಹಾಲು ಕುಡಿದು ಮುಗಿಸಿದ.

ಹೊರಗಡೆ ನಾಗೇಂದ್ರ ಕಾರು ಸ್ಟಾರ್ಟ್‌ಮಾಡುವ ಶಬ್ದ ಕೇಳಿಬಂತು. ಮಹಾಬಲ ಮಕ್ಕಳೆಲ್ಲರನ್ನೂ ಮಾತನಾಡಿಸಿ, ಒಳಗೆ ಹೋಗಿ ಲಕ್ಷಮ್ಮನವರಿಗೆ ಹೇಳಿಬಂದ.

ಪುಟ್ಟತಾಯಿ ಹಾಸಿಗೆ ಬಿಟ್ಟೆದ್ದುಬಂದಳು.

"ನೀನೇಕೆ ಎದ್ದೆ - ಆಯಾಸಮಾಡಿಕೊಳ್ಳಬೇಡ."

"ಆಯಾಸವೇನೂ ಆಗುವುದಿಲ್ಲ."

ಎಂದು ಗಂಡನ ಎರಡು ಪಾದಗಳನ್ನು ಮುಟ್ಟಿ ನಮಸ್ಕಾರಮಾಡಿದಳು. ಮಹಾಬಲನಿಗೆ ದುಃಖ ಉಕ್ಕಿಬಂತು.

"ಇದೇನು ಪುಟ್ಟೂ."

"ಏನು ಇಲ್ಲ ಜನ್ಮಜನ್ಮಾಂತರಕ್ಕೂ ನೀವೇ ನನ್ನ ಪತಿದೇವರಾಗಬೇಕೆಂದು ನನ್ನ ಹರಕೆ"

ಎಂದಳು.

ಮಹಾಬಲ ಎಷ್ಟು ಬೇಡವೆಂದರೂ ಕೇಳದೆ ಅವನನ್ನು ಬೀಳ್ಕೊಡಲು ಪುಟ್ಟತಾಯಿ ತಲೆಬಾಗಿಲವರೆಗೆ ಬಂದಳು. ಹೆಂಡತಿಯ ಅಪ್ಪಣೆ ಪಡೆದು ಕಾರಿನಲ್ಲಿ ಕುಳಿತ, ಕಾರು ಹೊರಟಮೇಲೆ ಪುಟ್ಟತಾಯಿ ಒಳಗೆ ಬಂದು ಮಲಗಿದಳು. ಅವಳ ಮನಸ್ಸು ತುಂಬ ಭಾರವಾಗಿತ್ತು. ಕಣ್ಣುಗಳಿಂದ ಒಂದೇಸಮನೆ ಕೋಡಿ ಹರಿಯುತ್ತಿತ್ತು.

೩೨

ನಂಜುಂಡಯ್ಯನಿಗೆ ಸುಬ್ಬುಕೃಷ್ಣನ ತಂತೀವರ್ತಮಾನ ಸಕಾಲಕ್ಕೆ ಮುಟ್ಟಿತು. ಅವನು ತಡಮಾಡದೆ ಆಫೀಸಿಗೆ ರಜಕ್ಕೆ ಬರೆದುಹಾಕಿ ವಿಕ್ಟೋರಿಯಾ ಟರ್ಮಿನಸ್ ಸ್ಟೇಷನ್ನಿಗೆ ಮಹಾಬಲರಾಯನನ್ನು ಎದುರುಗೊಳ್ಳಲು ಬಂದ.

ಮಹಾಬಲರಾಯನನ್ನು ಗುರುತಿಸುವುದು ನಂಜುಂಡಯ್ಯನಿಗೆ ಕಷ್ಟವಾಗಲಿಲ್ಲ.

"ನಾನು ಬರುವ ವಿಷಯ ನಿಮಗೆ ಯಾರು ತಿಳಿಸಿದರು."

"ಸುಬ್ಬುಕೃಷ್ಣಯ್ಯನವರು."

"ನನಗೋಸ್ಕರ ಏಕಪ್ಪಾ ಇಷ್ಟು ತೊಂದರೆ ತೆಗೆದುಕೊಂಡಿರಿ."

"ತೊಂದರೆ ಏನೂ ಇಲ್ಲ ಸಾರ್."

ಮಹಾಬಲರಾಯನ ಜತೆಯಲ್ಲೇ ನಂಜುಂಡಯ್ಯನೂ 'ಮಾಡರ್ನ್ ಹಿಂದೂ ಹೊಟಿಲಿಗೆ' ಹೋದ. ಮಹಾಬಲರಾಯ ಸ್ನಾನ ಮುಗಿಸಿ ಬಂದು,

"ನಿಮ್ಮ ಊಟವಾಯಿತೇ ನಂಜುಂಡಯ್ಯನವರೇ ?"

"ನಾನು ಮನೆಗೆ ಹೋಗುತ್ತೇನೆ ಸರ್."

"ಚಿಂತೆಯಿಲ್ಲ ನನ್ನ ಜತೆ ಊಟಕ್ಕೇಳಿ"

ಎಂದು ಅವನನ್ನೂ ಊಟಕ್ಕೆ ಕರೆದುಕೊಂಡುಹೋದ. ಇಬ್ಬರೂ ಊಟಮುಗಿಸಿಬಂದು ರೂಮಿನಲ್ಲಿ ಕುಳಿತರು.

"ನೀವು ಯಾವುದೋ ಸೋಪಿನ ಕಾರ್ಖಾನೆಯಲ್ಲಿದ್ದೀರಿ ಎಂದು ಸುಬ್ಬುಕೃಷ್ಣ ಹೇಳಿದ."

"ಹೌದು ಸರ್."

"ಅಲ್ಲಿನ ಕೆಲಸ ಸರಿಹೋಗಿಲ್ಲವೇ ?"

"ಇಲ್ಲಿ ಸೋಪ್ ಬಾಕ್ಸುಗಳನ್ನು ಹೊರುವುದರಿಂದ ಮೊದಲುಗೊಂಡು ಕಾರ್ಖಾನೆ ನೋಡಿಕೊಳ್ಳುವುದರ ವರೆಗೆ ನಾನೇ ಮಾಡಬೇಕಾಗಿದೆ. ನಾನು ಗುಜರಾತಿ ಅಲ್ಲವೆಂದು ಇತರ ನೌಕರರಿಗೆ ಹೊಟ್ಟೆಯುರಿ."

"ಹಾಗಾದರೆ ನಿಮ್ಮನ್ನೇಕೆ ಇಟ್ಟುಕೊಂಡಿದ್ದಾರೆ."

"ವಿಧಿಯಿಲ್ಲದೆ. ಕೆಲಸ ತೂಗಿಸುವುದಕ್ಕೆ ಒಬ್ಬರು ಬೇಕಲ್ಲ."

"ನಿಮಗೆ ಬೇರೆ ಕಡೆ ಕೆಲಸ ಸಿಕ್ಕಲಿಲ್ಲವೇ ?"

"ಹೆಂಗಸರ ಸ್ಪರ್ಧೆ ಇಲ್ಲಿ ಹೆಚ್ಚಾಗಿದೆ ಸರ್. ಪ್ರತಿಯೊಂದು ಕಾರ್ಖಾನೆ ಕಛೇರಿಯಲ್ಲಿಯೂ ಅವರಿಗೆ ಪ್ರಾಶಸ್ತ್ಯ"

"ನಿಮ್ಮ ವಯಸ್ಸೆಷ್ಟು ನಂಜುಂಡಯ್ಯನವರೇ ?"

"ನಲವತ್ತೇಳು ಆಯಿತು—ಈಗ ನಲವತ್ತೆಂಟು ನಡೆಯುತ್ತ ಇದೆ."

"ಈ ವಯಸ್ಸಿನಲ್ಲಿ ನಿಮ್ಮ ಕೆಲಸ ಖಾಯಂ ಆಗಿಲ್ಲವೆಂದರೆ ಬಹಳ ಶೋಚನೀಯ. ಈಗ ಸಂಬಳ ಎಷ್ಟು ಬರುತ್ತಿದೆ ?"

"ತಿಂಗಳಿಗೆ ನೂರೈವತ್ತು ಸಂಬಳ, ಡಿಯರ್‌ನೆಸ್ ಅಲೋಯನ್ಸ್ ಮೂವತ್ತು ಬರುತ್ತಿದೆ."

"ಆಫೀಸ್ ಕೆಲಸದಲ್ಲಿ ನೀವು ತುಂಬ ದಕ್ಷರೆಂದು ಸುಬ್ಬುಕೃಷ್ಣ ಹೇಳಿದ."

"ಅದು ಅವರ ವಿಶ್ವಾಸದ ಮಾತು. ನಿಮಗೆ ಅತೃಪ್ತಿಯಾಗದಂತೆ ಕೆಲಸಮಾಡಬಲ್ಲೆ ಎನ್ನುವ ಧೈರ್ಯ ನನಗಿದೆ."

"ನೀವು ನನ್ನವರಾಗಿ ಇಲ್ಲಿನ ಎಲ್ಲ ಕೆಲಸಕಾರ್ಯಗಳನ್ನೂ ನಿರ್ವಹಿಸಬೇಕು. ನಂಜುಂಡಯ್ಯನವರೇ. ಬ್ರ್ಯಾಂಚಿನ ವ್ಯವಸ್ಥೆಮಾಡಿ ನಾನು

ಊರಿಗೆ ಹೋಗಬೇಕಾಗುತ್ತದೆ. ಮುಂದಕ್ಕೆ ನನ್ನ ಮಗ ಇಲ್ಲಿಗೆ ಬರುತ್ತಾನೆ. ಅವನಿಗೆ ಎಲ್ಲ ರೀತಿಯಲ್ಲಿಯೂ ದಾರಿ ತೋರಿಸಬೇಕಾದ ಕರ್ತವ್ಯ ನಿಮ್ಮದು."

"ಶಿರಸಾವಹಿಸಿ ಪಾಲಿಸುತ್ತೇನೆ"

"ಸದ್ಯಕ್ಕೆ ತಿಂಗಳಿಗೆ ೨೦೦ ರೂಪಾಯಿ ತೆಗೆದುಕೊಳ್ಳಿ. ಮುಂದೆ ಹೆಚ್ಚು ಮಾಡೋಣ."

"ತಾವು ಏನು ಕೊಟ್ಟರೂ ಸಂತೋಷ ಸ್ವಾಮಿ. ನನಗೆ ಸೋಪ್ ಫ್ಯಾಕ್ಟರಿಯ ಗುಮಲಾಮಗಿರಿ ತಪ್ಪಿದರೆ ಸಾಕಾಗಿದೆ."

ನಂಜುಂಡಯ್ಯ ಸಿಕ್ಕಿದುದು ಮಹಾಬಲರಾಯನ ಕೆಲಸ ಹಗುರ ವಾಯಿತು.

ಹಾರನ್‌ಬೀ ರಸ್ತೆಯಲ್ಲಿರುವ ಅಂಗಡಿಯೇ ಸಿಕ್ಕಿತು. ಅಂಗಡಿಗೆ ಫೋನ್ ಇದ್ದುದನ್ನು ಕಂಡು ಮಹಾಬಲರಾಯನಿಗೆ ಮತ್ತಷ್ಟು ಸಂತೋಷ ವಾಯಿತು. ಎರಡು ದಿವಸದಲ್ಲಿ ಆಫೀಸನ್ನು ಅಣಿಮಾಡುವ ಕೆಲಸ ಮುಗಿ ಯಿತು. ಆಫೀಸಿಗೆ ಬೇಕಾದ ನೌಕರರನ್ನು ಆರಿಸಿದ್ದೂ ಆಯಿತು. ಇಬ್ಬರು ಕ್ಲರ್ಕುಗಳು, ಇಬ್ಬರು ಟೈಪಿಸ್ಟರು, ಇಬ್ಬರು ಆಳುಗಳು—ನಂಜುಂಡಯ್ಯ ಮ್ಯಾನೇಜರಾಗಿರತಕ್ಕದ್ದೆಂದು ನಿಶ್ಚಯವಾಯಿತು.

'ಮಾರುತಿ ವೀವಿಂಗ್ ಮಿಲ್ಸ್' ನ ಬ್ರ್ಯಾಂಚ್ ಕಛೇರಿ ಆರಂಭ ಮಾಡುವ ಕೆಲಸದ ಜೊತೆಗೆ ನೂರಾರು ಕೆಲಸಗನ್ನಿಟ್ಟುಕೊಂಡೇ ಮಹಾ ಬಲರಾಯ ಮುಂಬಯಿಗೆ ಬಂದಿದ್ದ. ಅಂಗಡಿಗೆ ಸಾಮಾನು ಕೊಳ್ಳುವ ಕೆಲಸ, ತನ್ನಲ್ಲಿದ್ದ ಸಾಮಾನುಗಳಿಗೆ ಗಿರಾಕಿಗಳನ್ನು ಕುದುರಿಸುವ ಕೆಲಸ. ಅವನಿಗೆ ಎಂಟು ದಿವಸ ಸ್ವಲ್ಪವೂ ಪುರಸತ್ತು ಸಿಗಲಿಲ್ಲ. ಇನ್ನೆರಡು ದಿವಸಗಳಲ್ಲಿ ತನ್ನ ಕೆಲಸ ಮುಗಿಸಿಕೊಂಡು ಊರಿಗೆ ಹಿಂದಿರುಗುವು ದೆಂದು ನಿಶ್ಚಯಿಸಿದ.

ಶನಿವಾರ ಕಛೇರಿ ಮುಗಿಯುವ ಮುನ್ನ ನಂಜುಂಡಯ್ಯ ಮಹಾಬಲ ರಾಯನನ್ನು ಕಂಡು

"ನಾಳೆ ತಮಗೆ ಸ್ವಲ್ಪ ಪುರಸತ್ತಿದೆಯೇ ?" ಎಂದು ಕೇಳಿದ.

"ಏಕೆ ನಂಜುಂಡಯ್ಯನವರೇ ?"

"ತಮಗೆ ತೊಂದರೆಯಾಗದಿದ್ದರೆ ನಾಳೆ ನಮ್ಮ ಮನೆಗೆ ಊಟಕ್ಕೆ ದಯೆಮಾಡಿಸಬೇಕು."

"ಇದೆಲ್ಲಾ ಏಕಪ್ಪಾ. ಸುಮ್ಮನೆ ನಿಮಗೂ ತೊಂದರೆ."

"ತಾವು ಬಂದು ನಮ್ಮ ಅಲ್ಪ ಆತಿಥ್ಯ ಸ್ವೀಕರಿಸಿದರೆ ನಾನು ಕೃತಾರ್ಥನಾಗುತ್ತೇನೆ."

"ಇಷ್ಟು ದೊಡ್ಡಮಾತು ಬೇಡಿ ನಂಜುಂಡಯ್ಯನವರೇ. ಅವಶ್ಯಕವಾಗಿ ಬರುತ್ತೇನೆ. ನಿಮ್ಮ ಮನೆಯೆಲ್ಲಿ ?"

"ಮಾತುಂಗಾದಲ್ಲಿ. ನಾಳೆ ಹನ್ನೊಂದು ಘಂಟೆಗೆ ನಾನೇ ಹೋಟೆಲಿಗೆ ಬಂದು ತಮ್ಮನ್ನು ಕರೆದುಕೊಂಡು ಹೋಗುತ್ತೇನೆ."

ಮಾರನೆಯದಿನ ಹನ್ನೊಂದು ಗಂಟೆಗೆ ಸರಿಯಾಗಿ ನಂಜುಂಡಯ್ಯ ಹೋಟೆಲಿಗೆ ಬಂದ. ಮಹಾಬಲರಾಯ ಒಂದು ಟ್ಯಾಕ್ಸಿ ಮಾಡಿಕೊಂಡು ನಂಜುಂಡಯ್ಯನಜತೆ ಮಾತುಂಗಕ್ಕೆ ಹೋದ.

ಮಾತುಂಗದ ಭವ್ಯವಾದ ಮನೆಯೊಂದರಲ್ಲಿ ನಂಜುಂಡಯ್ಯ ವಾಸ ಮಾಡುತ್ತಿದ್ದ. ಆದರೆ ಆ ಮನೆಯಲ್ಲಿ ಎರಡು ರೂಮುಗಳು ಮಾತ್ರ ನಂಜುಂಡಯ್ಯನಿಗೆ ಸೇರಿದ್ದವು. ಒಂದು ಅಡಿಗೆ ಮನೆಯಾಗಿತ್ತು-ಇನ್ನೊಂದು ಡ್ರಾಯಿಂಗ್ ರೂಮ್, ಬೆಡ್ ರೂಮ್ ಸಮಸ್ತವೂ ಆಗಿತ್ತು.

ಮಹಾಬಲರಾಯನನ್ನು ಕರೆತಂದು ನಂಜುಂಡಯ್ಯ ಡ್ರಾಯಿಂಗ್ ರೂಮಿನಲ್ಲಿ ಕೂಡಿಸಿದ.

"ಮನೆ ಬಹು ಸಣ್ಣದು."

"ನಿಮಗೆ ಈ ಮನೆ ಸಾಕೇ ?"

"ಸಾಲದು. ಏನು ಮಾಡುವುದಕ್ಕಾಗುತ್ತದೆ ಸ್ವಾಮಿ. ಮುಂಬಯಿಯಲ್ಲಿ ಮನೆ ಸಿಕ್ಕುವುದೇ ಒಂದು ದೊಡ್ಡ ರಾಮಾಯಣ."

"ಇದಕ್ಕೆಷ್ಟು ಬಾಡಿಗೆ ಕೊಡುತ್ತಿರುವಿರಿ ?"

"ಇಪ್ಪತ್ತು ರೂಪಾಯಿ. ನಾನು ಎಂಟು ವರ್ಷಗಳಿಂದ ಇಲ್ಲಿಯೇ ಇರುವುದರಿಂದ ಈ ಬಾಡಿಗೆಗೆ ಸಿಕ್ಕಿದೆ. ಈಗ ನಾನು ಈ ಮನೆ ಬಿಟ್ಟರೆ ನೂರು ರೂಪಾಯಿ ಕೊಡುವುದಕ್ಕೆ ಸಿದ್ಧವಾಗಿದ್ದಾರೆ"

"ನಿಮಗೆ ಮಕ್ಕಳೆಷ್ಟು ನಂಜುಂಡಯ್ಯನವರೇ ?"

"ಇಬ್ಬರು ಸ್ವಾಮಿ"

ಎಂದು ಒಳಗೆದ್ದು ಹೋಗಿ ತನ್ನ ಮಗಳನ್ನು ಕರೆದುಕೊಂಡು ಬಂದು ನಮಸ್ಕಾರಮಾಡಿಸಿ

"ಇವಳೇ ದೊಡ್ಡ ಮಗಳು-ರಂಗನಾಯಕಿ. ಎರಡನೆಯವನು ಮಗ—ಅಪ್ಪು."

ರಂಗನಾಯಕಿ ಒಳಕ್ಕೆ ಹೋಗಲು

"ಮಗಳಿಗೆ ಮದುವೆಯಾಗಿದೆಯೇ ನಂಜುಂಡಯ್ಯನವರೇ ?"

ಎಂದು ಮಹಾಬಲರಾಯ ಕೇಳಿದ. ನಂಜುಂಡಯ್ಯ ನಿಟ್ಟುಸಿರು ಬಿಟ್ಟು

"ಇಲ್ಲ ಸ್ವಾಮಿ. ಮನಸ್ಸಿಗೆ ಅದೇ ದೊಡ್ಡ ಕೊರಗು."

"ಅವಳ ವಯಸ್ಸೆಷ್ಟು ?"

"ಇಪ್ಪತ್ತು ತುಂಬಿತು."

"ಏಕೆ ಸಾವಕಾಶಮಾಡುತ್ತಿರುವಿರಿ. ಮದುವೆ ವಯಸ್ಸು ಆಗಿಲ್ಲವೆ ?"

"ಏನುಮಾಡಲಿ-ಬಡವ. ಅನುಕೂಲವಿಲ್ಲ. ಇಂಟರ್ ತನಕ ಓದಿಸಿದೆ. ಮುಂದಕ್ಕೆ ಓದಿಸುವುದೂ ಸಾಧ್ಯವಾಗಲಿಲ್ಲ. ಮುಂಬಯಿ ಸಂಸಾರ."

"ಮಗ ಏನು ಮಾಡುತ್ತಿದ್ದಾನೆ."

"ರೂಯಿಯಾ ಕಾಲೇಜಿನಲ್ಲಿ ಓದುತ್ತಿದ್ದಾನೆ."

ಅಪ್ಪು ಹೊರಗಿನಿಂದ ಬರಲು ನಂಜುಂಡಯ್ಯ ಅವನ ಪರಿಚಯ ಮಹಾಬಲರಾಯನಿಗೆ ಮಾಡಿಕೊಟ್ಟು

"ಅಣ್ಣಯ್ಯ, ಒಳಗೆ ಎಲೆ ಹಾಕಿದೆಯೇನು ನೋಡು"

ಎಂದು ಹೇಳಿದ

ಮಹಾಬಲರಾಯನಿಗೆ ಪುಷ್ಕಳ ಭೋಜನವಾಯಿತು. ಸ್ವಲ್ಪ ಹೊತ್ತು ಅಲ್ಲಿಯೇ ವಿಶ್ರಾಂತಿ ಪಡೆದು, ನಂಜುಂಡಯ್ಯನೊಂದಿಗೆ ಹೋಟೆಲಿಗೆ ಹೋದ.

ಮಹಾಬಲರಾಯನನ್ನು ಕಂಡಕೂಡಲೆ ಹೋಟೆಲ್ ಮಾಲಿಕ

"ಸರ್, ನಿಮ್ಮ ಆಫೀಸಿನಿಂದ ಯಾರೋ ಹುಡುಕಿಕೊಂಡು ಬಂದಿದ್ದರು. ಊರಿನಿಂದ ನಿಮಗೆ ಟ್ರಂಕ್‌ಕಾಲ್ ಬಂದಿತ್ತಂತೆ"

ಎಂದು ತಿಳಿಸಿದ. ಮಹಾಬಲರಾಯನ ಜಂಘಾಬಲವೇ ಉಡುಗಿ

ಹೋದಂತಾಯಿತು. ಕೂಡಲೆ ನಂಜುಂಡಯ್ಯನೊಂದಿಗೆ ಆಫೀಸಿಗೆ ಹೋಗಿ ಬೆಂಗಳೂರಿಗೆ ಟ್ರಂಕ್‌ಕಾಲ್ ಮಾಡಿದ.

ಬೆಂಗಳೂರಿನಿಂದ ಟ್ರಂಕ್‌ಕಾಲ್‌ಗೆ ಉತ್ತರ ಬರಬೇಕಾದರೆ ಎರಡು ಗಂಟೆ ಕಾಯಬೇಕಾಯಿತು. ಆ ಕೊನೆಯಿಂದ ನಾಗೇಂದ್ರ ಮಾತನಾಡಿದ.

"ಏನು ನಾಗೇಂದ್ರ ಸಮಾಚಾರ?"

"ಊರಿಗೆ ಯಾವಾಗ ಬರುತ್ತೀ ಅಣ್ಣಾ?"

"ಏಕೆ? ಏನು ಸಮಾಚಾರ? ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೆ? ಪುಟ್ಟ ಹೇಗಿದ್ದಾಳೆ?"

"ಎಲ್ಲರೂ ಆರೋಗ್ಯ - ಚಿಕ್ಕಮ್ಮನ ಸ್ಥಿತಿ ತೃಪ್ತಿಕರವಾಗಿಲ್ಲ. ಗಾಬರಿಯಾಗಬೇಕಾದ ಕಾರಣವಿಲ್ಲ. ನೀನು ಬಂದರೆ ಒಳ್ಳೆಯದೆಂದು ಡಾಕ್ಟರು ಹೇಳಿದರು."

"ಬೆಳಿಗ್ಗೆ ಪ್ಲೇನಿನಲ್ಲಿ ಹೊರಟುಬರುತ್ತೇನೆ. ಏರೊಡ್ರೋಮಿಗೆ ಕಾರ್ ಕಳುಹಿಸಬೇಕು."

ಕೂಡಲೆ ಡರ್ಕ್ಕ ಏರ್ವೇಸ್ ಕಂಪೆನಿಗೆ ಫೋನ್ ಮಾಡಿ ಬೆಳಿಗ್ಗೆ ಒಂದು ಸೀಟ್ ಬೆಂಗಳೂರಿಗೆ ಬುಕ್ ಮಾಡಿಸಿದ.

"ನಾನು ಬೆಳಿಗ್ಗೆ ಹೊರಡಲೇಬೇಕಾಗಿದೆ ನಂಜುಂಡಯ್ಯನವರೇ, ಆಫೀಸಿನ ಕಡೆ ನೋಡಿಕೊಳ್ಳಿ. ಸದ್ಯದಲ್ಲೇ ನಾನು ಬಂದರೂ ಬರುತ್ತೇನೆ"

ಎಂದು ತಿಳಿಸಿ ಆಫೀಸಿನ ಕೆಲಸ ಯಾವ ರೀತಿಯಲ್ಲಿ ಮುಂದುವರಿಸಬೇಕೆಂಬುದರ ಬಗ್ಗೆ ನಂಜುಂಡಯ್ಯನವರಿಗೆ ಸೂಕ್ತ ಸಲಹೆಗಳನ್ನಿತ್ತ.

ಮಾರನೆಯ ಮಧ್ಯಾಹ್ನ ಹನ್ನೆರಡೂವರೆ ಗಂಟೆಗೆ ಬೆಂಗಳೂರು ಏರೋಡ್ರೋಮಿಗೆ ಮುಂಬಯಿಯಿಂದ ಪ್ಲೇನ್ ಬಂತು. ಡ್ರೈವರ್ ಕಾರ್ ತಂದಿದ್ದ.

ಮನೆಯೊಳಗೆ ಕಾಲಿಡಬೇಕಾದರೆ ಮಹಾಬಲರಾಯ ತನ್ನ ವಿಶಿಷ್ಟ ಮನೋಬಲವನ್ನು ಉಪಯೋಗಿಸಿಕೊಳ್ಳಬೇಕಾಯಿತು.

ಪುಟ್ಟತಾಯಿಯ ಹಾಸಿಗೆಯ ಬಳಿ ನಾಗೇಂದ್ರ, ಸುಲೋಚನ, ಲಕ್ಷ್ಮಮ್ಮ, ಡಾಕ್ಟರು ನಿಂತಿದ್ದರು. ಡಾಕ್ಟರು ಪುಟ್ಟತಾಯಿಗೆ ಆಕ್ಸಿಜನ್ ಗ್ಯಾಸ್ ಕೊಡುತ್ತಿದ್ದರು.

ಆಕ್ಸಿಜನ್ ಗ್ಯಾಸ್ ಪ್ರಯೋಗ ಮುಗಿದಮೇಲೆ ಮಹಾಬಲರಾಯ ಡಾಕ್ಟರನ್ನು ಹೊರಗೆ ಕರೆದು

"ಹೇಗಿದೆ ?"

"ನೋಡಬೇಕು. ನಮ್ಮ ಕೈಯಲ್ಲಾಗುವುದನ್ನು ಮಾಡುತ್ತಿದ್ದೇವೆ."

"ಪ್ರಾಣಕ್ಕೆ ಭಯವಿಲ್ಲವಷ್ಟೆ ?"

"ರೋಗಿ ತುಂಬ ದುರ್ಬಲವಾಗಿದ್ದಾರೆ. ಆಕ್ಸಿಜನ್ ಗ್ಯಾಸ್ ತಡೆದು ಕೊಳ್ಳುವ ಚೇತನವೂ ಇಲ್ಲ."

ಮಹಾಬಲರಾಯ ಒಳಗೆ ಬರಲು ನಾಗೇಂದ್ರ, ಸುಲೋಚನ, ಲಕ್ಷಮ್ಮ ಹೊರಗೆ ಬಂದರು.

ಮಹಾಬಲರಾಯ ಹೆಂಡತಿಯ ಹಾಸಿಗೆಯಮೇಲೆ ಕುಳಿತು ಬೆವರು ತ್ತಿದ್ದ ಅವಳ ಮುಖ ಒರಸಿ ಮೆಲ್ಲನೆ

"ಪುಟ್ಟೂ"

ಎಂದು ಕೂಗಿದ.

ಪುಟ್ಟತಾಯಿ ಕಣ್ಣು ಬಿಟ್ಟು ಗಂಡನನ್ನು ನೋಡಿ

"ಯಾವಾಗಬಂದಿರಿ ?"

ಎಂದಳು. ಅವಳ ಧ್ವನಿಯಲ್ಲಿ ಜೀವವೇ ಇರಲಿಲ್ಲ.

"ಇದೇ ಬಂದೆ."

"ಊಟಮಾಡಿದಿರಾ ?"

"ಮಾಡುತ್ತೇನೆ. ಏನು ಅವಸರ. ನಿನಗೆ ಹೇಗಿದೆ ?"

"ನನ್ನದು ಮುಗಿಯಿತೆಂದು ಕಾಣುತ್ತದೆ. ನೀವು ಬರಲಿ ಎಂದು ಈ ಜೀವ ಕಾಯುತ್ತಿತ್ತು."

"ಹಾಗನ್ನಬೇಡ ಪುಟ್ಟೂ—ಎಲ್ಲಾ ಸರಿಹೋಗುತ್ತದೆ."

"ಮಕ್ಕಳೆಲ್ಲಾ ಮನೆಯಲ್ಲಿದ್ದಾರೆಯೇ ?"

"ಇದ್ದಾರೆ."

"ಎಲ್ಲರನ್ನೂ ಕರೆಯಿರಿ."

ಮಹಾಬಲ ನಾಗೇಂದ್ರನನ್ನು ಕೂಗಿ ಮಕ್ಕಳೆಲ್ಲರನ್ನೂ ಬರಮಾಡು ವಂತೆ ಹೇಳಿದ.

ಪುಟ್ಟತಾಯಿ ಮಕ್ಕಳನ್ನು ಹತ್ತಿರ ಕರೆದು ನೇವರಿಸಿ ಮುದ್ದಿಟ್ಟಳು. ನಾಗೇಂದ್ರ, ಸುಲೋಚನ ನಮಸ್ಕಾರ ಮಾಡಿದರು. ಅವರನ್ನು ಹತ್ತಿರ ಕರೆದು ಮುಖದಡವಿದಳು.

ಎಲ್ಲರನ್ನೂ ಹೊರಗೆ ಹೋಗುವಂತೆ ಮಹಾಬಲ ಸೂಚಿಸಿದ. ಪುಟ್ಟ ತಾಯಿ ಗಂಡನನ್ನು ಹತ್ತಿರ ಕರೆದು ಅವನ ಕೈಹಿಡಿದು

"ಚಿಕ್ಕಮಕ್ಕಳ ಭಾರ ನಿಮ್ಮ ಹೆಗಲಮೇಲೆ ಹಾಕಿ ಹೋಗುತ್ತಿರುವೆ ಸಲ್ಲಾ ಎಂಬುದೊಂದೇ ನನಗೆ ದುಃಖ."

"ಹೋಗುವುದಕ್ಕೆ ನಿನ್ನನ್ನು ನಾನು ಬಿಡುವುದಿಲ್ಲ ಪುಟ್ಟೂ."

"ಸ್ವಾಮಿ, ನಿಮ್ಮನ್ನು ಬಿಟ್ಟು ಹೋಗುವುದಕ್ಕೆ ನಾನು ಆತುರಳಾಗಿದ್ದೇನೆಂದು ಭಾವಿಸುವಿರಾ ? ಆದರೆ....ವಿಧಿಯಿಲ್ಲ"

ಮಹಾಬಲರಾಯನ ಕರುಳು ಕಿತ್ತು ಬರುತ್ತಿತ್ತು. ಉಮ್ಮಳಿಸಿ ಬರುತ್ತಿದ್ದ ತನ್ನ ದುಃಖವನ್ನು ಉಪಶಮನಮಾಡಲು ಪ್ರಯತ್ನಿಸುತ್ತಿದ್ದ.

"ಸ್ವಲ್ಪ ನಿಮ್ಮ ಪಾದಗಳನ್ನು ಇತ್ತಕೊಡಿ."

ಎಂದು ಕೇಳಿದಳು. ಮಹಾಬಲ ಸುಮ್ಮನಿದ್ದುದನ್ನು ಕಂಡು

"ಅನುಮಾನಿಸಬೇಡಿ. ಕಾಲವಿಳಂಬ ಮಾಡುವ ಹಾಗಿಲ್ಲ."

ಮಹಾಬಲ ತನ್ನ ಪಾದಗಳನ್ನು ಪುಟ್ಟತಾಯಿಯ ತಲೆಯಬಳಿ ಇಟ್ಟ. ಪುಟ್ಟತಾಯಿ ಅದನ್ನಪ್ಪಿ ಕಣ್ಣೀರಿನಿಂದ ತೊಳೆದಳು. ಪಾದಗಳ ಮೇಲೆ ಮಲಗಿ

"ಎಷ್ಟು ಶಾಂತವಾಗಿದೆ. ಮಗು ತಾಯಿ ತೊಡೆಯಮೇಲೆ ಮಲಗಿದ ಹಾಗಿದೆ. ನೀವು ಹೋದಂದಿನಿಂದಲೂ ನಿದ್ದೆಯೇ ಇಲ್ಲ. ಇವತ್ತು ತುಂಬಾ ನಿದ್ದೆ ಬರುತ್ತಿದೆ."

ಮಹಾಬಲ ಮಾತನಾಡದೆ ಅವಳ ತಲೆಯನ್ನು ನೇವರಿಸಿದ.

ಮಹಾಬಲನ ಪಾದಗಳ ಮೇಲೆ ತಲೆಯಿಟ್ಟು ಪುಟ್ಟತಾಯಿ ನಿದ್ದೆ ಹೋದಳು.

ಆ ನಿದ್ದೆಯಿಂದ ಅವಳಿಗೆ ಎಚ್ಚರವಾಗಲಿಲ್ಲ.

೩೩

ಪುಟ್ಟತಾಯಿ ತೀರಿಕೊಂಡು ಮೂರು ತಿಂಗಳಾದರೂ ಮಹಾಬಲನ ಮನಸ್ಸು ಪೂರ್ವಸ್ಥಿತಿಗೆ ಬಂದಿರಲಿಲ್ಲ. ಅಂಗಡಿಗೂ ಹೋಗುತ್ತಿರಲಿಲ್ಲ.

ಮಿಲ್ ಕಡೆಯೂ ಹೋಗುತ್ತಿರಲಿಲ್ಲ. ಅಂಜನಪ್ಪ, ಉಮಾಪತಿ, ಸುಬ್ಬು ಕೃಷ್ಣ ಆಗಾಗ್ಗೆ ಬಂದು ಅವನನ್ನು ಹೊರಗೆಳೆದುಕೊಂಡು ಹೋಗುತ್ತಿದ್ದರು. ಅವರ ಜತೆಯಿದ್ದಾಗ ದುಃಖ ಸ್ವಲ್ಪ ಮರೆತಂತೆ ಆಗುತ್ತಿತ್ತು. ಮನೆಗೆ ಬಂದೊಡನೆಯೇ - ಮಕ್ಕಳ ಮುಖ ನೋಡಿದೊಡನೆಯೇ - ದುಃಖ ಮರು ಕಳಿಸುತ್ತಿತ್ತು.

ಮಹಾಬಲ ಪುಟ್ಟತಾಯಿಯ ರೂಮಿನಲ್ಲಿ ಏಕಾಂಗಿಯಾಗಿ ಕುಳಿತು ಯೋಚಿಸುವನು. ಕೊನೆಯರಿಯದ ಯೋಚನೆ. ಪುಟ್ಟತಾಯಿಯ ತ್ಯಾಗ ಮಯ ಜೀವನ, ಅವಳ ಪತಿಭಕ್ತಿ, ವಿಶಾಲ ಅಂತಃಕರಣ ಅವನ ಮನಸ್ಸಿನ ಮೇಲೆ ಅಲೆಗಳಂತೆ ಅಪ್ಪಳಿಸುತ್ತಿದ್ದವು. ದುಃಖ ತಡೆಯಲಾಗದಂತಾದಾಗ ಸುಂದರಮೂರ್ತಿಯನ್ನು ಹತ್ತಿರ ಕರೆದು, ಅವನನ್ನಪ್ಪಿ ಕಣ್ಣೀರ್ಗರೆಯುವನು.

ಮೂರು ತಿಂಗಳು ಮಹಾಬಲನಲ್ಲಿ ಅಸಾಧಾರಣ ಮಾರ್ಪಾಟನ್ನುಂಟು ಮಾಡಿತ್ತು. ಅವನ ತಲೆಗೂದಲು ಅಲ್ಲಲ್ಲಿ ಬೆಳ್ಳಗಾಗುತ್ತಿತ್ತು. ದೃಷ್ಟಿ ಸ್ವಲ್ಪ ಮಂದವಾಗಿತ್ತು. ಬೆನ್ನು ಬಾಗಲಾರಂಭಿಸಿತ್ತು.

ಮಹಾಬಲನ ಅವಸ್ಥೆ ನೋಡಲಾರದೆ ಒಂದು ದಿನ ಸುಬ್ಬುಕೃಷ್ಣ

"ಇಲ್ಲಿ ಕೂತುಕೊಂಡು ಏನುಮಾಡುತ್ತಿರುವೆ ಮಹಾಬಲ?"

"ಏನು ಮಾಡಬೇಕಾಗಿತ್ತು?"

"ಹೀಗೆ ನೀನು ಕೊರಗಿ ಅರೆಜೀವ ಕೊರೆಜೀವ ಆಗುವುದನ್ನು ನೋಡ ಲಾರೆನಪ್ಪಾ"

"ಕರ್ಮಫಲ ಉಂಡೇ ಅನುಭವಿಸಬೇಕು."

"ಇಂಥ ದುಃಖದ ಸಮಯದಲ್ಲಿ ಹೇಳುವ ಮಾತಲ್ಲ—ಆದರೆ ಹೇಳದೆ ನಿರ್ವಾಹವಿಲ್ಲ."

"ಹೇಳು ಸುಬ್ಬುಕೃಷ್ಣ ಚಿಂತೆಯಿಲ್ಲ. ನೀನು ಏನು ಹೇಳಿದರೂ ನನ್ನ ಒಳ್ಳೆಯದಕ್ಕೇ ಎಂಬುದನ್ನು ಬಲ್ಲೆ."

"ನೀನು ಎರಡು ಕೆಲಸ ಕೂಡಲೆ ಮಾಡಬೇಕು."

"ಏನದು?"

"ಮೊದಲನೆಯದು—ಈ ಊರು ಬಿಟ್ಟು ಹೊರಡಬೇಕು. ಈ ವಾತಾ ವರಣದಲ್ಲಿ ನೀನಿರುವವರೆಗೆ ನಿನ್ನ ಮನಸ್ಸು ಶಾಂತವಾಗುವುದಿಲ್ಲ."

"ಎಲ್ಲಿಗೆ ಹೋಗಲಿ. ಎಲ್ಲಿ ಹೋದರೆ ಪುಟ್ಟೊ ಸಿಕ್ಕುತ್ತಾಳೆ."

"ಆ ಭ್ರಮೆ ನಿನಗೆ ಹೋಗದಲ್ಲ. ಹುಟ್ಟಿದವರು ಒಂದು ದಿನ ಸಾಯಲೇ ಬೇಕಲ್ಲವೇ ?"

"ನಿಜ—ಆದರೆ ಪುಟ್ಟೊಗಿಂತ ವಯಸ್ಸಿನಲ್ಲಿ ನಾನು ಹಿರಿಯನಲ್ಲವೇ ?"

"ಅದಕ್ಕೆ ಈಗ ಆತ್ಮಹತ್ಯಮಾಡಿಕೊಳ್ಳುತ್ತಿರುವೆಯೇನೋ ?"

"ಆತ್ಮಹತ್ಯ ಎಲ್ಲಿ ಮಾಡಿಕೊಳ್ಳುತ್ತಿದ್ದೇನೆ."

"ಇನ್ನೇನು ಹೀಗೆ ಕೊರಗಿದರೆ ಆತ್ಮಹತ್ಯಮಾಡಿಕೊಂಡಂತೆ. ಮಕ್ಕಳನ್ನು ನೋಡಿ ನಿನ್ನ ದುಃಖ ಮರೆಯಬೇಕು. ನಿನ್ನ ಕರ್ತವ್ಯ ಇನ್ನೂ ಮುಗಿದಿಲ್ಲ. ಮಕ್ಕಳಿಗೆ ಮುಂಜಿ ಮದುವೆ ಆಗಬೇಕು."

"ನಾನು ಕರ್ತವ್ಯಮೂಢನಾಗಿದ್ದೇನೆ ಸುಬ್ಬು — ಏನು ಮಾಡಲಿ ಹೇಳು"

"ಮುಂಬಯಿಯಲ್ಲಿ ಹೇಗೂ ಬ್ರ್ಯಾಂಚ್ ಆಫೀಸ್ ಸ್ಥಾಪಿಸಿ ಬಂದಿರುವೆ. ಸದ್ಯ ಅಲ್ಲಿಯೇ ಹೋಗಿರು. ನಾಲ್ಕಾರು ತಿಂಗಳು ಕಳೆಯಲಿ. ದುಃಖ ಸ್ವಲ್ಪ ಉಪಶಮನವಾದಮೇಲೆ ಹಿಂದಿರುಗುವೆಯಂತೆ. ನೀನು ಅಲ್ಲಿದ್ದರೆ ಹೊಸ ಆಫೀಸಿಗೂ ಜೀವ ಬರುತ್ತದೆ."

"ಮಕ್ಕಳನ್ನು ಬಿಟ್ಟು ಹೇಗೆ ಹೋಗಲಿ."

"ಅವರ ಸಲುವಾಗಿಯೇ ನೀನು ಹೋಗಬೇಕಾಗಿದೆ. ಲಕ್ಷಮ್ಮನವರು ಅವರ ಯೋಗಕ್ಷೇಮ ನೋಡಿಕೊಳ್ಳುತ್ತಾರೆ. ನಾಗೇಂದ್ರ, ಸುಲೋಚನ ಇರುತ್ತಾರಲ್ಲಾ........"

"ಆಯಿತು, ಎರಡನೆಯದು."

"ಪುಟ್ಟತಾಯಮ್ಮ ಬದುಕಿದ್ದಾಗ ಹಲವುಸಾರಿ ಅಮ್ಮನ ಹತ್ತಿರ ನೀನು ಇನ್ನೊಂದು ಮದುವೆ ಮಾಡಿಕೊಳ್ಳುವ ವಿಷಯ ಪ್ರಸ್ತಾಪಿಸಿದ್ದರಂತೆ. ನಿನ್ನ ಹತ್ತಿರವೂ ಹೇಳಿದ್ದರಂತೆ."

"ಹೌದು, ಹೇಳಿದ್ದಳು. ಅವಳ ಮಾತು ನಾನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಇಂದೂ ಹಾಕಿಕೊಳ್ಳುವಹಾಗಿಲ್ಲ."

"ಹಿಂದಿನ ವಿಷಯ ಬೇರೆ, ಈಗಿನ ವಿಷಯ ಬೇರೆ."

"ಆ ವಿಷಯ ಒಂದೂ ಪ್ರಸ್ತಾಪಮಾಡಬೇಡ ಸುಬ್ಬುಕೃಷ್ಣ."

“ಹೋಗಲಿ ಬಿಡಪ್ಪಾ. ಮುಂಬಯಿಗೆ ಹೋಗುವ ವಿಷಯ ಏನು ಮಾಡುತ್ತೀ ?”

“ಹೋಗುತ್ತೇನೆ”

ಎಂದು ಹೇಳಿದ. ಹಾಗೂ ಹೀಗೂ ಒಂದು ವಾರ ತಳ್ಳಿಹೋಯಿತು. ಸುಬ್ಬುಕೃಷ್ಣ ಯಜಮಾನ್ಯ ವಹಿಸಿ, ಮಹಾಬಲನನ್ನು ಮುಂಬಯಿಗೆ ಹೊರಡಿಸಬೇಕಾಯಿತು.

ಸದ್ಯಕ್ಕೆ ‘ಮಾಡರ್ನ್ ಹಿಂದೂ ಹೊಟೇಲಿ’ನಲ್ಲಿಯೇ ಇರುವುದೆಂದು ಮಹಾಬಲ ನಿಶ್ಚಯಿಸಿದ.

ಮಹಾಬಲ ಕಾಲಕಾಲಕ್ಕೆ ಪತ್ರ ಬರೆದು ಸುಬ್ಬುಕೃಷ್ಣನಿಗೆ ತನ್ನ ಯೋಗಕ್ಷೇಮ ತಿಳಿಸದಿದ್ದರೂ ನಾಗೇಂದ್ರನಿಂದ ಯೋಗಕ್ಷೇಮ ಅವನಿಗೆ ಗೊತ್ತಾಗುತ್ತಿತ್ತು. ನಂಜುಂಡಯ್ಯ ಮುಂಬಯಿಯಿಂದ ಪತ್ರ ಬರೆದು ಯಜಮಾನರ ಆರೋಗ್ಯಭಾಗ್ಯದ ವಿಷಯ ತಿಳಿಸುತ್ತಿದ್ದರು.

ಮಹಾಬಲ ಮುಂಬಯಿಗೆ ಹೋಗಿ ನಿಂತಮೇಲೆ ಬ್ರ್ಯಾಂಚ್ ಆಫೀಸಿಗೆ ಜೀವ ಬಂದಿತು. ಬ್ರ್ಯಾಂಚ್ ಆಫೀಸು ಹಲವು ಮುಖದಲ್ಲಿ ಬೆಳೆಯತೊಡಗಿತು. ಆರು ತಿಂಗಳಲ್ಲಿ ಮುಂಬಯಿ ವ್ಯಾಪಾರಸ್ಥರ ಗಡಣದಲ್ಲಿ ಸಮಾನಸ್ಥಾನ ದೊರಕಿಸಿಕೊಂಡಿತು.

ಮಹಾಬಲ ಹೊಟೇಲ್‌ವಾಸ ಬಿಟ್ಟು ಖಾರ್‌ನಲ್ಲಿ ಒಂದು ಮನೆ ಬಾಡಿಗೆಗೆ ತೆಗೆದುಕೊಂಡ. ಊಟವನ್ನು ಆಫೀಸಿಗೇ ಮಾಡರ್ನ್ ಹಿಂದೂ ಹೊಟೇಲಿನಿಂದ ತರಿಸಿಕೊಳ್ಳುತ್ತಿದ್ದ. ಆಗಾಗ್ಗೆ ನಂಜುಂಡಯ್ಯ ಬಲವಂತಮಾಡಿ ಮಹಾಬಲನನ್ನು ತನ್ನ ಮನೆಗೆ ಊಟಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಮುಂಬಯಿ ಜೀವನದ ಗಡಿಬಿಡಿ ಮಹಾಬಲನಿಗೆ ಚೆನ್ನಾಗಿ ಒಗ್ಗುತ್ತಾ ಬಂದಿತು.

## ೩೪

ನಂಜುಂಡಯ್ಯನವರಿಗೆ ವಿವಾಹವಯಸ್ಕಳಾದ ಮಗಳಿರುವ ಸಂಗತಿ ಸುಬ್ಬುಕೃಷ್ಣನಿಗೆ ಚೆನ್ನಾಗಿ ಗೊತ್ತಿತ್ತು. ತಾಯಿಯ ಜತೆ ವಿಚಾರಮಾಡಿ ನಂಜುಂಡಯ್ಯನಿಗೆ ಒಂದು ಕಾಗದ ಬರೆದ.

“ನಿಮ್ಮ ಮಗಳು ರಂಗನಾಯಕಿಗೆ ವರ ಹುಡುಕುವ ವಿಷಯ

ನೀವು ಹೇಳಿದ್ದುದು ನೆನಪಿರಬಹುದು. ನಾನೂ ಮಾತೃಶ್ರೀಯವರೂ ವಿಚಾರಮಾಡಿ ಒಂದು ನಿರ್ಧಾರಕ್ಕೆ ಬಂದಿದ್ದೇವೆ. ನೀವೂ ನಿಮ್ಮ ಕುಟುಂಬ ಈ ಬಗ್ಗೆ ಯೋಚನೆಮಾಡಿ ತಿಳಿಸಿದರೆ ಮುಂದಿನ ಕಾರ್ಯ ಸಂತೋಷವಾಗಿ ಕೈಗೊಳ್ಳುತ್ತೇನೆ.

"ಈಗ ನಿಮ್ಮ ಧಣಿಗಳಾಗಿರುವ ಮಹಾಬಲರಾಯರ ವಿಷಯ ನಾನು ವಿಶೇಷವಾಗಿ ಪ್ರಸ್ತಾಪಿಸಬೇಕಾಗಿಲ್ಲ. ನಾನೂ ಅವರೂ ಜತೆಯಲ್ಲಿ ಬೆಳೆದವರು. ಅಂಥ ಸಾತ್ವಿಕ ವ್ಯಕ್ತಿಯನ್ನು ನಾನು ಇದುವರೆಗೆ ನೋಡಿಲ್ಲ. ಈಗ್ಗೆ ಸುಮಾರು ಹತ್ತು ತಿಂಗಳ ಹಿಂದೆ ಅವರ ಕುಟುಂಬ ತೀರಿಕೊಂಡರು. ಮಹಾಬಲರಾಯರು ಮುಂಬಯಿಗೆ ಬರುವ ಮುನ್ನ ಪುನರ್ವಿವಾಹದ ವಿಷಯ ನಾನು ಪ್ರಸ್ತಾಪಿಸಿದೆ. ಅವರು ಸಾಧ್ಯವಿಲ್ಲವೆಂದರು. ಈಗ ಹತ್ತು ತಿಂಗಳು ಕಳೆದಿವೆ. ಪುನಃ ಪ್ರಸ್ತಾಪಮಾಡೆಂದರೆ ಮಾಡುವುದಕ್ಕೆ ನಾನು ಸಿದ್ಧನಾಗಿದ್ದೇನೆ. ಮೂರನೆಯ ಮದುವೆಗೆ ಮಗಳನ್ನು ಕೊಡಬೇಕು ಎನ್ನುವ ಚಿಂತೆಯಿಲ್ಲದಿದ್ದರೆ, ಮಹಾಬಲರಾಯರ ಸಂಬಂಧ ಬೆಳೆಸುವ ಯೋಚನೆ ಮಾಡುವುದು ಒಳ್ಳೆಯದು. ನಿಮ್ಮ ಹುಡುಗಿ ಒಳ್ಳೆಯ ಪುಣ್ಯಾತ್ಮನಕೈಹಿಡಿದು ಸಂತೋಷವಾಗಿರುತ್ತಾಳೆ-ಎಂದು ನಾನು ಧೈರ್ಯವಾಗಿ ಹೇಳಬಲ್ಲೆ.

"ನೀವು ಒಪ್ಪಿಗೆಯ ಪತ್ರ ಬರೆದರೆ ನಾನು ಮಹಾಬಲರಾಯರಿಗೆ ಬರೆದು ಅವರ ಮನಸ್ಸನ್ನರಿತುಕೊಳ್ಳುತ್ತೇನೆ."

ಸುಬ್ಬುಕೃಷ್ಣನ ಕಾಗದ ನೋಡಿ ನಂಜುಂಡಯ್ಯ ವಿಸ್ಮಯಗೊಂಡರು. ಸಂಜೆ ಮನೆಗೆ ಬಂದಾಗ ಹೆಂಡತಿಯನ್ನು ಕರೆದು ಪತ್ರವನ್ನು ಆಕೆಯ ಕೈಯಲ್ಲಿಟ್ಟರು.

ಸುಬ್ಬಮ್ಮ ಪತ್ರವನ್ನು ನಾಲ್ಕೈದು ಸಲ ಓದಿಕೊಂಡು

"ಏನು ಯೋಚನೆ ಮಾಡಿದ್ದೀರಿ."

ಎಂದು ಗಂಡನನ್ನು ಕೇಳಿದರು.

"ಏನು ಯೋಚನೆಮಾಡಬೇಕೆಂಬುದೇ ತಿಳಿಯದಾಗಿದೆ. ನಮ್ಮ ಕಷ್ಟ ಪರಿಹಾರ ಇಷ್ಟು ಸುಲಭವಾಗಿ ಆಗುತ್ತದೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ."

"ಸುಬ್ಬುಕೃಷ್ಣಯ್ಯನವರಿಗೆ ಉತ್ತರ ಏನೆಂದು ಬರೆಯುವಿರಿ?"

"ನೀನು ಒಪ್ಪುವುದಾದರೆ ಆಗಲೆಂದು ಬರೆಯುತ್ತೇನೆ."

"ಇನ್ನೂ ಒಪ್ಪದಿದ್ದರೆ ಮಗಳ ತಲೆಯ ಮೇಲೆ ನಾವೇ ಕಲ್ಲು ಎತ್ತಿಹಾಕಿದಂತಾಗುತ್ತದೆ."

"ರಂಗನಾಯಕಿ ಏನನ್ನುವಳೋ ?"

"ಅವಳನ್ನು ಒಪ್ಪಿಸುವ ಭಾರ ನನಗಿರಲಿ"

ನಂಜುಂಡಯ್ಯ, ಅವರ ಕುಟುಂಬದ ಒಪ್ಪಿಗೆ ದೊರಕುವ ವಿಷಯದಲ್ಲಿ ಸುಬ್ಬುಕೃಷ್ಣ ತುಂಬ ನಂಬಿಕೆಯನ್ನಿಟ್ಟುಕೊಂಡಿರಲಿಲ್ಲ. ನಂಜುಂಡಯ್ಯನವರ ಕಾಗದವನ್ನು ತಾಯಿಗೆ ಓದಿ ಹೇಳಿದಾಗ, ಅಂಬುಜಮ್ಮನವರು ಸಂತೋಷಪಟ್ಟುಕೊಂಡು

"ಹುಡುಗಿ ಅದೃಷ್ಟ ಚೆನ್ನಾಗಿತ್ತು. ಕಾದದ್ದಕ್ಕೂ ಒಳ್ಳೆಯ ಗಂಡನೇ ಸಿಕ್ಕಿದ."

ಎಂದು ಹೇಳಿದರು.

"ಎಲ್ಲಾ ಮುಗಿದುಹೋದ ಹಾಗೆ ಮಾತನಾಡುವೆಯಲ್ಲಮ್ಮ. ಮಹಾಬಲ ಒಪ್ಪಬೇಡವೇ ?"

"ಅವನನ್ನು ಒಪ್ಪಿಸುವ ಭಾರ ನಿನ್ನದು. ಒಂದು ದಿವಸ ಪುರಸತ್ತು ಮಾಡಿಕೊಂಡು ನೀನು ಬೊಂಬಾಯಿಗೆ ಹೋಗಿ ಈ ಮದುವೆ ಕುದುರಿಸಿಕೊಂಡು ಬಂದುಬಿಡು."

"ನಾಗೇಂದ್ರ ಏನು ಹೇಳುತ್ತಾನೆಯೋ ?"

"ಅವನನ್ನು ಒಪ್ಪಿಸುವ ಭಾರ ನನಗಿರಲಿ. ನೀನು ಬೊಂಬಾಯಿಯಿಂದ ಕಾಗದ ಬರೆದಮೇಲೆ ನಾನು ನಾಗೇಂದ್ರನ ಜತೆಯಲ್ಲಿ ಮಾತನಾಡುತ್ತೇನೆ."

"ನಾನು ಹೋಗುವ ಮೊದಲು ಮಹಾಬಲನಿಗೆ ಒಂದು ಕಾಗದ ಬರೆದು ಅವನ ಅಭಿಪ್ರಾಯ ತಿಳಿದುಕೊಳ್ಳುವುದು ಮೇಲಲ್ಲವೇ ?"

"ಇದೆಲ್ಲಾ ಕಾಗದ ಪತ್ರದಲ್ಲಿ ಆಗುವ ವಿಷಯವಲ್ಲ ಕಣೋ ಸುಬ್ಬೂ. ನೀನು ಮೀನಮೇಷ ಎಣಿಸದೆ ಬೊಂಬಾಯಿಗೆ ಹೋಗಿ ಬಿಟ್ಟು ಬಾ."

ಸುಬ್ಬುಕೃಷ್ಣ ತಾಯಿ ಮಾತು ಮೀರಲಾರದೆ ಬೊಂಬಾಯಿಗೆ ಹೊರಟು ನಿಂತ.

ಸುಬ್ಬುಕೃಷ್ಣ ಬೊಂಬಾಯಿಗೆ ಬರುವ ವಿಷಯ ತಿಳಿದು ಮಹಾಬಲ

ನಂಜುಂಡಯ್ಯ ಇಬ್ಬರೂ ತುಂಬ ಸಂತೋಷಭರಿತರಾದರು. ಸುಬ್ಬುಕೃಷ್ಣ ಮಹಾಬಲನ ಜತೆಯಲ್ಲಿಯೇ ಇರುವುದೆಂದು ನಿರ್ಧರವಾಯಿತು.

ಸುಬ್ಬುಕೃಷ್ಣನಿಗೆ ಬೊಂಬಾಯಿ ತೋರಿಸುವ ಸಂಭ್ರಮದಲ್ಲಿ ಎರಡು ದಿವಸಗಳು ಕಳೆದುಹೋದವು. ಈ ಮಧ್ಯೆ ಅವನು ನಂಜುಂಡಯ್ಯನವರೊಂದಿಗೆ ಮಾತನಾಡಿ ಅವರ ಅಭಿಪ್ರಾಯ ತಿಳಿದುಕೊಂಡಿದ್ದ.

ಮೂರನೆಯ ದಿವಸ ರಾತ್ರಿ ಮಹಾಬಲ ಸುಬ್ಬುಕೃಷ್ಣ ಇಬ್ಬರೂ ಮಾಡರ್ನ್ ಹಿಂದೂ ಹೊಟೇಲಿನಲ್ಲಿ ಊಟ ಮುಗಿಸಿಕೊಂಡು ಮನೆಗೆ ಬಂದು ತಲುಪಿದರು. ವರಾಂಡದಲ್ಲಿ ಇಬ್ಬರೂ ಹರಟೆಕೊಚ್ಚುತ್ತಾ ಕುಳಿತಾಗ ಸುಬ್ಬುಕೃಷ್ಣ ಇದ್ದಕ್ಕಿದ್ದಂತೆ

"ನಾನು ನಾಳೆ ಹೊರಡುತ್ತೇನೆ ಮಹಾಬಲ"

ಎಂದ. ಮಹಾಬಲನಿಗೆ ಸೋಜಿಗವಾಯಿತು.

"ನಾಲ್ಕುದಿವಸ ಪುರಸತ್ತುಮಾಡಿಕೊಂಡು ಬರದೆ, ಇದೇನಯ್ಯಾ ಹೀಗೆ ಬಂದು ಹೀಗೆ ಹಾರುವುದು."

"ನಾಲ್ಕು ದಿವಸ ಇರುವ ಉದ್ದೇಶದಿಂದಲೇ ಬಂದೆ."

"ಹಾಗಾದರೆ........"

"ಈ ಹೊಟೇಲ್ ಊಟ ತಿನ್ನಲಾರದೆ ಊರಿಗೆ ಹೊರಟಿದ್ದೇನೆ."

"ಏನು ಮಾಡಲಪ್ಪಾ ನನ್ನ ಹಣೇಬರಹ. ಅಪರೂಪಕ್ಕೆ ನೀನು ಬಂದರೆ ಮನೆಯಲ್ಲಿ ಒಂದು ತುತ್ತು ಅನ್ನ ಹಾಕುವ ಯೋಗ್ಯತೆ ನನಗಿಲ್ಲ."

"ಯೋಗ್ಯತೆ ಏಕಿಲ್ಲ? ನಿನ್ನ ದಾರಿಯೇ ನಿನ್ನದು. ನಿನಗ ಯಾರು ಹೇಳುವುದಕ್ಕೆ ಸಾಧ್ಯ?"

"ನಾನೇನಯ್ಯ ಅಂಥ ಅಪರಾಧ ಮಾಡಿದ್ದು?"

"ಹೀಗೆ ಎಷ್ಟು ದಿನ ತಳ್ಳುತ್ತೀ ಮಹಾಬಲ?"

"ನನ್ನ ಏನು ಮಾಡುಮಾಡೂಂತೀ?"

"ಮದುವೆ ಮಾಡಿಕೊಳ್ಳುವುದು ಸೂಕ್ತವೆಂದು ಕಾಣುತ್ತದೆ. ಅಮ್ಮನೂ ಅದನ್ನೇ ಹೇಳಿಕಳುಹಿಸಿದ್ದಾರೆ."

"ನನಗೆ ಯಾರಯ್ಯಾ ಹೆಣ್ಣುಕೊಡಲು ಸಿದ್ಧರಾಗಿದ್ದಾರೆ."

"ಸಿದ್ಧರಾಗಿದ್ದರೆ ನೀನು ಮದುವೆಮಾಡಿಕೊಳ್ಳುವೆಯಾ?"

"ಯಾರು ಹೇಳು ನೋಡೋಣ. ನೀನು ಲಾಯರು ನಿಜ. ನನ್ನನ್ನೇತಕ್ಕೆ ಮಾತಿನಲ್ಲಿ ಸಿಕ್ಕಿಸಿಕೊಳ್ಳುವೆ ?"

"ಅಂಥದೇನೂ ಇಲ್ಲ ಮಹಾಬಲ. ನಾನು ಬೊಂಬಾಯಿಗೆ ಬಂದ ಉದ್ದೇಶವೇ ನಿನ್ನ ಒಪ್ಪಿಗೆ ದೊರಕಿಸುವುದಕ್ಕೆ."

"ಮನೆಯಲ್ಲಿ ಬೆಳೆದ ಮಗ ಇದ್ದಾನಪ್ಪಾ !"

"ಅವನನ್ನು ಒಪ್ಪಿಸುವ ಜವಾಬ್ದಾರಿ ಅಮ್ಮ ಒಪ್ಪಿಕೊಂಡಿದ್ದಾರೆ."

"ನನಗೆ ಯಾವ ಸಂಬಂಧ ಕೂಡಿಸಿದ್ದೀ ಹೇಳು."

"ನನ್ನ ರಾಯಭಾರ ನಿಷ್ಫಲವಾದರೆ ಅಮ್ಮ ಕೋಪಮಾಡಿಕೊಳ್ಳುತ್ತಾರೆ."

ಮಹಾಬಲನಿಗೆ ಮಹಾಸಮಸ್ಯೆ ಬಂದು ಎದುರಿಗೆ ನಿಂತಂತಾಯಿತು. ಏನುಮಾಡಬೇಕೆಂಬುದು ತೋರಲಿಲ್ಲ. ಮನಸ್ಸು ಅಸ್ಥಿರವಾಯಿತು. ಅವನ ತೊಳಲಾಟ ನೋಡಿ ಸುಬ್ಬುಕೃಷ್ಣ

"ಮಹಾಬಲ, ನಿನಗೆ ಅಸುಖವಾಗಬೇಕೆಂದು ನಾನಾಗಲಿ ಅಮ್ಮನಾಗಲಿ ಯಾವಾಗಲಾದರೂ ಬಯಸುತ್ತೇವೆಯೇ ?"

"ಛೆ ! ಛೆ ! ಏನು ಮಾತು ಸುಬ್ಬೂ ! ನಿನ್ನ ತಾಯಿ ನನಗೆ ಹೊರಗಿನವರೇ. ನಿನ್ನನ್ನು ಹೇಗೆ ಅವರು ಸಾಕಿ ಸಲಹಿದ್ದಾರೆಯೋ ಹಾಗೇ ನನ್ನನ್ನೂ ಸಾಕಿ ಸಲಹಲಿಲ್ಲವೇ ?"

"ಅವರ ಹಿತವಚನಕ್ಕೆ ನೀನು ಕಿವಿಗೊಡುವುದರಿಂದ ನಿನಗೆ ತೊಂದರೆಯಾಗಲಾರದು."

"ಇಲ್ಲ—ಹೇಳು."

"ನಿನ್ನ ಆಫೀಸು ಮ್ಯಾನೇಜರಾಗಿರುವ ನಂಜುಂಡಯ್ಯನವರಿಗೆ ಬೆಳೆದ ಮಗಳು ಒಬ್ಬಳಿದ್ದಾಳೆ ನೋಡಿದ್ದೀಯಾ ?"

"ನೋಡಿದ್ದೇನೆ."

"ನೀನು ಅಭ್ಯಂತರವಿಲ್ಲವೆಂದರೆ ಈ ಲಗ್ನ ಕುದುರಿಸಬಹುದು."

"ನಂಜುಂಡಯ್ಯನವರನ್ನು ಕೇಳಿ ನೋಡಿದ್ದೀಯಾ ?"

"ಇಲ್ಲಿಗೆ ಬರುವ ಮೊದಲು ಅವರಿಗೆ ಕಾಗದ ಬರೆದು ಅವರ ಒಪ್ಪಿಗೆ ದೊರಕಿಸಿಕೊಂಡೇ ಹೊರಟೆ."

"ಅಮ್ಮನಿಗೆ ಈ ಮದುವೆ ಸಮ್ಮತವೇ ?"

"ನನ್ನನ್ನು ಹೊರಡಿಸಿದವರು ಅವರೇ. ನಿನಗೆ ಕಾಗದ ಬರಿಯುತ್ತೇನೆಂದೆ. ಬೇಡ—ನೀನೇ ಹೋಗಿ ಬಾ ಎಂದು ಕಳುಹಿಸಿದರು."

ಮಹಾಬಲ ಯೋಚನೆಮಾಡಿ

"ನನಗೆ ಒಂದೆರಡು ದಿನ ಅವಕಾಶಕೊಡು ಸುಬ್ಬೂ—ಯೋಚನೆ ಮಾಡಿ ಹೇಳುತ್ತೇನೆ."

ಸುಬ್ಬುಕೃಷ್ಣ ಅದಕ್ಕೆ ಒಪ್ಪಲೇಬೇಕಾಯಿತು.

ಎರಡು ದಿವಸ ಮಹಾಬಲ ಸತತವಾಗಿ ಆಲೋಚನೆಮಾಡಿದ. ಪ್ರಕೃತ ಪರಿಸ್ಥಿತಿಯಲ್ಲಿ ಸುಬ್ಬುಕೃಷ್ಣನ ಸಲಹೆಯನ್ನು ಅಂಗೀಕರಿಸಿ ಮಕ್ಕಳನ್ನು ತಾನಿದ್ದಲ್ಲಿ ಬರಮಾಡಿಕೊಳ್ಳುವುದೇ ಸೂಕ್ತವೆಂದು ತೋರಿತು.

ಅವನ ಒಪ್ಪಿಗೆಯನ್ನು ಸುಬ್ಬುಕೃಷ್ಣ ಕೂಡಲೇ ತಾಯಿಗೆ ತಾರುಮಾಡಿ ತಿಳಿಸಿದ. ಮಾರನೆಯ ದಿನವೇ ಸುಬ್ಬುಕೃಷ್ಣನ ವಿಳಾಸಕ್ಕೆ ಮರುತಾರು ಬಂದಿತು.

"ಎಂಟುದಿನ ನಿಂತರೂ ಚಿಂತೆಯಿಲ್ಲ. ಮದುವೆ ಮುಗಿಸಿಕೊಂಡೇ ಬಾ"

ಎಂದು ತಾಯಿ ಸೂಚಿಸಿದ್ದರು.

ಕಲ್ಯಾಣದ ದೇವಾಲಯವೊಂದರಲ್ಲಿ ಹೆಚ್ಚು ಗಲಭೆಯಿಲ್ಲದೆ ವಿವಾಹ ಸಾಂಗವಾಗಿ ನೆರವೇರಿತು. ಊರಿಂದ ಉಮಾಪತಿ, ಅಂಜನಪ್ಪ ಅಂಬುಜಮ್ಮನವರು ಅಭಿನಂದನಾ ಪತ್ರಗಳನ್ನು ಬರೆದಿದ್ದರು. ನಾಗೇಂದ್ರ ತಂದೆಗೆ ಕಾಗದ ಬರೆದು ಚಿಕ್ಕಮ್ಮನಿಗೆ ಸ್ವಾಗತ ಬಯಸಿದ್ದ. ಸುಬ್ಬುಕೃಷ್ಣ ಮದುವೆ ಮುಗಿದ ಮಾರನೆಯ ದಿನವೇ ಊರಿಗೆ ಪ್ರಯಾಣ ಬೆಳಸಿದ.

೩೫

ರಂಗನಾಯಕಿ ತೌರುಮನೆ ಬಿಟ್ಟು ಗಂಡನ ಮನೆಗೆ ಬಂದು ನೆಲಸಿದಳು. ಮಹಾಬಲನಿಗೆ ಹೊಟೇಲ್ ಊಟ ತಪ್ಪಿತು. ಸುಬ್ಬಮ್ಮ ಮಗಳಿಗೆ ನೆರವಾಗಿ ಅವಳ ಸಂಸಾರಕ್ಕೆ ಬೇಕಾದ ಪಾತ್ರೆ ಪದಾರ್ಥಗಳನ್ನು ಅಣಿಮಾಡಿಕೊಟ್ಟರು.

ಖಾರ್‌ನಲ್ಲಿದ್ದ ಮಹಾಬಲನ ಮನೆ ಸಾಕಷ್ಟು ದೊಡ್ಡದಾಗಿತ್ತು. ತಾನು ಆಫೀಸಿಗೆ ಹೋದಾಗ ರಂಗನಾಯಕಿ ಒಬ್ಬಳೇ ಮನೆಯಲ್ಲಿರಬೇಕಾ

ಗಿದ್ದುದನ್ನು ಮಹಾಬಲ ಗ್ರಹಿಸಿದ. ತನಗೆ ಹೊಳೆದ ಯೋಚನೆಯನ್ನು ನಂಜುಂಡಯ್ಯನವರಿಗೆ ತಿಳಿಸಲು ಅವನು ತಡಮಾಡಲಿಲ್ಲ.

"ನೀವು ಮಾತುಂಗ ಮನೆಯನ್ನು ಬಿಟ್ಟು ಇಲ್ಲೇಕೆ ಬಂದಿರಬಾರದು. ಒಬ್ಬಳೇ ಇರುವ ಕಷ್ಟವೂ ರಂಗನಾಯಕಿಗೆ ತಪ್ಪುತ್ತದೆ."

"ಈಗ ನಾವಿರುವ ಮನೆ ಬಿಟ್ಟರೆ ಮುಂದೆ ಮನೆ ಸಿಕ್ಕುವುದಿಲ್ಲ."

"ಸಿಕ್ಕಬೇಕಾದ ಅಗತ್ಯವೇ ಇಲ್ಲ. ನೀವು ಯಾವಾಗಲೂ ಇಲ್ಲೇ ಇರಬಹುದು."

"ನೀವು ಬೆಂಗಳೂರಿಗೆ ಹೋಗಬೇಕಾಗಿ ಬರಬಹುದು."

"ನಾನು ಹೋದರೇನು – ನಾಗೇಂದ್ರ ಅವನ ಹೆಂಡತಿ ಬರುತ್ತಾರೆ. ಅವರಿಗಾದರೂ ಮನೆ ಬೇಡವೇ ? ಒಂದೇ ಊರಿನಲ್ಲಿದ್ದುಕೊಂಡು ನಾವು ಎರಡು ಮನೆಗಳಿಗೆ ಬಾಡಿಗೆಕೊಡುವುದರಲ್ಲಿ ಏನು ಅರ್ಥವಿದೆ."

ನಂಜುಂಡಯ್ಯ ಬಹಳ ಯೋಚನೆಮಾಡಿ ಹೆಂಡತಿಯ ಸಲಹೆ ಕೇಳಿದರು. ಸುಬ್ಬಮ್ಮ ಸಂತೋಷವಾಗಿ ಮಹಬಲರಾಯನ ಸೂಚನೆಗೆ ಒಪ್ಪಿಗೆಯನ್ನಿತ್ತರು.

ಊರಿನಿಂದ ಮಹಾಬಲರಾಯನಿಗೆ ಬರುತ್ತಿದ್ದ ಕಾಗದಗಳು ಹರ್ಷದಾಯಕವಾಗಿರಲಿಲ್ಲ. ಮಿಲ್ಲಿನ ವ್ಯವಹಾರದಲ್ಲಿ ಅಂಜನಪ್ಪನಿಗೂ ಉಮಾಪತಿಗೂ ಭಿನ್ನಾಭಿಪ್ರಾಯಗಳು ಹುಟ್ಟಿದ್ದವು. ನಾಗೇಂದ್ರ ಮಧ್ಯಸ್ಥಿಕೆ ಮಾಡಿ ಅವರ ಮೈತ್ರಿ ಉಳಿಯುವಂತೆ ಮಾಡಲು ಅಸಮರ್ಥನಾಗಿದ್ದ.

ಮಹಾಬಲರಾಯ ಬೆಂಗಳೂರಿಗೆ ಹೊರಡುವುದಕ್ಕೆ ಇನ್ನೂ ಒಂದು ಕಾರಣ ಹುಟ್ಟಿಕೊಂಡಿತು. ನಾಗೇಂದ್ರನ ಹೆಂಡತಿ ಗರ್ಭಿಣಿಯಾಗಿದ್ದಳು. ಬಾಣಂತನಕ್ಕೆ ತೌರುಮನೆಗೇ ಕಳುಹಿಸಿಕೊಡಬೇಕೆಂದು ನಾಗೇಂದ್ರನ ಅತ್ತೆ ಮಾವ, ಮೇಲಿಂದ ಮೇಲೆ ಕಾಗದಗಳನ್ನು ಬರೆಯುತ್ತಿದ್ದರು. ಚೊಚ್ಚಲು ಬಾಣಂತನ – ಸೊಸೆಗೆ ಔತಣಮಾಡದೆ ಕಳುಹಿಸಿಕೊಡುವುದು ನ್ಯಾಯವಲ್ಲವೆಂದು ಮಹಾಬಲನಿಗೂ ತೋರಿತು.

ಮುಂಬಯಿಯ ವ್ಯವಹಾರವನ್ನೆಲ್ಲಾ ಒಂದು ವ್ಯವಸ್ಥೆಗೆ ತಂದು ಮಹಾಬಲ, ಹೆಂಡತಿಯೊಡನೆ ಬೆಂಗಳೂರಿಗೆ ಪ್ರಯಾಣಮಾಡುವ ಸಿದ್ಧತೆ ಮಾಡಿಕೊಳ್ಳತೊಡಗಿದ.

ಮಹಾಬಲನ ಮದುವೆಯನ್ನು ಎಲ್ಲರೂ ಒಪ್ಪಿಕೊಂಡಿದ್ದರು. ನಾಗೇಂದ್ರ, ಸುಲೋಚನ ಹೊಸ ಗೃಹಲಕ್ಷ್ಮಿಗೆ ಸ್ವಾಗತ ಬಯಸಲು ಸಿದ್ಧರಾಗಿದ್ದರು. ಆದರೆ ಲಕ್ಷ್ಮಮ್ಮನವರು ಮಾತ್ರ ಕಾಯಾ-ಮನಸಾ-ವಾಚಾ ಮಹಾಬಲನ ಮದುವೆಗೆ ವಿರುದ್ಧವಾಗಿದ್ದರು.

ತಂದೆಯ ಕಾಗದವನ್ನು ಲಕ್ಷ್ಮಮ್ಮನವರಿಗೆ ನಾಗೇಂದ್ರ ಓದಿ ಹೇಳಿ "ಇನ್ನು ಎರಡು ಮೂರು ದಿವಸದಲ್ಲಿ ಅಣ್ಣ ಬರುತ್ತಾನಂತೆ ಅಜ್ಜೀ" ಎಂದು ಹೇಳಿದ.

"ನಿಮ್ಮ ಚಿಕ್ಕಮ್ಮನೂ ಬರುತ್ತಾಳಂತೇನಪ್ಪಾ ?"

"ಹೂ, ಬರದೆ. ಅವರನ್ನು ಅಲ್ಲಿ ಬಿಟ್ಟು ಅಣ್ಣ ಬರುತ್ತಾನೆಯೇ ?"

ಅಜ್ಜಿಯ ಮುಖದಲ್ಲಿ ಸಂತೋಷದ ಚಿನ್ಹೆ ಕಾಣದಿರಲು ನಾಗೇಂದ್ರ "ಯಾಕಜ್ಜೀ........ಸುಮ್ಮನಾಗಿ ಬಿಟ್ಟೆ ?"

"ಯೋಚನೆಮಾಡುತ್ತಿದ್ದೆ."

"ಏನು ಯೋಚನೆ ?"

"ನಾನು ಎಂದು ಪ್ರಯಾಣಮಾಡಲಿ ಎಂದು."

"ಪ್ರಯಾಣ ಎಲ್ಲಿಗೆ ?"

"ಮಂಚೇನಹಳ್ಳಿಯಲ್ಲಿ ನನಗೊಬ್ಬ ತಂಗಿಯಿದ್ದಾಳೆ. ತಂಗಿಯೆಂದರೆ ಸ್ವಂತ ತಂಗಿಯಲ್ಲ—ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳು ನಾವು—ಅವಳು ಬಾ ಬಾ ಎಂದು ಕರೆಯುತ್ತಲೇ ಇದ್ದಾಳೆ."

"ಚಿಕ್ಕಮ್ಮ ಬರುವ ಹೊತ್ತಿಗೆ ನೀನು ಇರುವುದಿಲ್ಲ."

"ಇರುವುದಕ್ಕೆ ನನಗೆ ಮನಸ್ಸಿಲ್ಲ ನಾಗೇಂದ್ರ ? ಯಾವಾಗ ನನ್ನ ವಸ್ತು ಹೋಯಿತೋ ಈ ಮನೆ ಋಣಾನುಬಂಧ ನನಗೆ ಹೋಯಿತು. ನಿಮಗೋಸ್ಕರ ಇರಬೇಕಾಗಿತ್ತು. ಈಗೇನು ಅಗತ್ಯ ಕಾಣುವುದಿಲ್ಲ. ನಿಮ್ಮ ಚಿಕ್ಕಮ್ಮ ನೋಡಿಕೊಳ್ಳುತ್ತಾಳೆ."

"ಯಾರಿದ್ದರೂ ನೀನು ಇದ್ದ ಹಾಗೆ ಆಗುತ್ತದೆಯೇ ಅಜ್ಜಿ ?"

"ನಾಗೇಂದ್ರ ? ನನ್ನ ಬಲವಂತಮಾಡಬೇಡಪ್ಪ............ಕಳುಹಿಸಿ ಕೊಡು. ನಿಮ್ಮನ್ನು ನೋಡಬೇಕು ಎಂದು ಕರುಳು ಬಾಧಿಸಿದಾಗ ಬಂದು ನೋಡಿಕೊಂಡು ಹೋಗುತ್ತೇನೆ."

ಅಜ್ಜಿಯ ನಿರ್ಧಾರವನ್ನು ನಾಗೇಂದ್ರ ಅಲುಗಾಡಿಸಲು ಆಗಲಿಲ್ಲ. ಮನಸ್ಸಿಲ್ಲದಿದ್ದರೂ, ತಂದೆ ಬರುವ ಹಿಂದಿನ ದಿನ ಅಜ್ಜಿಯನ್ನು ಮಂಚೇನ ಹಳ್ಳಿಗೆ ಕಳುಹಿಸಿಕೊಟ್ಟ.

ಬೆಂಗಳೂರಿಗೆ ಬಂದ ಕೂಡಲೆ ಮಹಾಬಲರಾಯನಿಗೆ ಅತ್ತೆ ಹೊರಟು ಹೋದ ಸಂಗತಿ ತಿಳಿಯಿತು.—ಮನಸ್ಸಿಗೆ ನೋವೂ ಆಯಿತು. 'ಹೀಗಾದ್ದೇ ಒಳ್ಳೆಯದೆಂದು ಕಾಣುತ್ತದೆ. ಅವರು ಇಲ್ಲಿಯೇ ಇದ್ದಿದ್ದರೆ ಅವರಿಗೂ ಸುಖವಿರುತ್ತಿರಲಿಲ್ಲ' ಎಂದು ತನ್ನನ್ನೇ ತಾನು ಸಮಾಧಾನ ಮಾಡಿಕೊಂಡ.

ಸುಲೋಚನೆಗೆ ಆರತಿ ಅಕ್ಷತೆಮಾಡಿ ಅವಳನ್ನು ಬೀಳ್ಕೊಡುವ ಜವಾಬ್ದಾರಿ ರಂಗನಾಯಕಿಯ ಮೇಲೆ ಬಿತ್ತು. ಅಂಬುಜಮ್ಮನವರೂ ರಾಜಲಕ್ಷ್ಮಿ ಬಂದು ನಿಂತುಕೊಂಡು ಎಲ್ಲ ಕೆಲಸಗಳನ್ನೂ ಸಾಂಗವಾಗಿ ಆಗುಮಾಡಿ ಕೊಟ್ಟರು. ಮಹಾಬಲರಾಯ ಸೊಸೆಗೆ ಸೊಗಸಾದ ಹಸಿರು ಪೀತಾಂಬರ ವನ್ನು ಓದಿಸಿ

"ಸುಖವಾಗಿ ವೈಕಳೆದು, ಮಗನನ್ನು ಎತ್ತಿಕೊಂಡು ಬಾ ತಾಯೀ"

ಎಂದು ಆಶೀರ್ವದಿಸಿದ.

ಸುಲೋಚನ ಪ್ರಯಾಣಮಾಡಿದಮೇಲೆ ರಂಗನಾಯಕಿ ಮನೆಯಲ್ಲಿ ಒಬ್ಬಳೇ ಆದಳು. ಮನೆಯ ಜವಾಬ್ದಾರಿ, ಮಕ್ಕಳ ಉಸ್ತುವಾರಿ ಅವಳ ಮೇಲೆ ಬಿತ್ತು. ಕಾಡಮ್ಮನವರು ಅಡಿಗೆಯ ಕೆಲಸ ನೋಡಿಕೊಂಡು ಹೋಗುತ್ತಿದ್ದರು.

ಊರಿಗೆ ಬಂದ ಕೆಲವು ದಿನ ಮಹಾಬಲರಾಯನಿಗೆ ಸ್ವಲ್ಪವೂ ಬಿಡುವು ಸಿಕ್ಕಲಿಲ್ಲ. ಉಮಾಪತಿ, ಅಂಜನಪ್ಪ ಇವರ ಮಧ್ಯೆ ತಲೆಹಾಕಿದ್ದ ಮನಸ್ತಾಪ ಪರಿಹರಿಸಿ, ಅವರು ಸಿಡಿದು ಹೋಗದ ಹಾಗೆ ನೋಡಿಕೊಳ್ಳಲು ಅವನು ಕಲಿತ ಬುದ್ಧಿಯನ್ನೆಲ್ಲಾ ವ್ಯಯಮಾಡಬೇಕಾಯಿತು. ಗಂಡ ತನ್ನ ಇರುವನ್ನೇ ಮರೆತು ಬಿಟ್ಟರೇನೋ ಎಂದು ರಂಗನಾಯಕಿ ಒಮ್ಮೊಮ್ಮೆ ಭಾವಿಸುವಳು. ಒಂದುದಿನ ದುಃಖ ತಡೆಯಲಾಗದೆ

"ಬೆಳಿಗ್ಗೆಯಿಂದ ಸಂಜೆಯವರೆಗೂ ನಿಮಗೆ ಪುರಸತ್ತೇ ಇಲ್ಲ"

ಎಂದಳು. ಅವಳ ಮಾತಿನಲ್ಲಿ ಹುದುಗಿದ್ದ ನೋವಿನ ದನಿಯನ್ನು ಗುರುತಿಸಿ ಮಹಾಬಲ

"ಏಕೆ? ಬೇಸರವಾಯಿತೇನು?"

"ಆಗದೆ ಇರುತ್ತದೆಯೇ? ಮನೆಯಲ್ಲಿ ನಾನೊಬ್ಬಳೇ ಕುಳಿತುಕೊಂಡು ಏನು ಮಾಡಲಿ?"

"ಅಂಬುಜಮ್ಮನವರ ಮನೆಗೆ ಹೋಗಿಬರಬೇಕಾಗಿತ್ತು."

"ಆಗಬಹುದು. ಅಂಬುಜಮ್ಮನವರೇ ಅಲ್ಲವೇ ನನ್ನ ಮದುವೆಯಾಗಿ ಬೆಂಗಳೂರಿಗೆ ಕರೆದುಕೊಂಡು ಬಂದವರು."

ರಂಗನಾಯಕಿಯ ಮಾತಿನ ಕುಹಕ ಮಹಾಬಲರಾಯನಿಗೆ ನಗೆಯನ್ನುಂಟುಮಾಡಿತು.

"ಅಲ್ಲಾ ರಂಗೂ, ನಾನು ಯಾವಾಗಲೂ ನಿನ್ನ ಮುಂದೆ ಕುಳಿತಿರುವುದಕ್ಕಾಗುತ್ತದೆಯೇ?"

"ಹಾಗೆ ನಾನು ಹೇಳಿದೆನೇ? ಬೆಂಗಳೂರಿಗೆ ನಾವು ಬಂದು ಎಷ್ಟು ದಿವಸವಾಯಿತು?"

"ಒಂದು ತಿಂಗಳಾಗಿರಬಹುದು."

"ಒಂದು ದಿನ ನಾವು ಹೊರಗೆ ಹೋಗಿದ್ದೇವೆಯೇ? ಒಂದು ಸಿನೀಮಾಕ್ಕೆ ಹೋಗಿದ್ದೇವೆಯೇ? ಮನೆಯಾಯಿತು ನಾನಾಯಿತು."

"ಮಿಲ್ಲಿನಲ್ಲಿ ಭಾಗಸ್ಥರಿಬ್ಬರಿಗೂ ಮನಸ್ತಾಪ ಹುಟ್ಟಿ ವಿಷಯ ಪ್ರಕೋಪಕ್ಕೆ ಹೋಗಿತ್ತು. ಅವರಿಬ್ಬರನ್ನೂ ಸಮಾಧಾನ ಮಾಡಬೇಕಾದರೆ ಇಷ್ಟು ದಿನ ಹಿಡಿಯಿತು."

"ಈಗಲಾದರೂ ಮುಗಿಯಿತೋ, ಇನ್ನೂ ಬಾಕಿ ಇದೆಯೋ?"

"ಮುಗಿದ ಹಾಗಾಯಿತು ಅನ್ನು."

"ಇನ್ನೂ ಅನುಮಾನಿಸುವಿರಲ್ಲಾ."

"ಮುಗಿಯಿತು ಕಣೇ ಮಹರಾಯಿತಿ."

"ಇವತ್ತು ಸಂಜೆ ಸಿನೀಮಾಕ್ಕೆ ಕರೆದುಕೊಂಡು ಹೋಗಲೇ ಬೇಕು."

"ಆಗಬಹುದು"

ಎಂದು ಒಪ್ಪಿಕೊಂಡ.

ಸಂಜೆ 'ಸ್ಟೇಟ್ಸ್' ಸಿನೀಮಾಗೃಹದಲ್ಲಿ 'ಖಿಡ್ಕಿ' ಚಿತ್ರವನ್ನು ನೋಡಿ ನಲಿಯುತ್ತಿದ್ದವಳು ರಂಗನಾಯಕಿ ಒಬ್ಬಳೇ; ಮಹಾಬಲರಾಯನೂ ಜತೆ

ಯಲ್ಲಿದ್ದ. ಅದೇ ಸಿನೀಮಾ ಚಿತ್ರ ಅವನೆದುರಿಗೂ ನಡೆಯುತ್ತಿತ್ತು. ಆದರೆ ಅವನ ಮನಸ್ಸು ಗೂಡು ಕಳೆದುಕೊಂಡ ಹಕ್ಕಿಯಂತೆ ಎಲ್ಲಿಯೋ ಹಾರಾಡುತ್ತಿತ್ತು. ಅವನ ಅಮನಸ್ಕತೆಯನ್ನು ಕಂಡು ರಂಗನಾಯಕಿ ಅಸಂತುಷ್ಟಳಾದಳು.

"ನಿಮ್ಮನ್ನು ಸಿನೀಮಾಕ್ಕೆ ಹೊರಡಿಸಿದ್ದು ನನ್ನ ತಪ್ಪು."

"ಏಕೆ ರಂಗೂ."

"ಏಕೂ ಇಲ್ಲ"

ಎಂದು ಮುಖತಿರುವಿದಳು.

ಅಂದು ರಾತ್ರಿ ರಂಗನಾಯಕಿ ಊಟಮಾಡದೆ ಮಲಗಿಬಿಟ್ಟಳು, ಅವಳನ್ನು ಸಂತೈಸುವ ಪ್ರಯತ್ನ ಮಾಡಿಮಾಡಿ ಮಹಾಬಲರಾಯ ವಿಫಲನಾದ.

ರಂಗನಾಯಕಿ ಹಾಸಿಗೆಯಮೇಲೆ ಮಲಗಿಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಅವಳ ಸಮೀಪಕ್ಕೆ ಬಂದು ಸಮಾಧಾನಪಡಿಸಲು ಮಹಾಬಲರಾಯನಿಗೆ ಧೈರ್ಯವಾಗಲಿಲ್ಲ.

೩೫

ನಾಗೇಂದ್ರನ ವೈಜ್ಞಾನಿಕ ಪ್ರಶಸ್ತಿಯನ್ನು ಅಂಜನಪ್ಪ ಮೆಚ್ಚಿಗೊಂಡುದಲ್ಲದೆ ಅವನ ಶ್ರದ್ಧೆ, ಕರ್ತವ್ಯ ದಕ್ಷತೆಗಳನ್ನೂ ಮೆಚ್ಚಿಕೊಂಡ. ನಾಗೇಂದ್ರ ಮಿಲ್ಲಿನಲ್ಲಿ ಎಲ್ಲರೊಂದಿಗೆ ಸ್ನೇಹ, ಸಹಾನುಭೂತಿಗಳಿಂದ ವರ್ತಿಸುತ್ತಿದ್ದುದರಿಂದ ಇಂಜನಿಯರುಗಳು, ಫೋರ್ಮನ್‌ಗಳು, ಕೂಲಿಗಾರರು ಅವನ ಬಗ್ಗೆ ವಿಶ್ವಾಸ ತಳೆದಿದ್ದರು. ಮಗ ತನ್ನ ಜೀವನವನ್ನು ರೂಪಿಸಿಕೊಳ್ಳುತ್ತಿದ್ದ ಬಗೆಯನ್ನು ಕಂಡು ಮಹಾಬಲರಾಯ ಹಿರಿಹಿರಿ ಹಿಗ್ಗಿದ. ಮಾತುಮಾತಿಗೆ 'ನಾಗೇಂದ್ರ ಹೀಗೆ ಹೇಳಿದ-ಹಾಗೆ ಹೇಳಿದ' ಎನ್ನುವುದು ಅವನಿಗೆ ವಾಡಿಕೆಯಾಗುತ್ತ ಬಂತು.

ಬೆಳಿಗ್ಗೆಯೆದ್ದು ಮನೆಯಲ್ಲಿ ಸ್ವಲ್ಪ ಫಲಹಾರ ಮಾಡಿಕೊಂಡು ನಾಗೇಂದ್ರ ಹೊರಟರೆ ಮಧ್ಯಾಹ್ನ ಊಟಕ್ಕೆ ಬರುತ್ತಿದ್ದ. ಸಂಜೆ ಮಿಲ್ ಮುಗಿದಮೇಲೆ ಕಾರು ತೆಗೆದುಕೊಂಡು ಗೆಳೆಯರೊಂದಿಗೆ ಡ್ರೈವ್ ಹೋಗಿ ರಾತ್ರಿ ಒಂಭತ್ತು ಘಂಟೆಗೆ ಮನೆಗೆ ಬರುತ್ತಿದ್ದ. ಅವನ ದುಡಿಮೆ ನೋಡಿ ಒಮ್ಮೊಮ್ಮೆ ಮಹಾಬಲರಾಯನೇ ಹೆಂಡತಿಯೆದುರಿಗೆ

"ಹುಡುಗನನ್ನು ಇಷ್ಟುಬೇಗ ನಾನು ದುಡಿಮೆಗೆ ಹಾಕಬಾರದಾಗಿತ್ತು. ಇನ್ನೂ ನಾಲ್ಕುವರ್ಷ ಅವನು ಸುಖವಾಗಿರಲಿ ಎಂದು ಬಿಡಬೇಕಾಗಿತ್ತು"

ಎಂದು ಹೇಳುತ್ತಿದ್ದ.

ನಾಗೇಂದ್ರ ತನ್ನ ಚಿಕ್ಕಮ್ಮನೊಂದಿಗೆ ಮಾತನಾಡುವ ಪ್ರಸಂಗಗಳೇ ಬರುತ್ತಿರಲಿಲ್ಲ. ಅವನು ಮನೆಗೆ ಬಂದಾಗ ಎಲೆ ಹಾಕಿ ಬಡಿಸುವ ಕೆಲಸ ಕಾಡಮ್ಮನವರು ನಿರ್ವಹಿಸುತ್ತಿದ್ದರು. ರಾತ್ರಿ ಊಟ ಸಾಮಾನ್ಯವಾಗಿ ತಂದೆಮಕ್ಕಳು ಒಟ್ಟಿಗೆ ಕುಳಿತು ಮಾಡುತ್ತಿದ್ದರು. ಬೆಳಿಗ್ಗೆ ನಾಗೇಂದ್ರ ಊಟಕ್ಕೆ ಬರುವ ವೇಳೆಗೆ ಮಹಾಬಲರಾಯ ಊಟ ಮುಗಿಸಿಕೊಂಡು ಅಂಗಡಿಗೆ ಹೊರಟುಹೋಗಿರುತ್ತಿದ್ದ.

ಸುಲೋಚನ ಆಪ್ಪದೆ ಕಾಗದ ಬರೆಯುತ್ತಿದ್ದಳು. ಶನಿವಾರ—ಭಾನುವಾರವಾದರೂ ಪುರಸತ್ತು ಮಾಡಿಕೊಂಡು ಹೊಳೇನರಸೀಪುರಕ್ಕೆ ಬಂದು ಹೋಗಬೇಕೆಂದು ಪ್ರಾರ್ಥಿಸುತ್ತಿದ್ದಳು. ನಾಗೇಂದ್ರ 'ಮುಂದಿನ ಶನಿವಾರ ಹೋದರಾಯಿತು' ಎಂದುಕೊಂಡು ಕಾಲತಳ್ಳುತ್ತಲೇ ಬಂದಿದ್ದ. ಶನಿವಾರ-ಭಾನುವಾರ ಬಂದಿತೆಂದರೆ ಕಬ್ಬನ್‌ಪಾರ್ಕ್ ಟೆನಿಸ್ ಕೋರ್ಟುಗಳು ಅವನಿಗೆ ಪುರಸತ್ತು ಕೊಡುತ್ತಿರಲಿಲ್ಲ.

ರಂಗನಾಯಕಿ ಹೊತ್ತುಗಳೆಯುವುದಕ್ಕೆ ಕಸೂತಿಕೆಲಸ ಆರಂಭಿಸಿದಳು. ಸದಾ ಗಂಭೀರವಾಗಿರುತ್ತಿದ್ದ ಅವಳ ಮುಖ ನೋಡಿ 'ಕಾರಣವೇನೆಂದು ವಿಚಾರಿಸಲೇ' ಎಂದು ನಾಗೇಂದ್ರ ಒಮ್ಮೊಮ್ಮೆ ವಿಚಾರಮಾಡುತ್ತಿದ್ದ. ಆದರೆ ತಾನಾಗಿಯೇ ಮಾತನಾಡಿಸುವುದಕ್ಕೆ ಮನಸ್ಸು ಹಿಂದೆಗೆಯುತ್ತಿತ್ತು.

ರಂಗನಾಯಕಿಗೆ ಮಹಾಬಲರಾಯ ಯಾವದಕ್ಕೂ ಕಡಿಮೆಮಾಡಿರಲಿಲ್ಲ. ನರಸಮ್ಮ, ಪುಟ್ಟತಾಯಮ್ಮನ ಒಡವೆ-ವಸ್ತ್ರಗಳೆಲ್ಲಾ ಅವಳ ಪಾಲಿಗೇ ಬಂದಿದ್ದವು. ಅವು ಸಾಲದೆಂದು ಅವಳಿಗೇ ಪ್ರತ್ಯೇಕವಾಗಿ ಒಡವೆ-ವಸ್ತ್ರಗಳನ್ನು ತಂದುಕೊಟ್ಟಿದ್ದ. ಅರಮನೆಯಂಥ ಮನೆ, ಕೆಲಸಕ್ಕೆ ಊಳಿಗದವರು, ಮನಃಪೂರ್ವಕವಾಗಿ ಪ್ರೀತಿಸುವ ಪತಿ ಎಲ್ಲವೂ ರಂಗನಾಯಕಿಯ ಪಾಲಿಗೆ ಬಂದಿತ್ತು.

ಆದರೆ ಅವಳ ಚಿತ್ತಕ್ಕೆ ಸ್ವಾಸ್ಥ್ಯವಿರಲಿಲ್ಲ. ಯಾವದೋ ಕೊರಗು ಅವಳ ಹೃದಯವನ್ನು ಕೀಟದಂತೆ ಕೊರೆಯುತ್ತಿತ್ತು.

ರೂಮಿನಲ್ಲಿಯೇ ಕುಳಿತು ನಾಗೇಂದ್ರ ಬಂದುದು, ರೂಮಿಗೆ ಹೋದುದು, ಊಟ ಮುಗಿಸಿದುದು, ಮರಳಿ ರೂಮಿಗೆ ಬಂದು ವಿಶ್ರಾಂತಿ ಪಡೆದು ಬಟ್ಟೆ ಧರಿಸಿ, ಹೊರಗೆ ಹೊರಟುಹೋದುದನ್ನು ಗಮನಿಸುತ್ತಿದ್ದಳು. ಅವನನ್ನು ಮಾತನಾಡಿಸಬೇಕೆಂಬ ಕುತೂಹಲ ಅವಳನ್ನು ಕಾಡುತ್ತಿತ್ತು.

ಒಂದು ದಿನ ನಾಗೇಂದ್ರ ವಿಶ್ರಾಂತಿ ಮುಗಿಸಿ ಬಟ್ಟೆ ಧರಿಸುತ್ತಿದ್ದ. ಷೂಸ್ ಹಾಕಿಕೊಂಡು ಅವನು ಹೊರಡಲು ಸಿದ್ಧವಾಗಿದ್ದ. ರಂಗನಾಯಕಿ ಧೈರ್ಯ ತಂದುಕೊಂಡು ಅವನ ರೂಮಿಗೆ ಬಂದಳು.

ರಂಗನಾಯಕಿಯನ್ನು ನೋಡಿ ನಾಗೇಂದ್ರ ಅವಾಕ್ಕಾಗಿ 'ಏನು ಬೇಕಾಗಿತ್ತು' ಎಂದು ಕಷ್ಟಪಟ್ಟುಕೊಂಡು ಕೇಳಿದ.

"ಬೇಸರವಾಗುತ್ತಿದೆ. ಓದಲು ಯಾವದಾದರೂ ಪುಸ್ತಕ ಬೇಕಾಗಿತ್ತು."

ನಾಗೇಂದ್ರ ತನ್ನ ಬುಕ್ ಷೆಲ್ಫ್ ತೆಗೆದು ಸಾಮರ್‌ಸೆಟ್‌ಮಾಮಿನ ಕೆಲವು ಕಾದಂಬರಿಗಳನ್ನು ಅವಳ ಮುಂದೆ ಹಿಡಿದ.

"ಇವುಗಳಲ್ಲಿ ಯಾವುದು ಚೆನ್ನಾಗಿದೆ—ನೀವೇ ಆರಿಸಿಕೊಡಿ."

"ಇದು ಮಾಮಿನ ಈಚಿನ ಕಾದಂಬರಿ—'ರೇಜರ್ಸ್ ಎಡ್ಜ್'—ಇದರಲ್ಲಿ ಹಿಂದೂದರ್ಶನ ವಿಮರ್ಶೆಮಾಡಿದ್ದಾನೆ."

"ನನಗೆ ಅದು ಅರ್ಥವಾಗುವಂತೆ ಕಾಣಲಿಲ್ಲ."

"ಇದು ಅವನ ಪ್ರಸಿದ್ಧ ಕಾದಂಬರಿ-'ಆಫ್ ಹ್ಯೂಮನ್ ಬಾಂಡೇಜ್' ಇದರಲ್ಲಿ ಒಬ್ಬ ಕುಂಟನ ಕಥೆ ಹೇಳಿದ್ದಾನೆ."

"ಕುಂಟರ ಕುರುಡರ ಕಥೆ ಯಾರು ಓದಬೇಕು."

"ಇದು 'ಮೂನ್ ಅಂಡ್ ಸಿಕ್ಸ್‌ಪೆನ್ಸ್'—ಇದರಲ್ಲಿ ಒಬ್ಬ ಚಿತ್ರಗಾರನ ಪ್ರಣಯಕಥೆ ನಿರೂಪಿಸಿದ್ದಾನೆ."

"ಇದೇ ಕೊಡಿ"

ಎಂದು ಪುಸ್ತಕ ಕೈಗೆ ತೆಗೆದುಕೊಂಡು ಅಲ್ಲಿ ನಿಲ್ಲದೆ ತನ್ನ ರೂಮಿಗೆ ಬಂದಳು.

'ಚಿಕ್ಕಮ್ಮ ಕೇವಲ ಪುಸ್ತಕದ ಸಲುವಾಗಿ ಇಲ್ಲಿಗೆ ಬಂದಿದ್ದಳೇ?' ಎಂದು ನಾಗೇಂದ್ರ ತನ್ನನ್ನೇ ಪ್ರಶ್ನಿಸಿಕೊಂಡ. ಅವಳು ಬೀರಿದ ನೋಟ

ದಲ್ಲಿ ಬಹಳ ಅರ್ಥ ಹುದುಗಿತ್ತು. ಅವಳ ನೋಟದ ರಹಸ್ಯ ಭೇದಿಸಲು ನಾಗೇಂದ್ರ ಪ್ರಯತ್ನಿಸಿದ. ಅವನ ಮನಸ್ಸಿಗೆ ಹೊಳೆದ ಭಾವನೆ ಅವನನ್ನು ಚಕಿತನನ್ನಾಗಿ ಮಾಡಿತು. ಛೀ! ಛೀ!! ಎಂದುಕೊಂಡು ಮಿಲ್ಲಿನಕಡೆ ಹೊರಟ.

ಮೂರು ನಾಲ್ಕು ದಿವಸಗಳ ತರುವಾಯ, ಅದೇ ಮಧ್ಯಾಹ್ನದ ವೇಳೆಗೆ ಕೈಯಲ್ಲಿ 'ಮೂನ್ ಅಂಡ್ ಸಿಕ್ಸ್‌ಪೆನ್ಸ್' ಹಿಡಿದು ರಂಗನಾಯಕಿ ನಾಗೇಂದ್ರನ ರೂಮಿಗೆ ಬಂದಳು. ನಾಗೇಂದ್ರ ವಿಶ್ರಾಂತಿ ಪಡೆಯಲು ಹಾಸಿಗೆಯ ಮೇಲೆ ಅಡ್ಡಾಗಿದ್ದ. ಚಿಕ್ಕಮ್ಮ ಬಂದುದನ್ನು ಕಂಡು ಜಗ್ಗನೆದ್ದು ನಿಂತ.

"ನಿಮ್ಮ ಪುಸ್ತಕ ಓದಿಯಾಯಿತು."

"ಹೇಗಿದೆ"

"ಸೊಗಸಾಗಿದೆ. ಬೇರೆ ಪುಸ್ತಕ ಕೊಡುವಿರೇನು?"

"ನಿಮಗೆ ಯಾವದು ಬೇಕೋ ನೀವೇ ಆರಿಸಿಕೊಳ್ಳಿ."

ಎಂದು ಬುಕ್‌ಷೆಲ್ಫಿನ ಬಾಗಿಲು ತೆಗೆದುಕೊಟ್ಟ. ರಂಗನಾಯಕಿ ಸಾವಕಾಶವಾಗಿ ಪುಸ್ತಕಗಳ ಮೇಲೆ ಕೈಯಾಡಿಸಿ, ಆರೇಳು ಪುಸ್ತಕಗಳನ್ನಾರಿಸಿ ನಾಗೇಂದ್ರನ ಮೇಜಿನ ಮೇಲಿಟ್ಟು

"ಇವುಗಳನ್ನೆಲ್ಲಾ ಓದಿರುವಿರಾ?"

"ಓದಿದ್ದೇನೆ."

ರಂಗನಾಯಕಿ ಅವುಗಳಲ್ಲಿ ಒಂದು ಪುಸ್ತಕ ಆರಿಸಿ ನಾಗೇಂದ್ರನ ಮುಂದೆ ಹಿಡಿದು

"ಈ ಪುಸ್ತಕ ಹೇಗಿದೆ."

"ಫ್ರೆಂಚ್ ರೋಮಾನ್ಸಸ್—ಬಹಳ ಚೆನ್ನಾಗಿದೆ—ಮೂರು ಕಿರು ಕಾದಂಬರಿಗಳಿವೆ."

"ಯಾವ ವಿಷಯ ಕುರಿತು?"

"ಹೆಣ್ಣಿನ ವಿವಿಧ ವಿಲಾಸಗಳನ್ನು ಕಾದಂಬರಿಕಾರರು ವರ್ಣಿಸಿದ್ದಾರೆ."

"ನಾನು ಕಾಲೇಜಿನಲ್ಲಿದ್ದಾಗ ನನ್ನ ಇಂಗ್ಲಿಷ್ ಪ್ರೊಫೆಸರು ಫ್ರೆಂಚ್ ಕಾದಂಬರಿಗಳೆಂದರೆ ಮೂಗು ಮುರಿಯುತ್ತಿದ್ದರು."

"ಏಕೆ ?"

"ಅವರೆಲ್ಲಾ ಪಟಿಂಗರಂತೆ. ನಾಚಿಕೆಬಿಟ್ಟು ಬರೆಯುತ್ತಾರಂತೆ. ನಿಮಗೂ ಹಾಗನಿಸುವುದೇನು ?"

"ನಾನು ಸಾಹಿತ್ಯ ವಿದ್ಯಾರ್ಥಿಯಲ್ಲ, ವಿಜ್ಞಾನ ವಿದ್ಯಾರ್ಥಿ. ಲೈಂಗಿಕ ವಿಷಯಗಳನ್ನು ಫ್ರೆಂಚ್ ಲೇಖಕರು ಮುಚ್ಚುಮರೆಯಿಲ್ಲದೆ ಬರೆಯುತ್ತಾರೆ. ನಿಜ. ಆದರೆ ಅವರನ್ನು ಪಟಿಂಗರು ಎಂದು ಕರೆಯುವುದು ತಪ್ಪು. ಜೋಲಾ, ಫ್ಲಾಬೋ, ಸ್ಟೆಂಡ್ಹಾಲ್, ಬಾಲ್‌ಜಾಕ್ ಪ್ರತಿಭಾಶಾಲಿಗಳಾದ ಲೇಖಕರು. ಬಾಲ್‌ಜಾಕ್ ಷೇಕ್ಸ್‌ಪಿಯರಿಗಿಂತಲೂ ದೊಡ್ಡವನು ಎಂದು ಅನೇಕ ವಿಮರ್ಶಕರು ಅಭಿಪ್ರಾಯ ಪಡುತ್ತಾರೆ."

"ಅವರ ಗ್ರಂಥಗಳು ನಿಮ್ಮಲ್ಲಿವೆಯೇ ?"

"ಕೆಲವು ಮುಖ್ಯವಾದ ಗ್ರಂಥಗಳಿವೆ."

"ನಾನು ಅವುಗಳನ್ನೆಲ್ಲಾ ಓದಬೇಕು"

ಕಾರಣವಿಲ್ಲದಿದ್ದರೂ ಕಾರಣ ಹುಡುಕಿಕೊಂಡು ರಂಗನಾಯಕಿ ತನ್ನನ್ನು ಮಾತನಾಡಿಸಿಕೊಂಡು ಬರುತ್ತಿದ್ದಾಳೆ ಎಂದು ನಾಗೇಂದ್ರನಿಗೆ ಭಾಸವಾಯಿತು. ಮನೆಯಿಂದ ಆದಷ್ಟು ಹೊರಗಿರಲು ಪ್ರಯತ್ನಿಸುತ್ತಿದ್ದ. ಸಂಜೆ ತಂದೆ ಮನೆಗೆ ಬಂದಮೇಲೆ ಬರಲು ಯತ್ನಿಸುತ್ತಿದ್ದ. ಒಂದೊಂದು ದಿನ ಮಧ್ಯಾಹ್ನದ ಊಟಕ್ಕೂ ಬರದೆ ಮಿಲ್ಲಿಗೇ ತನ್ನ ಊಟವನ್ನು ತರಿಸಿಕೊಳ್ಳುತ್ತಿದ್ದ.

ಪುಸ್ತಕದ ಸಲುವಾಗಿಯೊಮ್ಮೆ ನಾಗೇಂದ್ರನ ರೂಮಿಗೆ ರಂಗನಾಯಕಿ ಬಂದಳು. ಅವನ ಪುಸ್ತಕದ ಷೆಲ್ಫಿನಿಂದ ತಾನೇ ಫ್ಲಾಬೋನ 'ಮ್ಯಾಡಾಂ ಬಾವರಿ' ಆರಿಸಿಕೊಂಡು

"ಇದನ್ನು ಓದಿರುವಿರಾ ? ಈ ಕಾದಂಬರಿಯನ್ನು ಸಿನೀಮಾ ಮಾಡಿದ್ದಾರಂತೆ."

"ನಾನೂ ಕೇಳಿದೆ."

"ಅಷ್ಟು ಚೆನ್ನಾಗಿದೆಯೇ ?"

"ಅದ್ಭುತವಾಗಿದೆ; ಮ್ಯಾಡಾಂ ಬಾವರಿ ಫ್ರೆಂಚ್ ಸಾಹಿತ್ಯದ ಸ್ವರೂಪವನ್ನೇ ಬದಲಾಯಿಸಿತು."

ರಂಗನಾಯಕಿ ಪುಸ್ತಕದ ಹಿಂದುಗಡೆ ಪ್ರಕಾಶಕರು ಬರೆದಿದ್ದ ಪರಿಚಯದ ಮಾತುಗಳನ್ನೋದಿಕೊಂಡು

"ಇವರೆಲ್ಲಾ ಏಕೆ ಹೆಣ್ಣಿನ ಪತನವನ್ನೇ ಚಿತ್ರಿಸುತ್ತಾರೆ?"

"ಹೆಣ್ಣು ಪ್ರತಿಯೊಂದು ಸಮಾಜದ ಅಸ್ತಿಭಾರ. ಅವಳ ಔನ್ನತ್ಯ ಸಮಾಜದ ಔನ್ನತ್ಯವನ್ನು ನಿರ್ದೇಶಿಸುತ್ತದೆ; ಅವಳ ಪತನ ಸಮಾಜದ ಪತನವನ್ನು ಸೂಚಿಸುತ್ತದೆ."

"ಜೋಲಾ, ಪ್ರಿವೋಸ್ಟ್, ಮೆರಿಮೀ, ಪೀರೆ ಲೋಟಿ ಇವರೆಲ್ಲಾ ಪತನದ ಚಿತ್ರಗಳನ್ನೇ ಕೊಡುತ್ತಾರೆ."

"ಜೋಲಾ ತನ್ನ 'ಮಾಸ್ಟರ್‌ಪೀಸ್' ಕಾದಂಬರಿಯಲ್ಲಿ ಹೆಣ್ಣಿನ ದೈವಿಕಗುಣವನ್ನು ಭವ್ಯವಾಗಿ ಚಿತ್ರಿಸಿದ್ದಾನೆ."

ಸಾಹಿತ್ಯವಿಮರ್ಶೆ ರಂಗನಾಯಕಿಗೆ ಸಾಕೆನ್ನಿಸಿತು. ನಾಗೇಂದ್ರನನ್ನು ಕೇಳಬೇಕೆಂದು ಬಂದಿದ್ದ ವಿಷಯ ಪ್ರಸ್ತಾಪಿಸಲು ಅವಕಾಶ ಹುಡುಕುತ್ತಿದ್ದಳು.

ನಾಗೇಂದ್ರ ಒಂದು ಟೈ ಎಳೆದುಕೊಂಡು ಕುತ್ತಿಗೆಗೆ ಕಟ್ಟಿಕೊಳ್ಳಲಾರಂಭಿಸಿದ. ರಂಗನಾಯಕಿ ಅವನನ್ನೇ ದಿಟ್ಟಿಸಿನೋಡಿ

"ಮಿಲ್ಲಿಗೆ ಹೊತ್ತಾಯಿತೇ?" ಎಂದಳು.

"ಆಗಲೇ ಎರಡು ಘಂಟೆ ಹೊಡೆಯಿತು."

"ನೀವೇಕೆ ಹುಡುಗರು ಪ್ರಶ್ನಪತ್ರಿಕೆಗೆ ಉತ್ತರ ಹೇಳುವಂತೆ ಹೇಳುವಿರಿ?"

"ಇನ್ನೇನು ಮಾತನಾಡಬೇಕಾಗಿತ್ತು?"

"ಏನೂ ಇಲ್ಲವೇ—?"

ಅವಳು ಬೀರಿದ ನೋಟಕ್ಕೆ ಸಿಕ್ಕಿ ನಾಗೇಂದ್ರನ ದೇಹ ಕಂಪಿಸಿತು.

"ಮಿಲ್ಲಿಗೇಕೆ ಊಟ ತರಿಸಿಕೊಳ್ಳುವಿರಿ? ಊಟಕ್ಕೆ ಬರುವುದಕ್ಕೂ ಪುರಸತ್ತಾಗುವುದಿಲ್ಲವೇ?"

"ಪುರಸತ್ತಾದ ದಿವಸ ಊಟಕ್ಕೆ ಮನೆಗೇ ಬರುತ್ತಿರುವೆ."

"ಸರಿ"

ಎಂದು ನುಡಿದು ಅಲ್ಲಿ ನಿಲ್ಲದೆ ಹೊರಟುಹೋದಳು.

ಒಂದು ವಾರ ಕಳೆದಿರಬಹುದು ಎಂದಿನಂತೆ ನಾಗೇಂದ್ರ ಮಧ್ಯಾಹ್ನ ಮನೆಗೆ ಬಂದು ಸ್ನಾನ ತೀರಿಸಿಕೊಂಡು ಊಟಕ್ಕೆ ಅಡಿಗೆಯ ಮನೆಗೆ ಹೋದ. ಮಣೆ, ತಟ್ಟೆ ಹಾಕಲ್ಪಟ್ಟಿತ್ತು. ಕಾಡಮ್ಮನವರ ಸುಳುಹು ಕಾಣಲಿಲ್ಲ. ನಾಗೇಂದ್ರ ಮಣೆಯ ಮೇಲೆ ಕುಳಿತ. ಅಡುಗೆಯಮನೆಯಿಂದ ರಂಗನಾಯಕಿ ಪಲ್ಯದ ಪಾತ್ರೆ ಹಿಡಿದು ಬಡಿಸುವುದಕ್ಕೆ ಬಂದಳು.

"ಇದೇನು ನೀವು ಬಡಿಸುತ್ತಿರುವಿರಿ ?"

"ಕಾಡಮ್ಮ ಒಳಗಿಲ್ಲ. ಇನ್ನು ಮೂರು ದಿವಸ ನನ್ನ ಕೈಯಲ್ಲೇ ನೀವು ಬಡಿಸಿಕೊಂಡು ಊಟಮಾಡಬೇಕಾಗುತ್ತದೆ"

ತಟ್ಟೆಗೆ ಪಲ್ಯಬಡಿಸಿ ರಂಗನಾಯಕಿ ಮೆಲ್ಲನೆ

"ನಾನು ಬಡಿಸಿದರೆ ಅನ್ನ ಸೇರುವುದು ತಾನೇ!"

ಎಂದಳು. ನಾಗೇಂದ್ರನ ಬಾಯಿಯಲ್ಲಿ ಉತ್ತರ ಹೊರಡಲಿಲ್ಲ. ಅನ್ನಕ್ಕೆ ಹುಳಿ ಬಡಿಸಿ ರಂಗನಾಯಕಿ

"ನನಗೆ ಅಡುಗೆಮಾಡುವುದಕ್ಕೆ ಬರುವುದಿಲ್ಲ. ನಿಮಗೆ ಇವತ್ತು ಅರೆ ಹೊಟ್ಟೆ ಊಟವಾಗುತ್ತದೋ ಏನೋ ?"

"ಸೊಗಸಾಗಿ ಮಾಡಿದ್ದೀರಿ. ಮೂರು ದಿವಸ ನೀವು ಮಾಡಿದ ಅಡಿಗೆ ಊಟಮಾಡಿದ ಮೇಲೆ ಕಾಡಮ್ಮನವರ ಅಡಿಗೆ ರುಚಿಸದೆ ಹೋಗಬಹುದು."

ರಂಗನಾಯಕಿಯ ಮುಖ ಪ್ರಫುಲ್ಲವಾಯಿತು. ನಾಗೇಂದ್ರ ಮುಂದುವರಿಸುತ್ತಾ

"ನಿಮ್ಮ ಊಟವಾಯಿತೇ ?"

"ನಿಮ್ಮದಾದ ಮೇಲೆ ನಾನು ಮಾಡುತ್ತೇನೆ."

"ನನಗೇಕೆ ಕಾದಿರಿ ?"

"ಬೆಳಿಗ್ಗೆ ತಿಂಡಿ ತಿಂದಿದ್ದೆ. ಹಸಿವಿರಲಿಲ್ಲ."

ನಾಗೇಂದ್ರ ತಟ್ಟೆಯಲ್ಲಿ ಬಡಿಸಿದುದನ್ನು ಯಂತ್ರದಂತೆ ಸ್ವಾಹಾ ಮಾಡುತ್ತಿದ್ದ.

"ಊಟ ಹೆಚ್ಚಾಗಿ ಹೋಯಿತು. ಹೊಟ್ಟೆಭಾರ."

"ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಹೋಗಿ. ನೀವು ಹೊರಡುವ ವೇಳೆಗೆ ಕಾಫಿ ಮಾಡಿಕೊಡುತ್ತೇನೆ."

ನಾಗೇಂದ್ರ ಕೈತೊಳೆದುಕೊಂಡು ರೂಮಿಗೆ ಬಂದು ಮಲಗಿದ. ಕಣ್ಣಿಗೆ ಮಂಪರು ಬಂದಿದ್ದರೂ ನಿದ್ದೆ ಹತ್ತಲಿಲ್ಲ. ರಂಗನಾಯಕಿಯ ಆದರದ ಮಾತು ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು.

ಸ್ವಲ್ಪಹೊತ್ತು ಕಳೆಯಿತು. ಬಾಗಿಲು ಶಬ್ದವಾಯಿತು. ನಾಗೇಂದ್ರ ಎದ್ದು ಕುಳಿತ. ರಂಗನಾಯಕಿ ಎಲಡಿಕೆ ತಟ್ಟೆಯನ್ನು ತಂದು ನಾಗೇಂದ್ರನ ಮೇಜಿನ ಮೇಲೆ ಇಟ್ಟಳು. ಅದನ್ನು ನೋಡಿ

"ನಾನು ಎಲಡಿಕೆ ಹಾಕಿಕೊಳ್ಳುವುದು ಅಪರೂಪ. ಎಲೆಗೆ ಸುಣ್ಣ ಹಾಕಿಕೊಳ್ಳುವುದಕ್ಕೆ ನನಗೆ ಬರುವುದಿಲ್ಲ."

ಎಂದ. ರಂಗನಾಯಕಿ ಮುಗುಳ್ನಗೆ ಬೀರಿ

"ಸುಲೋಚನಾ ಬಹಳ ದೂರದಲ್ಲಿದ್ದಾಳೆ. ನಾನು ಎಲೆಮಡಿಸಿ ಕೊಟ್ಟರೆ ಆಗಬಹುದು ತಾನೇ ?"

"ನಿಮ್ಮ ಊಟ ಆಯಿತೇ ?"

"ಆಯಿತು ಕಾಡಮ್ಮನವರ ಊಟವೂ ಆಯಿತು."

"ಅಣ್ಣಾ !"

"ಅವರಿಗೆ ಅಂಗಡಿಗೆ ಊಟ ಕಳಿಸಿಕೊಟ್ಟೆ"

ರಂಗನಾಯಕಿ ಅಂಬಾಡಿ ಎಲೆಯ ನಾರು ತೆಗೆದು, ಅದರೊಳಗೆ ಬಣ್ಣ ಕಟ್ಟಿದ ಅಡಿಕೆತುಂಬಿ ಬೀಡಮಾಡಿ ನಾಗೇಂದ್ರನ ಕೈಗಿತ್ತಳು. ಬೀಡ ಕೊಡು ವಾಗ ಅವಳ ಕೈಸೋಂಕಿತು. ನಾಗೇಂದ್ರ ಪುಲಕಿತನಾದ.

ರಂಗನಾಯಕಿ ತಾನೊಂದು ಬೀಡ ಮಾಡಿಕೊಂಡು ಬಾಯಿಗೆ ಹಾಕಿ ಕೊಂಡಳು. ತಾಂಬೂಲರಾಗ ಅವಳ ತುಟಿಯ ನಸುಗಂಪನ್ನು ರಕ್ತಗೆಂಪ ನ್ನಾಗಿ ಮಾಡಿತು.

ನಾಗೇಂದ್ರ ಕತ್ತೆತ್ತಿ ನೋಡಿದ

ರಂಗನಾಯಕಿಯ ರೂಪ—ಲಾವಣ್ಯ ಅವನ ಕಣ್ಣಿಗೆ ಕಟ್ಟಿದವು. ಅವಳ ನೀಳವಾದ ತುಂಬಿದ ತಲೆಗೂದಲು, ಅತಿವಿಶಾಲವೂ ಅಲ್ಲದ ಕಿರಿದೂ ಅಲ್ಲದ ಹಣೆ, ಕಣ್ಣು ಕೊರೈಸುವ ವಜ್ರದ ನತ್ತು ಧರಿಸಿದ ನಸುನೀಳವಾದ ಮೂಗು, ನೀಳವಾದ ರೆಪ್ಪೆಗಳನ್ನು ಧರಿಸಿದ್ದ ವಿಶಾಲವಾದ ಕಣ್ಣುಗಳು ಅವಳ ಸೌಂದ ರ್ಯಕ್ಕೆ ಶೋಭೆಯನ್ನಿತ್ತಿದ್ದವು. ಹೊದೆದಿದ್ದ ಸೆರಗನ್ನು ಧಿಕ್ಕರಿಸಿ ಅವಳ

ಸ್ತನದ್ವಯ ಮುನ್ನುಗ್ಗುತ್ತಿದ್ದವು. ನೀಟವಾದ, ನೀಳವಾದ ಅವಳ ದೇಹದ ರೇಖಾವಿನ್ಯಾಸ ಸ್ಪಷ್ಟವಾಗಿ ಮೂಡಿತ್ತು.

ರಂಗನಾಯಕಿಯ ಸಾಮೀಪ್ಯ ನಾಗೇಂದ್ರನ ಸ್ಮೃತಿಯನ್ನೇ ಅಳಿಸಿತು. ಹೊರಗೆ ಹೋಗಲೆದ್ದ. ಅವನ ಇಂಗಿತವನ್ನರಿತು ರಂಗನಾಯಕಿ ಬಾಗಿಲು ಬಳಿಗೆ ಬಂದು ಚಿಲಕ ಹಾಕಿ, ಬಾಗಿಲಿಗೆ ಬೆನ್ನುಕೊಟ್ಟು ನಿಂತಳು. ನಾಗೇಂದ್ರ ಅವಳನ್ನತ್ತ ಸರಿಸಿ ಬಾಗಿಲು ತೆಗೆದುಕೊಂಡು ಹೊರಗೆ ಹೋಗಲೆತ್ನಿಸಿ ಅವಳ ಸಮೀಪಕ್ಕೆ ಬಂದ. ರಂಗನಾಯಕಿ ಅವನನ್ನು ಬಿಗಿದಪ್ಪಿ ಅವನ ತುಟಿಯ ಬಳಿ ತನ್ನ ತುಟಿಯಿಟ್ಟಳು. ನಾಗೇಂದ್ರ ಮೈಮರೆತುಬಿಟ್ಟ.

೩೬

ನಾಗೇಂದ್ರ ಮಿಲ್ಲಿಗೆ ಹೋದಾಗ ನಾಲ್ಕೂವರೆಯಾಗಿತ್ತು. ಅವನ ಮೇಜಿನ ಮೇಲೆ ಬೇಕಾದಷ್ಟು ಕಾಗದಗಳಿದ್ದವು. ಕಾಗದಗಳನ್ನು ಒಡೆದು ನೋಡಲಾರಂಭಿಸಿದ. ಆಗಾಗ್ಗೆ ಹಣೆಯಮೇಲೆ ಕೈಹೋಗುತ್ತಿತ್ತು. ಆಫೀಸ್ ಸೇವಕ ಒಂದು ಕಪ್ ಕಾಫಿ ತಂದು ಮುಂದಿಟ್ಟ. ಕಾಫಿಯನ್ನು ಒಂದೇ ಗುಟುಕಿಗೆ ಕುಡಿದು ಮುಗಿಸಿದ.

ನಾಗೇಂದ್ರನ ಸ್ಥಿತಿ ನೋಡಿ ಅಂಜನಪ್ಪ "ಮೈಯಲ್ಲಿ ಹುಷಾರಿಲ್ಲವೇ ಸರ್" ಎಂದು ಕೇಳಿದ.

"ಹುಷಾರಾಗಿಯೇ ಇದ್ದೇನೆ ಅಂಜನಪ್ಪನವರೇ. ಬಿಸಿಲಿನಲ್ಲಿ ಬಂದೆ. ತಲೆ ನೋಯುತ್ತಿತ್ತು."

"ಮನೆಗೆ ಬೇಕಾದರೆ ಹೋಗಿ ಸರ್. ನಾನು ನೋಡಿಕೊಳ್ಳುತ್ತೇನೆ."

ಮನೆ ಶಬ್ದ ಕಿವಿಯಮೇಲೆ ಬಿದ್ದಕೂಡಲೆ ನಾಗೇಂದ್ರನ ಮೈಮೇಲೆ ಮುಳ್ಳೆದ್ದಿತು. ತನ್ನ ನಿತ್ಯದ ಕೆಲಸದಲ್ಲಿ ಮನಸ್ಸಿಡಲು ಪ್ರಯತ್ನಿಸಿದ.

ನಾಗೇಂದ್ರ ಮಿಲ್ ಬಿಡಬೇಕಾದರೆ ಎಂಟು ಗಂಟೆಯಾಗಿತ್ತು. ಕಾರನ್ನು ಮನೆಗೆ ಕಳುಹಿಸಿಕೊಟ್ಟು ತಾನು ನಡೆದೇ ಹೊರಟ. ನೇರವಾಗಿ ಮನೆಗೆ ಹೋಗುವುದಕ್ಕೆ ಮನಸ್ಸಾಗಲಿಲ್ಲ. ಬಳಸಿದ ರಸ್ತೆಯನ್ನಾರಿಸಿಕೊಂಡು ಸಾವಕಾಶವಾಗಿ ನಡೆಯುತ್ತ ಹೊರಟ.

ತಂಗಾಳಿ ಸುಖವಾಗಿ ಬೀಸುತ್ತಿತ್ತು. ಬೆಳದಿಂಗಳು ಅದೇ ತನ್ನ ಪ್ರಭೆ

ಚಿತ್ರಿಸಲು ಹವಣಿಸುತ್ತಿತ್ತು. ಹೆಚ್ಚು ಜನರ ಸುಳುಹಿಲ್ಲದ ರಸ್ತೆಯಲ್ಲಿ ನಡೆಯುತ್ತಾ ನಾಗೇಂದ್ರನ ಮನಸ್ಸು ವಿಚಾರಕ್ಕೊಳಗಾಯಿತು.

ನಾಗೇಂದ್ರನ ಹೃದಯದಿಂದ ಭೀಕರ ಕೂಗೊಂದು ಹೊರಟಿತು……. 'ಪಾಪಿ—ಪಾಪಿ'……..ನಾಗೇಂದ್ರನ ಮೈ ಗಡಗಡನೆ ನಡುಗಿತು.

'ಅಯ್ಯೋ! ಎಂಥ ಕೆಲಸವಾಗಿ ಹೋಯಿತು ನನಗಿಂತಲೂ ನೀಚರು, ಪಾತಕಿಗಳು, ಪಾಪಿಗಳು ಈ ಜಗತ್ತಿನಲ್ಲಿದ್ದಾರೆಯೇ?'

'ನನಗೇನು ಬಂದಿದ್ದುದು ಕೇಡು. ನಾನು ಅವಿದ್ಯಾವಂತನೇ? ಅನಾಗರಿಕನೇ? ತಾರತಮ್ಯ ಜ್ಞಾನವಿಲ್ಲದ ಪಶುವೇ?'

'ಒಂದು ನಿಮಿಷದ ವಿಲಾಸಕ್ಕಾಗಿ ಇಡಿಯ ಜೀವನವನ್ನು-ಬಾಳಿನ ಋಜುತ್ವವನ್ನು ತೂರಿಬಿಟ್ಟೆನಲ್ಲಾ!'

'ನನ್ನ ಗತಿಯೇನು? ನನ್ನನ್ನು ಕಾಪಾಡುವವರು ಯಾರು?'

'ಮಾಡಿರುವುದು ಮಹಾಪರಾಧ—ಇದಕ್ಕೆ ಪ್ರಾಯಶ್ಚಿತ್ತವಾಗಲೇ ಬೇಕು.'

'ಅಪರಾಧ! ಅಪರಾಧವನ್ನು ಕಂಡಿರುವವರು ಯಾರು. ಇಲ್ಲಸಲ್ಲದ ಗೊಂದಲವನ್ನೇತಕ್ಕೆಬ್ಬಿಸುವೆ ನಾಗೇಂದ್ರ?'

'ಯಾರೂ ಕಂಡಿಲ್ಲವೇ? ಎಲ್ಲರ ಬಳಿ ನಿಂತು—ಎಲ್ಲರಲ್ಲಿ ನಿಂತು ಇಡಿಯ ವಿಶ್ವವನ್ನು ನಡೆಸುವ ಅಂತರ್ಯಾಮಿ ಕಂಡಿಲ್ಲವೇ? ಲೋಕದ ಕಣ್ಣಿಗೆ ಮಣ್ಣೆರಚಬಹುದು—ಲೋಕದೆದುರಿಗೆ ಮಹಾಸಾತ್ವಿಕನಂತೆ, ನೀತಿಪರನಂತೆ ಸೋಗು ಹಾಕಬಹುದು. ಆದರೆ ಅವನನ್ನು ಮರುಳು ಮಾಡುವುದು ಸಾಧ್ಯವೇ?'

'ನಾಗೇಂದ್ರ, ನಿನ್ನ ಅನುಭವ ಏಕಮಾತ್ರವಾದುದಲ್ಲ—ಜಗತ್ತಿನಲ್ಲಿ ಇಂಥ ಘಟನೆಗಳು ಅನೇಕ ನಡೆಯುತ್ತವೆ.'

'ಮನೆಯೆದುರಿಗೆ ಕೊಚ್ಚೆಯ ನೀರು ಹರಿಯುತ್ತದೆ. ನಾನು ಹೋಗಿ ಅದರಲ್ಲಿ ಏಕೆ ಕೈ ಅದ್ದಬೇಕಾಗಿತ್ತು?'

'ನಾಗೇಂದ್ರ—ನೀನು ನಿರಪರಾಧಿ'

'ನಾನು ನಿರಪರಾಧಿಯಾದರೆ—ಅಪರಾಧಿ ಯಾರು?'

'ಅವಳು—ನಿನ್ನನ್ನು ಸತ್ಯಭ್ರಷ್ಟನಾಗಿ ಮಾಡಿದ ಪತಿತೆ.'

'ನಾನು ಸತ್ಯವಂತನಾಗಿದ್ದರೆ ಯಾರೂ ನನ್ನನ್ನು ಸತ್ಯಭ್ರಷ್ಟನನ್ನಾಗಿ ಮಾಡಲು ಸಾಧ್ಯವಾಗುತ್ತಿರಲಿಲ್ಲ.'

'ಅರಿಯದೆ ಮಾಡಿದ ತಪ್ಪಿಗೆ ಇಷ್ಟು ಮರುಗಬೇಕೇ ?'

'ತಪ್ಪು ! ಎಂಥ ತಪ್ಪು ! ಇದಕ್ಕಿಂತಲೂ ಇನ್ನು ಹೇಯವಾದುದು, ನೀಚತರವಾದುದು ಜಗತ್ತಿನಲ್ಲಿದೆಯೇ. ಅವಳು—ಅವಳು ನನ್ನ ಚಿಕ್ಕ ತಾಯಿ !'

'ಅವಳು ಹೆಣ್ಣು ಎಂಬುದನ್ನು ಮರೆಯಬೇಡ.'

'ಹೆಣ್ಣೇ ಹೆಂಡತಿ-ಹೆಣ್ಣೇ ತಾಯಿ ; ಆದರೆ ತಾರತಮ್ಯ ಬೇಡವೇ ?'

'ತಂದೆ ಮಗಳನ್ನು ಮದುವೆಯಾಗುವಾಗ ತಾರತಮ್ಯಜ್ಞಾನವಿರಬೇಕಾಗಿತ್ತು.'

'ತಂದೆ ಯಾರು, ಮಗಳು ಯಾರು ?'

'ರಂಗನಾಯಕಿಯನ್ನು ಮದುವೆಯಾಗುವ ಅಧಿಕಾರ ಮಹಾಬಲರಾಯನಿಗಿರಲಿಲ್ಲ. ಅವನಿಗೆ ಜೀವನದ ಸಂಜೆ. ಅವನ ಬಾಳಹಕ್ಕಿ ಗೂಡು ಸೇರುವ ಕಾಲ ; ಅವಳಿಗೆ ಬಾಳಿನ ಉಷಃಕಾಲ. ಅವಳ ಬಾಳಹಕ್ಕಿ ಗರಿಗೆದರಿಕೊಂಡು ಗೂಡು ಬಿಟ್ಟು ಹೊರಹೊರಡುವ ಕಾಲ. ಈ ವಿಷಮ ವಿವಾಹಕ್ಕೆ ಸಮಾಜದ ಸಮ್ಮತಿ ಇದೆ. ಆದರೆ ಇದು ನಿಸರ್ಗದ ದ್ರೋಹವಲ್ಲವೇ ? ಪ್ರಕೃತಿ ಎಂದಾದರೂ ತನ್ನ ಪರಾಜಯವನ್ನು ಸಹಿಸುವುದೇ ?'

'ನಾನು ಪಾಪಿ ! ಯಾರೆಷ್ಟು ಹೇಳಿದರೂ ನಾನು ಪಾಪಿ ! ಪಾಪಲೇಪನದಿಂದ ಮೈಲಿಗೆಗೊಂಡ ಈ ದೇಹವನ್ನು ಸುಡಬೇಕು. ಸುಲೋಚನನಿಗೆ ಹೇಗೆ ಮುಖ ತೋರಿಸಲಿ, ತಂದೆಯೆದುರು ಯಾವ ಮುಖ ಹೊತ್ತುಕೊಂಡು ನಿಲ್ಲಲಿ ?'

ಏನುಮಾಡಬೇಕೆಂಬುದು ನಾಗೇಂದ್ರನಿಗೆ ತೋರಲಿಲ್ಲ. ಸುತ್ತಿ ಸುತ್ತಿ ಕಾಲುಗಳು ದಣಿದವು. ಮನಸ್ಸಿಗೆ ಶಾಂತಿ ದೊರಕಲಿಲ್ಲ. ನೇರವಾಗಿ ಲಾಲ್ ಬಾಗಿಗೆ ಹೋಗಿ ಅಲ್ಲಿ ಗಂಗೆಗೆ ತನ್ನನ್ನರ್ಪಿಸಿಕೊಂಡು ಬಿಡುವದೇ ಪರಿಹಾರ ಎಂದು ಯೋಚಿಸಿದ.

'ಅಯ್ಯೋ ? ಸುಲೋಚನ ಈಗ ತುಂಬುಗರ್ಭಿಣಿ. ಇನ್ನು ನಾಲ್ಕೆಂಟು ತಿಂಗಳಲ್ಲಿ ಮಗನನ್ನೋ ಮಗಳನ್ನೋ ಎತ್ತಿಕೊಂಡು ಬರುತ್ತಾಳೆ. ನನ್ನ

ಪಾಪಕ್ಕೆ ನನಗೆ ಶಿಕ್ಷೆಯಾಗಬೇಕು. ಆದರೆ ಸುಲೋಚನ ಯಾವ ಅಪರಾಧ ಮಾಡಿದ್ದಾಳೆ? ಅವಳ ಗರ್ಭದಲ್ಲಿರುವ ಪಿಂಡ ಯಾವ ಅಪರಾಧ ಮಾಡಿದೆ? ನನ್ನ ತಪ್ಪಿಗಾಗಿ ಅವರಿಗೇಕೆ ಶಿಕ್ಷೆಯಾಗಬೇಕು.'

ತಾನು ಎಲ್ಲಿಗೆ ಹೋಗುತ್ತಿರುವೆನೆಂಬುದರ ಅರಿವು ನಾಗೇಂದ್ರನಿಗುಳಿಯಲಿಲ್ಲ. ನೇರವಾಗಿ ಕಾಲುಗಳು ಮನೆಯಕಡೆ ಸಾಗಿದವು.

ತಂದೆ ನಾಗೇಂದ್ರನಿಗಾಗಿ ಕಾಯುತ್ತಿದ್ದರು.

ಬಟ್ಟೆ ಬದಲಾಯಿಸಿ, ಕಾಲು ತೊಳೆದುಕೊಂಡು, ತಂದೆಯ ಜತೆ ಊಟಕ್ಕೆ ಕುಳಿತ. ರಂಗನಾಯಕಿ ಬಡಿಸುವುದಕ್ಕೆ ನಿಂತಿದ್ದಳು.

ಮಹಾಬಲರಾಯ ಮಗನನ್ನು ನೋಡಿ "ಏಕೆ ನಾಗೇಂದ್ರ ಮೈಯಲ್ಲಿ ಹುಷಾರಿಲ್ಲವೇ ?"

ಎಂದು ಕೇಳಿದ. ತಂದೆಯ ಪ್ರಶ್ನೆಗೆ ನಾಗೇಂದ್ರ ಚಕಿತನಾದ.

"ಆರೋಗ್ಯವಿಲ್ಲದೆ ಏನು ?"

"ನಿನಗೆ ಕೆಲಸದ ಹೊರೆ ಹೆಚ್ಚಾಗಿದೆ ಎಂಬುದನ್ನು ಬಲ್ಲೆ. ಬೇಕಾದರೆ ನಾಲ್ಕುದಿವಸ ನೀಲಗಿರಿಗೆ ಹೋಗಿಬಿಟ್ಟು ಬಾ. ಮುಂಬಯಿಗೆ ಬೇಕಾದರೆ ಹೋಗಿಬಿಟ್ಟು ಬಾ."

"ಏನೂ ಇಲ್ಲ ಅಣ್ಣ, ಬಿಸಿಲಿನ ತಾಪ. ಇದೇ ಬೇಸಿಗೆಯಾರಂಭವಾಗಿದೆ. ಸ್ವಲ್ಪ ರೂಢಿಯಾದರೆ ಸರಿಹೋಗುತ್ತದೆ."

"ಹೊಳೇನರಸೀಪುರಕ್ಕೆ ಹೋಗಿ ಸುಲೋಚನನನ್ನು ನೋಡಿಕೊಂಡು ಬರುವುದಿಲ್ಲವೇ? ಅವಳು ಊರಿಗೆ ಹೋದಮೇಲೆ ಒಮ್ಮೆಯೂ ನೀನು ಅವಳನ್ನು ನೋಡುವುದಕ್ಕೆ ಹೋಗಿಲ್ಲ."

"ಮಿಲ್ಲಿನಲ್ಲಿ ಬಟವಾಡೆಯಾಗಬೇಕು. ಇದು ಮುಗಿದಮೇಲೆ ಒಂದು ದಿನ ಹೋಗಿಬರುತ್ತೇನೆ."

ತಂದೆ ತೋರಿಸಿದ ಅಂತಃಕರಣ ನಾಗೇಂದ್ರನ ಹೃದಯಕ್ಕೆ ಹೊಸ ಕಿಚ್ಚಿಕ್ಕಿದಂತಾಯಿತು.

'ಇಂಥ ತಂದೆಗೆ ದ್ರೋಹ ಬಗೆದೆನಲ್ಲಾ !'

ಎಂದು ಚಿಂತಿಸಿದ.

ರಂಗನಾಯಕಿ ಕೈಯೂಟ ಅವನಿಗೆ ವಿಷಪ್ರಾಯವಾಯಿತು.

ರಾತ್ರಿ ಕಣ್ಣು ಹತ್ತಲಿಲ್ಲ. ಮನಸ್ಸಿನಲ್ಲಿ ತಳಮಳ. ಬೆಳಗಾದರೆ ಸಾಕಲ್ಲಾ ಎಂದು ಜಪಮಾಡತೊಡಗಿದ.

ಏನು ಮಾಡಿದರೂ ಅರಗಳಿಗೆ ನಿದ್ದೆ ಬಾರದು. ಎದ್ದು ಕುಳಿತು ದೀಪ ಹಚ್ಚಿ ಮೇಜಿನಮೇಲಿದ್ದ ಪುಸ್ತಕ ತೆಗೆದ. 'ಮ್ಯಾದಾಂ ಬಾವರಿ' ಮಧ್ಯಾಹ್ನ ರಂಗನಾಯಕಿ ಆರಿಸಿಕೊಂಡು ಹೋಗುವಾಗ ತೆಗೆದುಕೊಂಡು ಹೋಗದೆ, ಮರೆತುಬಿಟ್ಟು ಹೋದ ಪುಸ್ತಕ. ಕೈಯಲ್ಲಿ ಬಿಸಿಕೆಂಡವನ್ನು ಹಿಡಿದಂತಾಯಿತು. ಪುಸ್ತಕವನ್ನು ರೊಯ್ಯನೆಸೆದು ದೀಪ ಆರಿಸಿ ಮಲಗಿದ ಅದೇ ಚಿಂತೆ ಅದೇ ನೆನಪು-ಅದೇ ಮನಸ್ಸಿನ ಭೀಷಣ ಚೀತ್ಕಾರ !!

## ೩೭

ಮಾರನೆಯ ಮಧ್ಯಾಹ್ನ ಊಟಕ್ಕೆ ಮನೆಗೆ ಹೋಗಬಾರದೆಂದು ನಾಗೇಂದ್ರ ನಿಶ್ಚಯಿಸಿದ. ಮಿಲ್ಲಿನಲ್ಲಿ ಮಧ್ಯಾಹ್ನದ ಗಂಟೆ ಬಾರಿಸಿತು. ನೌಕರರು ಮನೆಗೆ ಹೊರಟರು; ಕೂಲಿಗಳು ಟಿಫನ್‌ಕ್ಯಾರಿಯರ್ ಇದ್ದ ಕೋಣೆಗೆ ಹೊರಟರು. ಆಫೀಸಿನಲ್ಲಿಯೇ ಕುಳಿತುಕೊಂಡು ಕ್ಷಣಕಾಲ ನಾಗೇಂದ್ರ ಯೋಚಿಸಿದ. ಯಾವುದೋ ಶಕ್ತಿ ಅವನನ್ನು ಹೊಡೆದೆಬ್ಬಿಸಿ ಮನೆಗೆ ಕರೆತಂದಿತು.

ಸ್ನಾನ, ಊಟ ಮುಗಿಸಿದ. ಕೂಡಲೆ ರೂಮುಸೇರಿ ಬಾಗಿಲು ಹಾಕಿಕೊಳ್ಳಬೇಕೆಂದು ನಿರ್ಧರಿಸಿಕೊಂಡಿದ್ದ. ರಂಗನಾಯಕಿ ಅವನನ್ನನುಸರಿಸಿಯೇ ಬಂದಳು.

"ಊಟವಾಯಿತೇ ?" ಎಂದು ಅವಳನ್ನು ನಾಗೇಂದ್ರ ಕೇಳಿದ.

"ಹೊಟ್ಟೆ ಹಸಿಯುತ್ತಿತ್ತು. ನಿಮಗೆ ಕಾಯದೆ ಊಟ ಮುಗಿಸಿಬಿಟ್ಟೆದ್ದೆ."

ರಂಗನಾಯಕಿಯ ಗಮನ ಮೂಲೆಯಲ್ಲಿ ಬಿದ್ದಿದ್ದ ಪುಸ್ತಕದ ಕಡೆ ಹೋಯಿತು. ಅದನ್ನು ಕೈಗೆತ್ತಿಕೊಂಡು

"ನನ್ನ ಮೇಲಿನ ಕೋಪ ಪುಸ್ತಕದ ಮೇಲೆ ತೀರಿಸಿಕೊಂಡಿರಾ ?"

"ನನಗೆ ಕೋಪ ಬಂದಿದೆಯೆಂದು ಯಾರು ಹೇಳಿದರು ?"

"ಯಾರೂ ಹೇಳಲಿಲ್ಲ. ನನ್ನ ಕಣ್ಣುಗಳೇ ಹೇಳಿದವು."

"ನೀವು ಒಳಗೆ ಬರಬಾರದಾಗಿತ್ತು."

"ನಾವಿಬ್ಬರೇ ಇರುವಾಗ 'ನೀವು' ಎಂದೇಕೆ ಸಂಬೋಧಿಸುವಿರಿ? ನಾನು ನಿಮಗೆ ದೂರದವಳಲ್ಲ."

"ನೀವು ಮಾಡುತ್ತಿರುವುದೇನು ಗೊತ್ತೇ?"

"ಅದನ್ನು ತಿಳಿಯುವುದಕ್ಕೇಕೆ ಹೊತ್ತುಗಳೆಯಲಿ."

"ನ್ಯಾಯವಲ್ಲ—ಇದು ನ್ಯಾಯವಲ್ಲ. ನಾನು....ನಿಮಗೆ...."

ರಂಗನಾಯಕಿ ಅವನು ಪಂಕ್ತಿ ಪೂರೈಸುವುದಕ್ಕೆ ಅವಕಾಶಕೊಡಲಿಲ್ಲಿ. ಅವನ ಬಳಿಸಾರಿ ಬಾಯಿ ಮುಚ್ಚಿದಳು.

ಅವಳ ಸುಕೋಮಲ ಕರಸ್ಪರ್ಶ ನಾಗೇಂದ್ರನಿಗೆ ರೋಮಾಂಚವನ್ನುಂಟುಮಾಡಿತು. ಅವಳ ಕಣ್ಣುಗಳಲ್ಲಿ ಅಡಗಿದ್ದ ತೀರದ ಹಸಿವನ್ನು ದಿಟ್ಟಿಸಿ ನೋಡಿದ. ಅವಳ ಕೋಮಲ ಕಾಯದ ಪ್ರತಿಯೊಂದು ಭಾಗವೂ ಹಸಿವಿನಿಂದ ಬೊಬ್ಬೆಯಿಡುತ್ತಿದ್ದವು. ಅವಳ ಎರಡು ಕೈಗಳನ್ನು ತನ್ನ ಕೈಗಳಿಂದ ಹಿಡಿದ. ವಿದ್ಯುತ್ ಸಂಚಾರವಾದಂತಾಯಿತು.

"ಬೇಡ ನಾಯಕಿ, ಆದದ್ದು ಆಗಿಹೋಯಿತು. ಅದನ್ನು ಮರೆತುಬಿಡೋಣ."

"ಸ್ವರ್ಗದ ಬಾಗಿಲನ್ನು ನನಗೆ ತೋರಿಸಿ ಮರುಕ್ಷಣವೇ ಪಪಾತಕ್ಕೆ ತಳ್ಳಿಬಿಡುವಿರಾ?"

"ಈಗ ಇಬ್ಬರೂ ಪಪಾತದ ದಾರಿ ಹಿಡಿದಿದ್ದೇವೆ."

"ಅಲ್ಲಿಯಾದರೂ ಜತೆಯಲ್ಲಿರುತ್ತೇವಲ್ಲಾ—ಅದೇ ತೃಪ್ತಿ."

"ನೀನು ಹೀಗೆ ಮಾತನಾಡಬಾರದು."

"ನನ್ನನ್ನೇಕೆ 'ನಾಯಕಿ' ಎಂದು ಕರೆದಿರಿ?"

"ಹಾಗೆ ನಾನು ಕರೆದೆನೇ?"

"ನೋಡಿದಿರಾ—ನಿಮ್ಮ ಮನಸ್ಸು ಏನನ್ನು ಬಯಸುತ್ತಿದೆಯೆಂಬುದನ್ನು ನೀವೇ ಕಾಣಿರಿ."

"ಅಯ್ಯೋ! ನನ್ನನ್ನೇಕೆ ಪರೀಕ್ಷೆ ಮಾಡುತ್ತಿರುವೆ?"

ಎಂದು ಅವಳ ಕೈಕೊಡವಿ, ಮಂಚದ ಮೇಲೆ ಕುಳಿತು ಕೈಗಳಿಂದ ಮುಖಮುಚ್ಚಿಕೊಂಡ. ದುಃಖಾಶ್ರು ಪ್ರವಾಹದಂತೆ ಹೊರಟಿತು.

ರಂಗನಾಯಕಿ ಅವನ ಪಕ್ಕದಲ್ಲಿ ಕುಳಿತು ತನ್ನ ಬಲಗೈಯಿಂದ ಅವನನ್ನಪ್ಪಿದಳು.

"ನೀವೇಕೆ ದುಃಖಿಸಬೇಕು ?"

"ನನಗಾಗಿ—ನಿನಗಾಗಿ—ನಮ್ಮಿಬ್ಬರನ್ನೂ ನಂಬಿದವರಿಗಾಗಿ."

"ನಿಮಗೂ ನಾನು ಬೇಡವಾದೆನೆ ?"

"ನಾನು ಬೇಡವೆನ್ನಲಿಲ್ಲ. ಈ ಬಗೆಯ ಸಂಬಂಧ...."

"ಸ್ಮಶಾನಕ್ಕೆ ಹೊರಡಲು ಸಿದ್ಧವಾಗಿದ್ದ ಶವಕ್ಕೆ ನನ್ನನ್ನು ಕಟ್ಟಿರೆಂದು ನಾನು ಬೇಡಿಕೊಳ್ಳಲಿಲ್ಲ."

"ನಿನ್ನ ಕೈಹಿಡಿದವರು ನಿನಗೆ ಏತಕ್ಕೆ ಕಡಿಮೆ ಮಾಡಿದ್ದಾರೆ ?"

"ಸ್ಪಷ್ಟವಾಗಿ ಹೇಳಲೇ ?"

"ಬೇಡ ಬೇಡ-ನೀನೇನು ಹೇಳುವೆಯೆಂಬುದನ್ನು ನಾನು ಬಲ್ಲೆ."

"ನೀವು ಬೇಡವೆಂದರೂ ಹೇಳುತ್ತೇನೆ ಕೇಳಿ. ನಾನೂ ಮನುಷ್ಯಳು. ನನಗೂ ರಾಗದ್ವೇಷಗಳಿವೆ. ನನ್ನ ಮನಸ್ಸಿನಲ್ಲಿಯೂ ಆಸೆ, ಬಯಕೆಗಳಿವೆ. ನನ್ನ ದೇಹವೂ ಅನುರಾಗ ಬಯಸುತ್ತದೆ."

"ನನ್ನಿಂದ ನಿನಗೆ ಅನುರಾಗ ದೊರೆಯುತ್ತದೆಂದು ಭಾವಿಸಿರುವೆಯಾ ?"

"ದೊರೆತಿದೆ."

"ಹೀಗೆ ಎಷ್ಟು ದಿವಸ ನಡೆಯಲು ಸಾಧ್ಯ ?"

"ಅರಳುವ ಹೂ ತಾನೆಷ್ಟುದಿನ ಬದುಕುತ್ತೇನೆಂದು ಯೋಚಿಸುವುದಿಲ್ಲ."

"ನಾವು ಮಾಡುತ್ತಿರುವುದು ಮಹಾ ಪಾಪಗೆಲಸ."

"ಅದರ ಹೊಣೆಗಾರಿಕೆ ನಮ್ಮದಲ್ಲ."

"ಇನ್ನು ಯಾರದು ?"

"ನಮ್ಮ ಯೌವನದ್ದು."

"ನಾಯಕೀ...."

"ರಮಣಾ...."

ಎನ್ನುತ್ತಾ ರಂಗನಾಯಕಿ ನಾಗೇಂದ್ರನ ತುಟಿಗಳನ್ನು ತನ್ನ ತುಟಿಗಳಿಂದ ಬಂಧಿಸಿದಳು.

ನಾಗೇಂದ್ರನ ಮನಸ್ಸಿನ ಹೊಯ್ದಾಟ ಕಾಲಕ್ರಮೇಣ ನಿಲ್ಲುತ್ತ ಬಂತು. ಅವನು ನಿತ್ಯದ ಗೆಲುವು ಕಾಣಲು ಬಹಳ ದಿವಸ ಹಿಡಿಯಲಿಲ್ಲ.

ಒಂದು ರಾತ್ರಿ ನಾಗೇಂದ್ರ ಬಹಳ ಹೊತ್ತಿನವರೆಗೆ ಓದುತ್ತ ಕುಳಿತಿದ್ದ. ರೂಮಿನಲ್ಲಿ ತುಂಬ ಶೆಖೆಯಾಗುತ್ತಿತ್ತು. ಪುಸ್ತಕ ತೆಗೆದಿಟ್ಟು ಗಾಳಿ ಸೇವನೆಗೆ ಹೊರಗೆ ಬಂದ. ಸ್ವಲ್ಪ ಹೊತ್ತು ಕಾಂಪೌಂಡಿನಲ್ಲಿ ಸುತ್ತಾಡಿ ಬಂದು ಮಲಗಿದ.

ಅವನಿಗೆ ನಿದ್ದೆ ಹತ್ತಲಿಲ್ಲ. ಕಣ್ಣುಮುಚ್ಚಿಕೊಂಡು ನಿದ್ದೆಯ ಧ್ಯಾನ ಮಾಡುತ್ತ ಮಲಗಿದ್ದ. ಸ್ವಲ್ಪ ಹೊತ್ತು ಕಳೆದಿರಬಹುದು. ತೊಟ್ಟಿಯ ಗಡಿಯಾರ ಮೂರು ಗಂಟೆ ಹೊಡೆಯಿತು. ಅವನ ಬಲತೋಳನ್ನು ಯಾರೋ ಮುಟ್ಟಿದಂತಾಯಿತು. ಗಾಬರಿಯಾಗಿ 'ಯಾರು' ಎಂದ. ಮೃದುವಾದ ಸ್ತ್ರೀಕಂಠ 'ಶುಶ್' ಎಂದಿತು.

"ನಾಯಕಿ !"

ರಂಗನಾಯಕಿ ಉತ್ತರಕೊಡದೆ ಹಾಸಿಗೆಯ ಮೇಲೆ ಪವಡಿಸಿದಳು ರಾತ್ರಿಯ ಅನುಭವವನ್ನು ಬೆಳಿಗ್ಗೆ ನಾಗೇಂದ್ರ ಸ್ಮರಿಸಿಕೊಂಡಾಗ ಅವನ ದೇಹ ಕಂಪಿಸಿ, ಬೆವರು ಮಿಡಿಯಿತು. ಬೆಳಿಗ್ಗೆ ಮಹಾಬಲರಾಯ ಮಗನೊಂದಿಗೆ ಉಪಹಾರ ಮುಗಿಸಿ ಅಂಗಡಿಗೆ ಹೊರಡಲು ಸಿದ್ಧನಾದ. ಮಗ ಯಥಾಸಾವಕಾಶವಾಗಿರುವುದನ್ನು ನೋಡಿ

"ಮಿಲ್ಲಿಗೆ ಹೊರಡಲು ಹೊತ್ತಾಗಲಿಲ್ಲವೇ ನಾಗೇಂದ್ರ"

ಎಂದು ಕೇಳಿದ.

"ಬ್ಯಾಂಕಿನ ಕೆಲಸವಿತ್ತು. ಮುಗಿಸಿಕೊಂಡು ಒಂದೇ ಸಲ ಮಿಲ್ಲಿಗೆ ಹೋಗುತ್ತೇನೆ."

"ಹಾಗಾದರೆ ಊಟಮಾಡಿಕೊಂಡೇ ಹೋಗು"

ಎಂದು ಮಹಾಬಲರಾಯ ಹೇಳಿ ಹೋದ.

ಕಾರು ಹೊರಟ ಧ್ವನಿ ಕೇಳಿ ರಂಗನಾಯಕಿ ನಾಗೇಂದ್ರನ ರೂಮಿಗೆ ಬಂದಳು. ನಾಗೇಂದ್ರನ ಮುಖ ನೋಡಿ ರಂಗನಾಯಕಿ ತೃಪ್ತಿಯ ನಗೆ ನಕ್ಕಳು.

"ನಾಯಕಿ, ರಾತ್ರಿ ಹೇಗೆ ಬಂದೆ ?"

"ನೀವು ರೂಮಿನ ದೀಪ ಆರಿಸುವುದನ್ನೇ ಕಾಯುತ್ತಿದ್ದೆ."

"ಅಣ್ಣ........"

"ಅವರಿಗೆ ಒಳ್ಳೆಯ ನಿದ್ದೆ."

"ಒಂದುವೇಳೆ ಎಚ್ಚರವಾಗಿದ್ದರೆ...."

"ನಿಮಗೇಕೆ ಅಷ್ಟು ಹೊತ್ತು ನಿದ್ದೆ ಬಂದಿರಲಿಲ್ಲ ?"

"ರಾತ್ರಿ ತುಂಬ ಶೆಖೆಯಾಗಿತ್ತು."

"ಅದಲ್ಲ ನಿಜವಾದ ಕಾರಣ"

"ನಿಜವಾದ ಕಾರಣವೇನು ?"

"ನನಗೆ ಏತಕ್ಕೆ ಬರಲಿಲ್ಲವೋ ಅದಕ್ಕೇ ನಿಮಗೂ ಬರಲಿಲ್ಲ."

"ನಾವು ಆಡುತ್ತಿರುವುದು ಹುಲಿಯ ಜತೆ ಸರಸ."

"ಸರಸವಾಡಿದರೆ ಹುಲಿಯ ಜತೆಯೇ ಆಡಬೇಕು. ಇಲಿಯ ಜತೆ ಆಡಿದರೆ ಏನು ಸಾರ್ಥಕ ?"

"ನಿನ್ನ ಧೈರ್ಯವೇ ಧೈರ್ಯ."

"ಅದಿರಲಿ—ಆ ಮೇಲೆ ನಿದ್ದೆ ಬಂದಿತೇ ?"

ಅವಳ ಪ್ರಶ್ನೆಗೆ ನಾಗೇಂದ್ರ ನಕ್ಕುಬಿಟ್ಟ.

ಒಂದು ದಿನ ಬೆಳಿಗ್ಗೆ ನಾಗೇಂದ್ರನ ರೂಮಿನಿಂದ ರಂಗನಾಯಕಿ ತನ್ನ ರೂಮಿಗೆ ಬಂದಳು. ಮಹಾಬಲರಾಯನಿಗೆ ಎಚ್ಚರವಾಗಿತ್ತು.

"ಇದೇನು ಇಷ್ಟು ಬೇಗ ಎದ್ದೆ ರಂಗೂ ?"

ಎಂದು ಕೇಳಿದ.

"ಇವತ್ತು ನಾನು ನೀರು ಹಾಕಿಕೊಳ್ಳಬೇಡವೇ ? ಒಲೆ ಉರಿ ನೋಡುವ ಎಂದು ಎದ್ದಿದ್ದೆ."

"ಕಾಡಮ್ಮನವರಿಗೆ ಹೇಳಬೇಕಾಗಿತ್ತು."

"ರಾತ್ರಿ ಅವರಿಗೆ ಹೇಳುವುದನ್ನು ಮರೆತುಬಿಟ್ಟೆ."

ಅಂದು ರಂಗನಾಯಕಿ ತನ್ನ ಧೈರ್ಯವನ್ನು ತಾನೇ ಮೆಚ್ಚಿಕೊಂಡಳು.

೩೮

ಮುಂಬಯಿಂದ ಮಹಾಬಲರಾಯನಿಗೆ ಕಾಗದ ಬಂದಿತ್ತು. 'ನವ ಭಾರತ್ ಮಿಲ್ಲಿನ ಏಜನ್ಸಿ ಸಿಕ್ಕುವ ಸಂಭವವಿದೆ. ಕೂಡಲೆ ಬಂದು ವ್ಯವ

ಹಾರ ಮುಗಿಸಬೇಕು' ಎಂದು ನಂಜುಂಡಯ್ಯನವರು ಬರೆದಿದ್ದರು. ತಾನು ಮುಂಬಯಿಗೆ ಹೋಗುವುದಕ್ಕಿಂತ ಜನರಲ್ ಮ್ಯಾನೇಜರಾಗಿದ್ದ ನಾಗೇಂದ್ರನೇ ಹೋಗುವುದು ಒಳ್ಳೆಯದೆಂದು ಮಹಾಬಲರಾಯನಿಗೆ ತೋರಿತು. ಮಗನಿಗೆ ನಂಜುಂಡಯ್ಯನವರ ಕಾಗದ ತೋರಿಸಿ

"ಏನು ಮಾಡುತ್ತೀಯಪ್ಪಾ"

ಎಂದು ಕೇಳಿದ.

"ಹೋಗು ಎಂದರೆ ಹೋಗುತ್ತೇನೆ."

"ನವಭಾರತ್ ಏಜನ್ಸಿ ಸಿಕ್ಕಿದರೆ ನಾವು ಸೊಗಸಾಗಿ ಧಾರೀವಾಲ್, ಲಾಲಿವ್ಲಿಯವರ ಜತೆ ಸ್ಪರ್ಧೆ ಹೂಡಬಹುದು. ನೀಲಗಿರಿಯಲ್ಲಿ ಈ ಬಟ್ಟೆಗಳ ಮಾರಾಟದ ವ್ಯವಸ್ಥೆ ಮಾಡಿಬಿಟ್ಟರೆ ಒಳ್ಳೆಯ ಲಾಭ ಸಿಕ್ಕುತ್ತದೆ."

"ದೊಡ್ಡ ವ್ಯವಹಾರ—ನಾನು ಹೋಗುವುದಕ್ಕಿಂತ ನೀನೇ ಹೋದರೆ ಒಳ್ಳೆಯದಲ್ಲವೇ ?"

"ಇವೆಲ್ಲಾ ಇನ್ನು ಮೇಲೆ ನಿನಗೇ ಸೇರಿದ್ದು ನಾಗೇಂದ್ರ. ನಾನು ಆದಷ್ಟು ಬೇಗ ವ್ಯವಹಾರದಿಂದ ವಿಶ್ರಾಂತಿ ಪಡೆಯಬೇಕೆಂದಿದ್ದೇನೆ. ಇನ್ನು ಮೇಲೆ ವೆಂಕಟರಾಮೂನ ಅಂಗಡಿಗೆ ಹಾಕುತ್ತೇನೆ. ಯಾವಾಗ ಹೊರಡುತ್ತೀ ?"

"ಯಾವಾಗ ಹೊರಡು ಎಂದರೆ ಆವಾಗ ಹೊರಡುತ್ತೇನೆ."

"ಶನಿವಾರ ದಿನ ಚೆನ್ನಾಗಿದೆ ಹೊರಟುಬಿಡು. ಹೊಳೇನರಸೀಪುರಕ್ಕೆ ಹೋಗಿ ಸುಲೋಚನನನ್ನು ನೋಡಿಕೊಂಡು ಹೋಗು."

"ಹಾಗೇ ಆಗಲಿ"

ಎಂದು ನಾಗೇಂದ್ರ ಒಪ್ಪಿಕೊಂಡ.

ನಾಗೇಂದ್ರನ ಪ್ರಯಾಣದ ಸುದ್ದಿ ಕೇಳಿ ರಂಗನಾಯಕಿ ಅಸ್ತವ್ಯಸ್ತಳಾದಳು. ಅಂದೇ ಮಧ್ಯಾಹ್ನ

"ನೀವೇಕೆ ಒಪ್ಪಿಕೊಂಡಿರಿ; ಅವರನ್ನೇ ಕಳಿಸಬಾರದಾಗಿತ್ತೇ ?"

"ನಾನೇ ಹೋಗಬೇಕೆಂದು ಅವನು ಹೇಳಿದಾಗ ಸಾಧ್ಯವಿಲ್ಲವೆಂದು ಹೇಗೆ ಹೇಳಲಿ."

"ನಾಲ್ಕುದಿವಸ ಮುಂದಕ್ಕೆ ತಳ್ಳಿದ್ದರೆ ಆಗಿತ್ತು."

"ತಡಮಾಡುವ ವ್ಯವಹಾರವಲ್ಲ."

"ಹಿಂದಿರುಗುವುದು ಯಾವಾಗ ?"

"ಮುಂಬಯಿ ಕೆಲಸ ಮುಗಿದೊಡನೆಯೇ ಬರುತ್ತೇನೆ ಅಲ್ಲಿ ಕುಳಿತು ಕೊಂಡು ನಾನೇನುಮಾಡಲಿ."

"ಕಾಗದ ಬರೆಯುತ್ತೀರಾ ?"

"ಖಂಡಿತ ಬರೆಯುತ್ತೇನೆ."

"ದಿನವೂ ಬರೆಯಬೇಕು."

"ಹಾಗೇ ಆಗಲಿ."

"ಹೊಳೇನರಸಿಪುರದಲ್ಲಿ ಮೈಮರೆತು ಬಿಡುತ್ತೀರೇನೋ ?"

ನಾಗೇಂದ್ರ ಅವಳ ಪ್ರಶ್ನೆಗೆ ಉತ್ತರ ಕೊಡುವ ಸಾಹಸಮಾಡಲಿಲ್ಲ.

ಮಧ್ಯರಾತ್ರಿ ಕಳೆದೀತೇ ಎಂದು ರಂಗನಾಯಕಿ ತಪಸ್ಸು ಮಾಡವುದ ಕ್ಕಾರಂಭಿಸಿದಳು. ನಾಗೇಂದ್ರ ಮುಂಬಯಿಗೆ ಪ್ರಯಾಣ ಬೆಳೆಸುವವರೆಗೆ ಒಂದೂ ರಾತ್ರಿಯೂ ಅವನ ಜತೆಯನ್ನವಳು ತಪ್ಪಿಸಿಕೊಳ್ಳಲಿಲ್ಲ.

ಶುಕ್ರವಾರ ರಾತ್ರಿ ರಂಗನಾಯಕಿಯನ್ನು ಸಮಾಧಾನ ಮಾಡುವುದು ನಾಗೇಂದ್ರನಿಗೆ ಕಷ್ಟಸಾಧ್ಯವಾಯಿತು. ಏನು ಹೇಳಿದರೂ ಅವಳು ಅಳು ನಿಲ್ಲಿಸಲೊಲ್ಲಳು. ಎಲ್ಲಿ ತಂದೆಗೆ ಎಚ್ಚರವಾಗಿ ಬಿಡುವುದೋ ಎಂಬ ಭಯ ನಾಗೇಂದ್ರನನ್ನಾವರಿಸಿತು.

ಶನಿವಾರ ಬೆಳಿಗ್ಗೆ ರೈಲು ಹತ್ತಿ ಕುಳಿತಾಗ ನಾಗೇಂದ್ರನ ಮನಸ್ಸಿಗೆ ವಿಚಿತ್ರರೀತಿಯ ಸಮಾಧಾನ ತೋರಿತು.

ಹೊಳೆಯನರಸೀಪುರಕ್ಕೆ ರೈಲು ಸಂಜೆ ಐದೂಕಾಲಿಗೆ ಸೇರಿತು. ನಾಗೇಂದ್ರನ ಮಾವನವರೇ ಸ್ಟೇಷನ್ನಿಗೆ ಬಂದು ಅಳಿಯನನ್ನೂ ಮನೆಗೆ ಕರೆದುಕೊಂಡು ಹೋದರು.

ತುಂಬಿದ ಗರ್ಭಿಣಿಯಾದ ಹೆಂಡತಿಯನ್ನು ನಾಗೇಂದ್ರ ಕಣ್ತುಂಬ ನೋಡಿದ. ಗಂಡನನ್ನು ನೋಡಿದ ಸಂತೋಷದಲ್ಲಿ ಸುಲೋಚನ ಕಣ್ಣೀರು ಸುರಿಸಿದಳು. ನಾಗೇಂದ್ರನ ಕಣ್ಣುಗಳಿಂದಲೂ ಧಾರೆ ಹರಿಯಿತು.

ಸುಲೋಚನ ಗಂಡನನ್ನಪ್ಪಿ

"ನನ್ನ ದೊರೆ ಏಕೆ ಕಣ್ಣೀರು ಹಾಕಬೇಕು."

ಎಂದಳು. ನಾಗೇಂದ್ರನ ದುಃಖ ಉಮ್ಮಳಿಸಿ ಬಂತು.

"ನೀವು ಇಲ್ಲಿಗೆ ತಡವಾಗಿ ಬಂದಿರೆಂದು ನನಗೆ ಕೋಪವಿಲ್ಲ. ಕೊನೆಗೂ ಬಂದಿರಲ್ಲಾ...."

"ಆರೋಗ್ಯವಾಗಿದ್ದೀಯಾ ?"

"ನೋಡಿ, ಹೇಗಿದ್ದೇನೆ. ನಾನು ಬಲು ಜಂಭಗಾತಿಯೆಂದು ಇಲ್ಲಿ ನನ್ನ ನಂಟರಿಷ್ಟರೆಲ್ಲಾ ಬಯ್ಯುತ್ತಾರೆ."

"ಜಂಭಗಾತಿಯೆಂದೇಕೆ ಕರೆಯುತ್ತಾರೆ."

"ಏಕೆ ನೀವೇ ಹೇಳಿ"

ಎಂದು ಕಿಲಕಿಲನೆ ನಕ್ಕಳು. ಅವಳ ಮಾತಿನ ಮುಗ್ಧಮಾಧುರ್ಯ ನಾಗೇಂದ್ರನ ಕರುಳಿರಿಯಿತು.

"ನಿಮ್ಮನ್ನು ಬಿಟ್ಟಿರಲಾರೆ ದೊರೆ"

"ನಾನೂ ನಿನ್ನ ಬಿಟ್ಟಿರಲಾರೆ ಸುಲೋಚನ."

ಆ ಮಾತು ಹೇಳುವಾಗ ನಾಗೇಂದ್ರನ ಗಂಟಲು ಕಟ್ಟಿಬಂತು.

"ಇನ್ನೂ ನಾಲ್ಕು ವರ್ಷ ಸ್ವತಂತ್ರವಾಗಿರಲು ಸಾಧ್ಯವಿಲ್ಲವಾಯಿತೆಂದು ಯೋಚನೆ ಬರುವುದೇ ?"

"ನನ್ನ ಮಗನ ಮುಖ ನೋಡಲು ನನಗೆ ಆತುರವಿಲ್ಲವೇ ?"

ನಾಗೇಂದ್ರ ಆಡಿದ ಮಾತು ಸುಲೋಚನೆಯ ಹೃದಯಕ್ಕೆ ಅಮೃತ ಸೇಚನೆ ಮಾಡಿದಂತಾಯಿತು. ಇಷ್ಟು ದಿನ ಗಂಡನಿಗಾಗಿ ಕಾದುದು ಸಾರ್ಥಕವಾಯಿತೆಂದು ಭಾವಿಸಿದಳು.

"ಊಟ ತಿಂಡಿ ಸರಿಯಾಗಿ ಆಗುತ್ತಿದೆಯೇ ?"

"ಆಗುತ್ತಿದೆ."

"ಮಾವನವರು ಹೇಗಿದ್ದಾರೆ ?"

"ಚೆನ್ನಾಗಿದ್ದಾರೆ."

"ಅತ್ತೆಮ್ಮನವರು...."

"ಅವರು ಚೆನ್ನಾಗಿದ್ದಾರೆ."

"ಅವರು ಹೇಗೆ ? ಒಳ್ಳೆಯವರೇ ? ಅವರು ಮನೆಗೆ ಬಂದ ಕೂಡಲೆ ನಾನು ಹೊರಟುಬಿಟ್ಟೆ. ನೀವು ಅವರೊಂದಿಗೆ ಮಾತನಾಡುತ್ತೀರಾ ?"

"ಹೆಚ್ಚು ಮಾತನಾಡುವುಕ್ಕೆ ಕಾರಣವೇನಿದೆ ? ಕಾಡಮ್ಮನವರು ಒಳಗಿದ್ದರೆ ಅವರೇ ಅಡಿಗೆಮಾಡಿ ಬಡಿಸುತ್ತಾರೆ."

"ನೀವೇಕೆ ಇಷ್ಟು ಗಂಭೀರವಾಗಿದ್ದೀರಿ ? ಮನಸ್ಸಿನಲ್ಲೇನು ಚಿಂತೆ ?"

"ಏನು ಇಲ್ಲವಲ್ಲ. ಮನಸ್ಸಿಗೆ ತುಂಬ ಸಂತೋಷವಾದಾಗ ಮಾತು ಹೊರಡುವುದಿಲ್ಲ ಸುಲೋಚನ."

"ಈ ಮೂರು ತಿಂಗಳಲ್ಲಿ ನಿಮ್ಮಲ್ಲಿ ಏನೋ ವ್ಯತ್ಯಾಸವಾದಂತಿದೆ. ಮೊದಲಿನ ಲವಲವಿಕೆ ಇಲ್ಲ."

"ಜವಾಬ್ದಾರಿ ಹೆಗಲಮೇಲೆ ಬಿದ್ದಿದೆ. ಅಣ್ಣ ಮಿಲ್ ಕೆಲಸ ಸಂಪೂರ್ಣ ನನಗೊಪ್ಪಿಸಿದ್ದಾರೆ. ವೆಂಕಟರಾಮೂನ ಅಂಗಡಿಗೆ ಹಾಕುತ್ತಾರಂತೆ."

"ದೊಡ್ಡಕೆಲಸ. ತುಂಬ ಜವಾಬ್ದಾರಿ ಇದೆಯೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಮನೆಯಲ್ಲಿಯೂ ಅದರ ಚಿಂತೆಮಾಡಬೇಕೇ ?"

"ಇಲ್ಲ, ಮಾಡುವುದಿಲ್ಲ. ನೀನು ನನ್ನ ಬಳಿ ಇರುವಾಗ ನಾನು ಯಾವ ಚಿಂತೆಯನ್ನೂ ಮಾಡುವುದಿಲ್ಲ."

"ನಿಮ್ಮ ಮನಸ್ಸಿಗೆ ಯೋಚನೆಯಾಗದಂತೆ ನಾನು ನೋಡಿಕೊಳ್ಳುತ್ತೇನೆ."

"ಸುಲೋಚನಾ, ನಾನೊಂದು ಪ್ರಶ್ನೆ ಕೇಳುತ್ತೇನೆ. ಸ್ಪಷ್ಟವಾಗಿ, ನೇರವಾಗಿ ಉತ್ತರ ಹೇಳುವೆಯಾ ?"

"ನನ್ನಿಂದೇನಾದರೂ ತಪ್ಪಾಗಿದೆಯೇ ?"

"ಛೆ ! ನಿನ್ನಲ್ಲಿ ತಪ್ಪು ತೆಗೆಯುವುದಕ್ಕೆ ಕಾರಣವೇನಿದೆ ?"

"ಇನ್ನೇನು ಪ್ರಶ್ನೆ ?"

"ನೀನು ನನ್ನನ್ನು ತುಂಬಾ ಪ್ರೀತಿಸುವೆಯಲ್ಲವೇ ?"

"ಆ ವಿಷಯದಲ್ಲಿ ನೀವು ಸಂದೇಹಪಡುವಂತೆ ನಾನು ಮಾಡಿರುವೆನೇ ?"

"ಇಲ್ಲ-ಖಂಡಿತವಾಗಿಯೂ ಇಲ್ಲ. ನನ್ನ ಪ್ರಶ್ನೆಗೆ ನೇರವಾದ ಉತ್ತರ ಕೊಡು."

"ನಿಮ್ಮನ್ನು ಪ್ರೀತಿಸದೆ ನಾನು ಇನ್ನು ಯಾರನ್ನು ಪ್ರೀತಿಸಲಿ ?"

"ನನ್ನ ಬಗ್ಗೆ ನಿನಗೆ ತುಂಬ ಗೌರವವಿದೆಯಲ್ಲವೇ ?"

"ಹೆಂಡತಿ ಗಂಡನ ಬಗ್ಗೆ ಗೌರವ ತಳೆಯುವುದು ಹೊಸದಲ್ಲವಲ್ಲ."

"ನನ್ನ ಸದ್ಗುಣದ ಬಗ್ಗೆ ನಿನಗೆ ಸ್ವಲ್ಪವೂ ಅನುಮಾನವಿಲ್ಲ"

"ಇದೇನು ಹೀಗೆ ಮಾತನಾಡುತ್ತಿರುವಿರಿ?"

"ನನ್ನ ಪ್ರಶ್ನೆಗೆ ಉತ್ತರಕೊಡು."

"ನಿಮ್ಮ ಸದ್ಗುಣವನ್ನು ಪೂಜಿಸುತ್ತೇನೆ."

"ನೀನು ತಿಳಿದುಕೊಂಡಿರುವಷ್ಟು ನಾನು ಗುಣಶಾಲಿಯಲ್ಲವೆಂದು ಗೊತ್ತಾದರೆ........ನನ್ನ ಬಾಳು ಮೋಸದ ಬಾಳು ಎಂದು ತಿಳಿದರೆ........"

"ಅದು ಎಂದಿಗೂ ಸಾಧ್ಯವಿಲ್ಲ."

"ಒಂದು ವೇಳೆ...."

"ಯಾವ ಕಾದಂಬರಿ ಓದುತ್ತಿದ್ದಿರಿ?"

"ಏಕೆ?"

"ನೀವು ಆಡುತ್ತಿರುವುದು ನಿಮ್ಮ ಮಾತುಗಳಲ್ಲ. ಹೊಸಹೊಸ ಮಾತುಗಳನ್ನಾಡುತ್ತಿರುವಿರಿ ಅದಕ್ಕೋಸ್ಕರ ಕೇಳಿದೆ."

"ನೀನು ತಿಳಿದುಕೊಂಡಿರುವಷ್ಟು ನಾನು ಯೋಗ್ಯನಲ್ಲವೆಂದು ಖಚಿತವಾದರೂ ನನ್ನ ಕೈಬಿಡುವದಿಲ್ಲವಷ್ಟೇ?"

ಸುಲೋಚನ ಅಪಾರಕರುಣೆಯಿಂದ ನಾಗೇಂದ್ರನ ಕೆನ್ನೆ ನೇವರಿಸಿ ಅವನ ಭುಜದ ಮೇಲೆ ತಲೆಯಿಟ್ಟಳು. ಅವಳ ಬಲಗೈ ಅವನನ್ನು ಬಳಸಿತು.

"ನೀವೇ ನನ್ನ ಸಮಸ್ತವೂ ಅಲ್ಲವೇ? ನಿಮ್ಮ ಕೈಬಿಟ್ಟು ನಾನು ಎಲ್ಲಿಗೆ ಹೋಗಲಿ. ನಿಮಗಿಂತ ನನಗೆ ಹೆಚ್ಚಿನವರು ಯಾರಿದ್ದಾರೆ?"

ನಾಗೇಂದ್ರನ ಮನಸ್ಸಿಗೆ ಅಪೂರ್ವಶಾಂತಿ ಸಿಕ್ಕಿದಂತಾಯಿತು. ಮರುಕ್ಷಣವೇ ಮನಸ್ಸು ಮತ್ತಷ್ಟು ಕಾತರವಾಯಿತು. ಅವ್ಯಕ್ತ ನೋವೊಂದು ಅವನ ಹೃದಯವನ್ನು ಹಿಂಡತೊಡಗಿತು.

'ಎಂಥ ಮೋಸ—ಎಂಥ ಕಾಪಟ್ಯ—ಎಂಥ ಬಾಳು!'

ಎಂದು ಮನಸ್ಸು ಮೊರೆಯಿತು.

ನಾಗೇಂದ್ರ ಹೆಚ್ಚು ದಿನ ಹೊಳೆಯುನರಸೀಪುರದಲ್ಲಿ ನಿಲ್ಲುವಂತಿರಲಿಲ್ಲ. ಮುಂಬಯಿ ಕೆಲಸ ಅವನ ದಾರಿ ನೋಡುತ್ತಿತ್ತು. ಎರಡು ದಿನಗಳ ಮೇಲೆ ತಾನು ಹೊರಡಬೇಕಾಗಿರುವ ಸಂಗತಿಯನ್ನು ಸುಲೋಚನಳಿಗೆ ತಿಳಿಸಿದ.

"ಇನ್ನು ಒಂದೆರಡು ದಿನವಾದರೂ ನಿಲ್ಲಲು ಸಾಧ್ಯವಿಲ್ಲವೇ ?"

ಎಂದು ಕಂಬನಿದುಂಬಿ ಕೇಳಿದಳು.

"ಬೊಂಬಾಯಿ ಕೆಲಸ ಕುತ್ತಿಗೆಯ ಮೇಲೆ ಕುಳಿತಿದೆ. ಇಲ್ಲದಿದ್ದರೆ ಎರಡೇಕೆ ನಾಲ್ಕುದಿವಸ ಇರುತ್ತಿದ್ದೆ."

"ಅಲ್ಲಿ ಎಷ್ಟುದಿವಸ ಇರಬೇಕಾಗಿದೆ ?"

"ಒಂದು ವಾರದಲ್ಲಿ ನನ್ನ ಕೆಲಸವೆಲ್ಲಾ ಮುಗಿಯಬಹುದು."

"ಊರಿಗೆ ಹಿಂದಿರುಗುವಾಗ ಇಲ್ಲಿ ಬಂದು ಹೋಗಬೇಕು."

"ಹಾಗೆ ಆಗಲಿ—ಖಂಡಿತ ಬಂದು ಹೋಗುತ್ತೇನೆ."

"ನನ್ನ ವೈಕಳೆಯುವ ದಿನವೂ ಬಹಳ ದೂರವಿಲ್ಲ. ನೀವು ಇಲ್ಲಿಗೆ ಬರದೆ ಊರಿಗೆ ಹೋಗಿಬಿಟ್ಟರೆ........"

"ತಪ್ಪಿಸುವುದಿಲ್ಲ ಸುಲೋಚನಾ—ಖಂಡಿತ ಬರುತ್ತೇನೆ."

ಎಂದು ವಾಗ್ದಾನ ಮಾಡಿದ.

೩೯

ನಾಗೇಂದ್ರ ಮುಂಬಯಿಗೆ ಪ್ರಯಾಣ ಮಾಡಿದಮೇಲೆ ರಂಗನಾಯಕಿಯ ಚಿತ್ತಸ್ವಾಸ್ಥ್ಯ ಉಳಿಯಲಿಲ್ಲ. ಗಂಟೆಗಟ್ಟಳೆ ರೂಮಿನಲ್ಲಿ ಕುಳಿತು ತಾನು ಅವನೊಂದಿಗೆ ಕಳೆದ ವೇಳೆಯನ್ನು ಕುರಿತು ಚಿಂತಿಸುವಳು. ಕಾಡಮ್ಮನವರು ನಾಲ್ಕಾರುಬಾರಿ ಎಚ್ಚರಿಸಿದಮೇಲೆ ಎದ್ದು ಊಟಕ್ಕೆ ಹೋಗುವಳು. ಬಾಯಿಗೆ ಊಟ ರುಚಿಸುತ್ತಿರಲಿಲ್ಲ. ಅವಳ ಸ್ಥಿತಿ ನೋಡಿ ಕಾಡಮ್ಮನವರು ಬೇರೆ ಲೆಕ್ಕಹಾಕಿಕೊಂಡು

"ಏಕೇಂದ್ರೆ ಸರಿಯಾಗಿ ಊಟವೇ ಮಾಡಲಿಲ್ಲ."

ಎಂದು ಕೇಳಿದರು.

"ಮಾಡಿದೆನಲ್ಲಾ."

"ಖಾರವಾಗಿ ಏನಾದರೂ ಮಾಡಲೇ ? ಮೆಣಸಿನಕಾಯಿ ಬಾಳಕ ಕರೆದುಹಾಕಲೇ ? ನಿಮ್ಮ ಬಾಯಿಗೆ ಏನು ರುಚಿಸುತ್ತೆ ಹೇಳಿ ಮಾಡಿಕೊಡುತ್ತೇನೆ."

"ನನಗೇನೂ ಬೇಡ ಕಾಡಮ್ಮನವರೇ ?"

"ಈಗ ಹೀಗೇ ತಾಯಿ-ಊಟ ರುಚಿಸಲ್ಲ-ಬಯಕೆಗಳಾಗುತ್ತವೆ."

ಕಾಡಮ್ಮನವರ ಮಾತಿನ ಅರ್ಥ ಥಟ್ಟನೆ ರಂಗನಾಯಕಿಗೆ ಹೊಳೆಯಿತು.

"ಅಂಥದ್ದೇನೂ ಇಲ್ಲ ಕಾಡಮ್ಮನವರೇ. ನಾನು ಹೊರಗಾಗಿ ಇನ್ನೂ ಹದಿನೈದು ದಿವಸವಾಗಿಲ್ಲ"

ಕಾಡಮ್ಮನವರಿಗೆ ಅತೃಪ್ತಿಯಾಯಿತು. ಇನ್ನು ಮಾತು ಬೆಳಸಿದರೆ ರಂಗನಾಯಕಿಗೆ ಅಸಮಾಧಾನವಾಗಬಹುದೆಂದು ನಾಲಿಗೆ ಬಿಗಿಹಿಡಿದರು.

ಮಧ್ಯಾಹ್ನದ ಸುಖಾನುಭವ ರಂಗನಾಯಕಿಯ ಮನಸ್ಸಿಗೆ ಬಂದು ಅವಳನ್ನು ಅಸ್ತವ್ಯಸ್ತಮಾಡುತ್ತಿತ್ತು. ನಾಗೇಂದ್ರನ ರೂಮಿಗೆ ಹೋಗಿ ಕುಳಿತು ಅವನ ಮೇಜು, ಕುರ್ಚಿ, ಬುಕ್‌ಷೆಲ್ಫ್-ಬಟ್ಟೆಗಳನ್ನು ಎವೆಯಿಕ್ಕದೆ ನೋಡುವಳು. ಅವನ ಮಂಚದ ಮೇಲೆ ಮಲಗಿ ಯೋಚಿಸುವಳು.

'ನಾಗೇಂದ್ರ ಹೋಗಿ ಐದು ದಿವಸಗಳಾದವು. ಈ ವೇಳೆಗೆ ಬೊಂಬಾಯಿ ಸೇರಿರಬಹುದೇ ?—ಅಥವಾ ಇನ್ನೂ ಹೊಳೇನರಸೀಪುರದಲ್ಲಿಯೇ ಇರಬಹುದೇ ?'

'ಹೊಳೇನರಸೀಪುರ—ಅಲ್ಲಿ ಸುಲೋಚನಾ ಇದ್ದಾಳೆ. ಅವಳ ಬಿನ್ನಾಣಕ್ಕೆ ಬೆರಗಾಗಿ ನನ್ನನ್ನು ಮರೆತುಬಿಡುತ್ತಾರೆಯೇ ?'

'ಇನ್ನು ಐದಾರು ತಿಂಗಳಲ್ಲಿ ಸುಲೋಚನಾ ಇಲ್ಲಿಗೆ ಬರುತ್ತಾಳೆ. ಮುಂದೆ ನನ್ನ ಗತಿಯೇನು ? ನಾನು ಅವರನ್ನು ನೋಡುವುದು ಹೇಗೆ ? ಅವಳು ಬಂದಮೇಲೆ ನನ್ನನ್ನು ಮರೆತುಬಿಡುತ್ತಾರೆಯೋ ಏನೋ ?'

ತನ್ನ ಸ್ಥಾನ ಭದ್ರಪಡಿಸಿಕೊಳ್ಳುವುದು ಹೇಗೆಂಬ ಚಿಂತೆ ರಂಗನಾಯಕಿಯನ್ನು ಬಲವಾಗಿ ಕಾಡತೊಡಗಿತು.

ಎದ್ದು ಕುಳಿತು ನಾಗೇಂದ್ರನ ಡ್ರಾಯರ್ ಎಳೆದು ಅಲ್ಲಿದ್ದ ಲೆಟರ್ ಪ್ಯಾಡ್ ತೆಗೆದುಕೊಂಡು ಅವನಿಗೊಂದು ಕಾಗದ ಬರೆದು, ಕೂಡಲೆ ಟಪಾಲಿಗೆ ಕಳಿಸಿದಳು.

ರಂಗನಾಯಕಿಯ ಅಸ್ವಾಸ್ಥ್ಯವನ್ನು ಮಹಾಬಲರಾಯ ಗಮನಿಸಿ ಕಾರಣ ತಿಳಿದುಕೊಳ್ಳಲು ಪ್ರಯತ್ನಿಸಿದ. ರಂಗನಾಯಕಿ ತನ್ನ ದುಃಖ ತೋರಿಸಿಕೊಳ್ಳಬಾರದೆಂದು ನಿರ್ಧರಿಸಿದಳು.

ಮಹಾಬಲರಾಯನ ರೂಮಿನಲ್ಲಿ ಎರಡು ಮಂಚಗಳಿದ್ದವು.

ಒಂದೊಂದು ದಿನ ಮಹಾಬಲರಾಯ ಎದ್ದುಬಂದು ರಂಗನಾಯಕಿಯ ಮಂಚದ ಮೇಲೇ ಮಲಗುತ್ತಿದ್ದ.

ಅಂದು ರಂಗನಾಯಕಿಯ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಬೇಕೆಂದು ಮಹಾಬಲರಾಯ ಅವಳ ಮಂಚದ ಮೇಲೆ ಬಂದು ಮಲಗಿ

"ರಂಗೂ, ಏನು ಚಿಂತೆ ? ಈಗಲಾದರೂ ಹೇಳು." ಎಂದ.

"ಚಿಂತೆ ಇಲ್ಲದಿರುವಾಗ ಏನು ಹೇಳಲಿ."

"ತೌರುಮನೆಗೆ ಹೋಗಬೇಕೆನಿಸುತ್ತದೆಯೇ ?"

"ಇಲ್ಲ. ಸುಮ್ಮಸುಮ್ಮನೆ ಅಲ್ಲಿಗೇಕೆ ಹೋಗಬೇಕು."

"ಮನಸ್ಸಿಗೆ ಬೇಸರವಾಗಿದ್ದರೆ ನಡಿ-ನಾಲ್ಕು ದಿವಸ ನೀಲಗಿರಿಗಾದರೂ ಹೋಗಿಬರೋಣ."

ನೀಲಗಿರಿಗೆ ಹೋಗಿ ಅಲ್ಲಿ ಸದಾಕಾಲ ಗಂಡನ ಸಹವಾಸದಲ್ಲಿರಬೇಕಾದ ಸ್ಥಿತಿ ನೆನಪಾಗಿ ರಂಗನಾಯಕಿ

"ಬೆಂಗಳೂರು ನೀಲಗಿರಿಗೇನು ಕಡಿಮೆಯಾಗಿರುವುದು"

ಎಂದು ಹೇಳಿದಳು.

ಗಂಡನಮೈ ಅಂದು ರಂಗನಾಯಕಿಗೆ ಮುಳ್ಳಿನ ಪೊದರಾಯಿತು. ಅವನ ಸರಸ-ಸಲ್ಲಾಪ ಅವಳಿಗೆ ಮೃತ್ಯುವಿನ ಆಲಾಪವಾಯಿತು. ದೇಹವನ್ನೇನೋ ಗಂಡನಿಗೆ ಒಪ್ಪಿಸಿದಳು. ಆದರೆ ಮನಸ್ಸು ಮುಂಬಯಿ ಖಾರಿನಲ್ಲಿ ಅಲೆದಾಡುತ್ತಿತ್ತು.

ಖಾರ್‌ನಲ್ಲಿದ್ದ ಮನೆಯಲ್ಲಿಯೇ ನಾಗೇಂದ್ರನ ಬಿಡಾರವಾಯಿತು. ನಂಜುಂಡಯ್ಯನವರ ಮನೆಯಲ್ಲಿಯೇ ಅವನ ಊಟ—ಉಪಚಾರಗಳಾದವು.

ನಾಗೇಂದ್ರನ ಊಟ ಮುಗಿದಮೇಲೆ ನಂಜುಂಡಯ್ಯನವರು ತಾಂಬೂಲದ ತಟ್ಟೆ ಕೊಡುತ್ತಾ

"ನಿಮಗೊಂದು ಕಾಗದ ಬಂದಿತ್ತು, ಕೊಡುವುದನ್ನು ಮರೆತೆ"

ಎಂದು ಒಳಗೆ ಹೋಗಿ ಕಾಗದವನ್ನು ತಂದುಕೊಟ್ಟರು.

ಕಾಗದ ಹಿಡಿದಿದ್ದ ನಾಗೇಂದ್ರನ ಕೈನಡುಗಲಾರಂಭಿಸಿತು. ಕಾಗದವನ್ನು ಒಡೆದುನೋಡಿದ. ಅವನು ನಿರೀಕ್ಷಿಸಿದಂತೆ ರಂಗನಾಯಕಿಯ ಕಾಗದ.

‘ಪ್ರಿಯತಮಾ,

ಈ ವೇಳೆಗೆ ನೀವು ಬೊಂಬಾಯಿ ಸೇರಿರಬಹುದೆಂದು ನಿಮಗೆ ಪತ್ರ ಬರೆಯುತ್ತಿದ್ದೇನೆ. ನೀವು ಇಲ್ಲದ ಈ ಮನೆಯಲ್ಲಿ ನಿಮ್ಮ ರೂಮಿನಲ್ಲಿ—ನಮ್ಮ ರೂಮಿನಲ್ಲಿ—ಕುಳಿತು ಈ ಪತ್ರ ಬರೆಯುತ್ತಿದ್ದೇನೆ.

ನನ್ನನ್ನು ಮರೆತುಬಿಟ್ಟಿರಾ ? ಹೊಳೇನರಸೀಪುರಕ್ಕೆ ನೀವು ಹೋಗುವ ಸುದ್ದಿ ಕೇಳಿ ನನ್ನ ಎದೆ ‘ಜಗ್’ ಎಂದಿತು. ನೀವು ಹೋಗಲೇಬೇಕಾಗಿತ್ತು. ನಿಮ್ಮ ಹೆಂಡತಿಯನ್ನು ನೋಡಬೇಕಾಗಿತ್ತು. ಆದರೆ ನಿಮ್ಮ ಹೆಂಡತಿಯನ್ನು ನೋಡುವ ಉತ್ಸಾಹದಲ್ಲಿ ನನ್ನ ಮರೆತುಬಿಡುವಿರಾ ?”

ನೀವು ಹೋದಂದಿನಿಂದ ನನಗೆ ಪ್ರಪಂಚವೇ ಬೇಡವಾಗಿದೆ. ನೀವಿಲ್ಲದ ಪ್ರಪಂಚ ನನಗೆ ಸ್ಮಶಾನಕ್ಕೆ ಸಮಾನ. ನೀವು ಎದುರಿಗಿದ್ದರೆ ನಾನು ಪ್ರಪಂಚವನ್ನೇ ಮರೆಯಬಲ್ಲೆ.

ಯಾವ ವಿಧಿ ನಮ್ಮನ್ನು ಕೂಡಿಸಿತೋ ಕಾಣೆ. ಆದರೆ ವಿಧಿ ಹಾಕಿರುವ ಕುಣಿಕೆ ಬಹಳ ಬಲವಾದುದು.

ನಿಮ್ಮನ್ನು ಬಿಟ್ಟಿರಲಾರೆ. ಬೊಂಬಾಯಿ ಕೆಲಸ ಮುಗಿದಕೂಡಲೇ ಹೊರಟುಬನ್ನಿ. ಈ ಮನಸ್ಸು, ದೇಹ ಎರಡೂ ನಿಮ್ಮನ್ನಪ್ಪುವುದಕ್ಕೆ ಕಾತುರಪಡುತ್ತಿದೆ.

ಬೇರೆ ಯಾವುದೋ ಚಿಂತೆ ನಿಮ್ಮ ಮನಸ್ಸಿಗೆ ಬಂದು ನಿಮ್ಮ ಶಾಂತಿಯನ್ನೆಲ್ಲಿ ಕದಡಿಬಿಡುತ್ತದೆಯೋ ಎಂದು ಹೆದರುತ್ತೇನೆ. ಹಿಂದೊಮ್ಮೆ ನೀವು ಪಾಪಪುಣ್ಯದ ಮಾತು ತೆಗೆದಾಗಲೇ ನನ್ನ ಮೈ ನಡುಗಿತು. ಅದನ್ನು ಮರೆತುಬಿಡಿ.

ನಿಮ್ಮ ಸುಖಕ್ಕೆ ಯಾವ ಕೊರತೆಯೂ ಬಾರದಂತೆ ನೋಡಿಕೊಳ್ಳುವ ಜವಾಬ್ದಾರಿ ನನಗೆ ವಹಿಸಿಕೊಡಿ. ನಿಮ್ಮ ಸುಖವೇ ನನ್ನ ಸುಖ.

ಕಾಗದ ಕೈ ಸೇರಿದ ಕೂಡಲೇ ಮಾರುತ್ತರ ಬರೆಯಿರಿ. ಸದಾ ನಿಮ್ಮ ಧ್ಯಾನದಲ್ಲಿಯೇ ಮಗ್ನಳಾಗಿರುವ,

ನಿಮ್ಮ ಪ್ರಿಯೆ-ನಾಯಕಿ.’

ವಿ ಸೂ : ಮುಂಬಯಿಯಲ್ಲಿ ಚೆನ್ನಾಗಿ ಫೋಟೊ ತೆಗೆಯುವವರಿದ್ದಾರೆ. ನೀವು ಬರುವಾಗ ಒಳ್ಳೆಯ ಫೋಟೋ ತೆಗೆಸಿಕೊಂಡು ಬನ್ನಿ.

ಕಾಗದವನ್ನು ನಾಗೇಂದ್ರ ಒಂದುಸಲ-ಎರಡುಸಲ-ಹತ್ತುಸಲ ಓದಿದ. ಓದಿದಷ್ಟೂ ಅದರಿಂದ ಹೊಸಹೊಸ ಅರ್ಥ ಚಿಮ್ಮುತ್ತಿತ್ತು. ತಕ್ಷಣವೇ ಕುಳಿತು ಅವಳಿಗೆ ಮಾರೋಲೆ ಬರೆದ.

ಮಧ್ಯಾಹ್ನಾನಂತರ ನಾಗೇಂದ್ರ ನಂಜುಂಡಯ್ಯನವರನ್ನು ಕರೆದು ಕೊಂಡು ಆಫೀಸಿಗೆ ಹೋದ. ನವಭಾರತ ಮಿಲ್ಲಿನ ಏಜನ್ಸಿ ವಿಷಯ ನಂಜುಂಡಯ್ಯನವರೊಂದಿಗೆ ಚರ್ಚೆಮಾಡಿ ಒಂದು ಇತ್ಯರ್ಥಕ್ಕೆ ಬಂದ.

ಏಜನ್ಸಿ ವಿಷಯ ಎರಡುದಿವಸ ಜಗ್ಗಾಡಿತು. ಭಾರತ ಮಿಲ್ಲಿನವರ ಕೋರಿಗೆ ಪ್ರತಿಕೋರಿ ನಾಗೇಂದ್ರ ಹಾಕುತ್ತಿದ್ದ. ಈ ವ್ಯವಹಾರ ಮುರಿದು ಬೀಳುತ್ತದೇನೋ ಎಂದು ನಂಜುಂಡಯ್ಯನವರು ಚಿಂತಾಕ್ರಾಂತ ರಾದರು.

ಮಾರನೆಯದಿವಸ ಭಾರತಮಿಲ್ಲಿನವರಿಗೂ ನಾಗೇಂದ್ರನಿಗೂ ಒಪ್ಪಂದ ವಾಯಿತು. ತಂದೆಗೆ ತಾರುಮಾಡಿ ಒಪ್ಪಂದವಾದ ವಿಷಯ ನಾಗೇಂದ್ರ ತಿಳಿಸಿದ.

ನಾಗೇಂದ್ರನ ವ್ಯವಹಾರಜ್ಞಾನ ನೋಡಿ ನಂಜುಂಡಯ್ಯನವರು ಆಶ್ಚರ್ಯಚಕಿತರಾದರು. 'ಮಗ ತಂದೆಯನ್ನು ಮೀರಿಸುತ್ತಾನೆ' ಎಂದು ಸಂತೋಷಪಟ್ಟುಕೊಂಡರು.

ರಾತ್ರಿ ಮನೆಗೆ ಬಂದಕೂಡಲೆ ನಾಗೇಂದ್ರ ನಂಜುಂಡಯ್ಯನವರಿಗೆ

"ನಾನು ನಾಳೆ ಹೊರಟುಬಿಡುತ್ತೇನೆ"

ಎಂದು ತಿಳಿಸಿದ.

"ಅಷ್ಟೇನು ಅವಸರ. ಒಂದೆರಡು ದಿನ ನಿಂತು ಬೊಂಬಾಯಿ ನೋಡಿ ಕೊಂಡು ಹೋಗಬಾರದೇ?"

"ಇಲ್ಲ ಸ್ವಾಮಿ ಪುರಸತ್ತಿಲ್ಲ. ನಾನು ಹೊಳೆಯನರಸೀಪುರ ಹೊಕ್ಕು ಹೋಗಬೇಕಾಗಿದೆ. ಊರಿನಲ್ಲಿ ತಂದೆ ಒಬ್ಬರೇ ಆಗಿದ್ದಾರೆ"

ಮಾರನೆಯ ದಿನವೇ ನಾಗೇಂದ್ರ ಪ್ರಯಾಣಮಾಡುವುದಕ್ಕೆ ನಂಜುಂಡ ಯ್ಯನವರು, ಅವರ ಹೆಂಡತಿ ಸುತರಾಂ ಒಪ್ಪಲಿಲ್ಲ. ನಾಗೇಂದ್ರನಿಗೆ ಔತಣ ಮಾಡದೆ ಕಳುಹಿಸುವುದು ಸಾಧ್ಯವಿಲ್ಲವೆಂದು ನಂಜುಂಡಯ್ಯನವರು ಹೇಳಿದರು.

ಔತಣ ಮಾಡಿಸಿಕೊಂಡು ನಾಗೇಂದ್ರ ಹೊಳೆಯನರಸೀಪುರಕ್ಕೆ ಪ್ರಯಾಣ ಬೆಳಸಿದ.

ವಚನಕ್ಕನುಗುಣವಾಗಿ ಗಂಡ ವರ್ತಿಸಿದುದನ್ನು ಕಂಡು ಸುಲೋಚನ ಹಿರಿಹಿರಿ ಹಿಗ್ಗಿದಳು. ಸುಬ್ಬರಾಯರು ಅಳಿಯನನ್ನು ಅತ್ಯಾದರದಿಂದ ಕಂಡರು.

ನಾಗೇಂದ್ರನ ಟ್ರಂಕಿನಲ್ಲಿದ್ದ ಹಳೆಯ ಬಟ್ಟೆಗಳನ್ನು ಒಗೆಯುವುದಕ್ಕೆ ಕೊಡಲು ಸುಲೋಚನ ಅವನ ಟ್ರಂಕ್ ತೆಗೆದಳು. ಅದರಲ್ಲಿ ನಾಗೇಂದ್ರನ ಫೋಟೋ ಮೂರು ಪ್ರತಿಗಳಿದ್ದವು. ಗಂಡನ ಫೋಟೋ ಕೈಯಲ್ಲಿ ಹಿಡಿದು ಎವೆಯಿಕ್ಕದೆ ನೋಡಿದಳು. ಪ್ರೇಮ ಗೌರವಗಳಿಂದ ಅದನ್ನು ಅಪ್ಪಿ ಮುದ್ದಿಟ್ಟಳು. ಗಂಡ ರೂಮಿಗೆ ಬಂದುದನ್ನು ನೋಡಿ ಸುಲೋಚನ ನಾಚಿಕೆ ಯಿಂದ ತಲೆಬಾಗಿಸಿದಳು.

"ಇದೇನೇ ಹುಚ್ಚಿ. ನಾನೇ ಇರುವಾಗ ನನ್ನ ಫೋಟೋಗೆ ಮುದ್ದಿಡು ತ್ತಿರುವೆಯಲ್ಲಾ ?

"ಹೋಗಿ ! ಈಗೇಕೆ ನೀವು ಬಂದಿರಿ ?"

"ಫೋಟೋ ಚೆನ್ನಾಗಿದೆಯೇ ?"

"ತುಂಬ ಚೆನ್ನಾಗಿದೆ. ಯಾರು ತೆಗೆದರು ?"

"ಬೊಂಬಾಯಿಯಲ್ಲಿ ಸ್ಯಾನ್‌ಜೆತಿ ಎನ್ನುವ ಒಬ್ಬ ಇಟಾಲಿಯನ್ ಫೋಟೋಗ್ರಾಫರಿದ್ದಾನೆ. ಅವನು ತೆಗೆದದ್ದು."

"ಮೂರು ಪ್ರತಿಯಿದೆಯಲ್ಲಾ. ಒಂದು ನನಗೆ....ಉಳಿದದ್ದು...."

"ಮಿಲ್ಲಿನಲ್ಲಿ ನಮ್ಮೆಲ್ಲರ ಫೋಟೋ ಇಡುತ್ತಾರಂತೆ. ಅದಕ್ಕೋಸ್ಕರ ತೆಗೆಸಿದೆ."

"ಇವನ ಕೈಯಲ್ಲೇ ನಮ್ಮ ಮಗೂ ಫೋಟೋ ತೆಗೆಸಬೇಕು ಕಣ್ರೀ."

"ಕೂಸು ಹುಟ್ಟುವ ಮುಂಚೆ ಕುಲಾವಿ ಹೊಲೆಸಿದರು ಅನ್ನುವ ಹಾಗೇ ಮಾಡುವೆಯಲ್ಲ."

"ವಸಂತಮಾಸದ ಬರುವನ್ನು ನಮ್ಮ ರೈತರು ಎಷ್ಟು ಸಂತೋಷ ದಿಂದ ಸ್ವಾಗತಿಸುತ್ತಾರೆ. ನೋಡಿರುವಿರಾ ? ಜಡ ಹೂಗಿಡ ಅರಳುವುದೇ ಮನಸ್ಸಿಗೆ ಅಷ್ಟು ಸಂತೋಷ ಕೊಡುವಾಗ ಮನುಷ್ಯ ಅರಳುವುದಕ್ಕೆ

ಇನ್ನೆಷ್ಟು ಸಂತೋಷಿಸಬೇಕು. ಹೂಗಳ ಬರುವಿಗೇ ಅಷ್ಟು ಸ್ವಾಗತ ಸಿದ್ಧತೆ ಯಾಗುವಾಗ ನಮ್ಮ ಕುಲದೀಪಕನ ಬರುವಿಗೆ ಸ್ವಾಗತ ಸಿದ್ಧತೆಮಾಡ ಬೇಡವೇ ?"

"ಬರುವವನು ಕುಲದೀಪಕನೋ ಕುಲಮಾರಕನೋ ಬಲ್ಲವರು ಯಾರು ?"

"ಏಕೆ ಹಾಗೆನ್ನುವಿರಿ ?"

"ನನ್ನ ಮಗನೂ ನನ್ನ ಹಾಗೇ ಆದರೆ ತಂದೆಗೇನು ಸಂತೋಷ ವಿದ್ದೀತು ?"

"ನಿಮ್ಮ ಹಾಗೆ ನಿಮ್ಮ ಮಗ ಆದರೆ ಸಾಕೇಸಾಕು."

ಸುಲೋಚನೆಯ ಅಚಲ ನಂಬಿಕೆ ಕಂಡು ನಾಗೇಂದ್ರನಿಗೆ ತನ್ನನ್ನೇ ತಾನು ಥಳಿಸಿಕೊಳ್ಳಬೇಕೆನಿಸಿತು.

"ನೀವು ಊರಿಗೆ ಯಾವಾಗ ಹೊರಡಬೇಕು ?"

"ಏಕೆ ? ನನ್ನನ್ನು ಕಳುಹಿಸಿಬಿಡಬೇಕೆಂದಿರುವೆಯಾ ?"

"ಒರಟುಮಾತಾಡದಿದ್ದರೆ ನಿಮಗೆ ತೃಪ್ತಿಯೇ ಇಲ್ಲ. ನಿಮ್ಮನ್ನು ಕಳು ಹಿಸಿಕೊಡಬೇಕಲ್ಲ ಎಂದು ನಾನು ತೊಳಲುತ್ತಿರುವುದು ಕಾಣುವುದಿಲ್ಲವೇ ?"

"ಕ್ಷಮಿಸು ಸುಲೋಚನಾ. ನಾಳಿದ್ದು ಹೊರಡಬೇಕೆಂದಿದ್ದೇನೆ."

"ಸಾಧ್ಯವಿಲ್ಲ. ಬೊಂಬಾಯಿ ಕೆಲಸ ತೃಪ್ತಿಕರವಾಗಿ ಮುಗಿಸಿಕೊಂಡು ಬಂದಿದ್ದೀರಿ. ನಾಲ್ಕು ದಿವಸ ತಡವಾಗಿ ಹೋದರೆ ಮಾವನವರು ಕೋಪಿಸಿ ಕೊಳ್ಳುವುದಿಲ್ಲ. ನಾನು ಅಪ್ಪಣೆಕೊಡುವವರೆಗೆ ನೀವು ಹೊರಡಕೂಡದು."

"ಹಾಗೇ ಆಗಲಿ. ನರ್ಸ್ ಬರುತ್ತಿದ್ದಾಳೆಯೇ ?"

"ಬರುತ್ತಿದ್ದಾಳೆ."

"ಏನು ಹೇಳಿದಳು ?"

"ಇನ್ನು ೧೫-೨೦ ದಿವಸ ತಡೆದರೆ ಹೆಚ್ಚು ಎಂದು ಹೇಳಿದಳು. ಹೆರಿಗೆ ಯಾದ ಮೇಲೆ ಬರುವಿರಷ್ಟೇ ?"

"ಬರದೆ ಅಲ್ಲಿರಲು ನನ್ನ ಮನಸ್ಸು ನಿಲ್ಲಬೇಕಲ್ಲ"

ಸುಲೋಚನೆಯ ಜೀವ ತುಂಬಿಹೋಯಿತು. ಆತ್ಮತೃಪ್ತಿ ಅವಳ ಮುಖಕ್ಕೆ ಅಪೂರ್ವ ತೇಜಸನ್ನಿತ್ತಿತು.

೪೦

ರಂಗನಾಯಕಿ ಚಾತಕಪಕ್ಷಿಯಂತೆ ನಾಗೇಂದ್ರನ ಮಾರುತ್ತರವನ್ನು ನಿರೀಕ್ಷಿಸುತ್ತಿದ್ದಳು. ಅವನ ಉತ್ತರ ಬರಬೇಕಾದರೆ ಮೂರು ದಿವಸವಾದರೂ ಬೇಕೆಂಬುದು ಅವಳಿಗೆ ಗೊತ್ತು. ಆದರೂ ಮನಸ್ಸಿನಲ್ಲಿ ಒಂದು ಬಗೆಯ ಮೊಂಡು ಆಸೆ. 'ನಾನು ಬರೆದಂತೆ ಅವರೂ ಏಕೆ ಬರೆದಿರಬಾರದು' ಎಂದು ಕೊಳ್ಳುವಳು. ಪ್ರತಿನಿತ್ಯ ಅಂಚೆಯಾಳು ಬರುವ ವೇಳೆಗೆ ಬಾಗಿಲು ಕಾಯು ವಳು. ಯಜಮಾನರಿಗೆ ಹಲವು ಕಾಗದಗಳು ಬರುತ್ತಿದ್ದವು-ತನಗೆ ಒಂದೂ ಇಲ್ಲ.

ಮಾರುತ್ತರ ಬರಬೇಕಾದ ದಿನ ನಾಗೇಂದ್ರನ ಕಾಗದ ಬಂದಿತು. ಕಾಡಮ್ಮಸವರು ಅಲ್ಲೇ ಓಡಿಯಾಡುತ್ತಿದ್ದುದರಿಂದ ಕಾಗದವನ್ನು ಅವರೆದು ರಿಗೆ ಒಡೆಯಲಿಲ್ಲ. ರೂಮಿಗೆ ತೆಗೆದುಕೊಂಡು ಹೋಗಿ ಬಾಗಿಲು ಹಾಕಿ ಕೊಂಡು ಕಾಗದ ಒಡೆದು ಓದಿಕೊಂಡಳು.

'ಪ್ರಿಯೆ,'

ತೃಪ್ತಿಯ ಮುಗುಳ್ನಗೆ ರಂಗನಾಯಕಿಯ ಮುಖದ ಮೇಲೆ ತೇಲಿತು.

'ನಾನು ಮುಂಬಯಿ ಸೇರಿ ಮನೆಗೆ ಬಂದೊಡನೆಯೇ ನಿಮ್ಮ ತಂದೆ ನಿನ್ನ ಕಾಗದವನ್ನು ಕೊಟ್ಟರು. ನಿನ್ನ ಕಾಗದ ನನ್ನ ಜತೆಯಲ್ಲಿಯೇ ಮುಂಬಯಿಗೆ ಪ್ರಯಾಣಮಾಡಿದೆ.

ಹೊಳೆಯನರಸೀಪುರಕ್ಕೆ ಹೋಗಿ ಅಲ್ಲಿ ಎರಡು ದಿವಸವಿದ್ದು ಇಂದೇ ಮುಂಬಯಿ ಸೇರಿದೆ. ಚಿ|| ಸೌ|| ಆರೋಗ್ಯವಾಗಿದ್ದಾಳೆ.'

ಅವಳ ಆರೋಗ್ಯ ಯಾರಿಗೆ ಬೇಕು ಎಂದು ರಂಗನಾಯಕಿ ಗೊಣ ಗುಟ್ಟಿಕೊಂಡು ಮುಂದೆ ಓದಿದಳು.

'ನಿನ್ನ ಕಾಗದ ಒಂದಲ್ಲ ಹತ್ತು ಬಾರಿ ಓದಿನೋಡಿದೆ'

ತನ್ನ ಕಾಗದ ಓದುತ್ತಾರೋ ಇಲ್ಲವೋ ಎನ್ನುವ ಸಂಶಯ ರಂಗನಾಯ ಕಿಗೆ ದೂರವಾಯಿತು.

'ಅದರಲ್ಲಿ ನೀನು ಬರೆದಿರುವುದು ನಾಲ್ಕು ಪಂಕ್ತಿಗಳಾದರೂ, ನೂರು ಗ್ರಂಥಗಳ ಸಾರ ಅಡಕವಾಗಿದೆ. ನನ್ನ—ನಮ್ಮ ರೂಮಿನಲ್ಲಿ ನೀನು ಕುಳಿತು ಕೊಂಡು ಮಾಡುತ್ತಿರುವ ವಿಚಾರವೇನೆಂಬುದನ್ನು ನಾನು ಊಹಿಸಿಕೊಳ್ಳ

ಬಲ್ಲೆ. ಯಾವದೋ ವಿಧಿ ನಮ್ಮನ್ನು ಕೂಡಿಸಿತೆಂದು ಬರೆದಿರುವೆ-ಸತ್ಯವಾದ ಮಾತು. ಮಾನವರು ಇಂಥ ಸಂಬಂಧ ಕೂಡಿಸಲಾರರು. ನೀನು ಹೇಗೆ ನನ್ನನ್ನು ಕುರಿತು ಯೋಚಿಸುತ್ತಿರುವೆಯೋ ಹಾಗೇ ನಾನೂ ನಿನ್ನನ್ನು ಕುರಿತು ಯೋಚಿಸುತ್ತಿದ್ದೇನೆ.

ನನ್ನನ್ನು ಮರೆಯಬೇಡಿ ಎಂದು ಕೇಳಿಕೊಂಡಿರುವೆ. ನಿನ್ನನ್ನು ಮರೆಯು ಬೇಕೆಂದು ನಾನು ಪ್ರಯತ್ನಿಸಿದರೂ ಸಾಧ್ಯವಾಗುತ್ತದೆಯೇ? ನಿನ್ನ ಜತೆ ನಾನು ಕಳೆದ ಪ್ರತಿಕ್ಷಣವನ್ನೂ ಸ್ಮರಿಸಿಕೊಳ್ಳುತ್ತೇನೆ. ರೋಮಾಂಚವಾಗು ತ್ತದೆ. ನಿನ್ನ ಧೈರ್ಯ ನೆನಸಿಕೊಂಡರೆ ಮೈ ಝುಮ್ಮೆನ್ನುತ್ತದೆ. ದುರ್ಬಲ ನನ್ನು ಪ್ರೇಮ ಮಹಾವೀರನನ್ನಾಗಿ ಮಾಡುತ್ತದೆ ಎಂದು ಕೇಳಿದ್ದೆ. ಕಾದಂ ಬರಿಗಳಲ್ಲಿ ಆ ವಿಷಯ ಓದಿದಾಗ ನಂಬಿರಲಿಲ್ಲ. ಈಗ ನಾನೇ ಪ್ರತ್ಯಕ್ಷ ಕಂಡ ಹಾಗಾಯಿತು. ನನ್ನ ಸುಖ ಯಾರ ಕೈಯಲ್ಲಾದರೂ ಇರುವುದಾದರೆ ಅದು ನಿನ್ನ ಕೈಯಲ್ಲಿದೆ ನೀನು ನನ್ನನ್ನು ಪರಮಸುಖಿಯನ್ನಾಗಿ ಮಾಡಬಲ್ಲೆ ಯೆಂಬುದನ್ನು ಅನುಭವದಿಂದ ತಿಳಿದುಕೊಂಡಿದ್ದೇನೆ, ನಮ್ಮಿಬ್ಬರ ಸ್ನೇಹ ಅನುರಾಗದ ಮಧ್ಯೆ ಯಾವುದೂ ಬರಬಾರದು. ಯಾವ ಅಡ್ಡಿ ಆತಂಕವೂ ನಮ್ಮ ಸ್ನೇಹವನ್ನು ಕೊನೆಗಾಣಿಸಲಾರದೆಂಬ ನಂಬಿಕೆ ನನಗಿದೆ.

ಆದರೆ ನನ್ನ ಮನಸ್ಸು ಶಾಂತವಾಗಿದೆಯೆಂದು ಹೇಳಿದಲ್ಲಿ ನಾನು ಸುಳ್ಳು ಹೇಳಿದಂತಾಗುತ್ತದೆ. ನನ್ನ ಮನಸ್ಸು ಅಲ್ಲೋಲಕಲ್ಲೋಲವಾಗಿದೆ. ಇಷ್ಟು ಸುಖಕಂಡಮೇಲೂ ಈ ಅಶಾಂತಿ ಏಕೆಂದು ನೀನು ಕೇಳಬಹುದು. ನೀನು ಸ್ವತಂತ್ರಳಾಗಿದ್ದರೆ ನನ್ನ ಮನಸ್ಸಿಗೆ ಖೇದವಾಗುತ್ತಿರಲಿಲ್ಲ. ದೈವ ಎಂಥ ಚಲ್ಲಾಟವಾಡಿದೆ ನೋಡು.

ನನ್ನ ಪ್ರೇಯಸಿ ನೀನು, ನನ್ನ ತಂದೆಯ ಧರ್ಮಪತ್ನಿ. ನಾಳೆ ನಮ್ಮ ಸಂಬಂಧ ಅವರಿಗೆ ಗೊತ್ತಾದರೆ ಅವರ ಮನಸ್ಸಿಗೆಷ್ಟು ನೋವಾಗಬಹು ದೆಂಬುದನ್ನು ನೆನಸಿಕೊಂಡಾಗ ಮನಸ್ಸು ಮುದುರಿಹೋಗುತ್ತದೆ. ಸುಲೋ ಚನ ನನ್ನನ್ನು ಬಹಳ ಪ್ರೀತಿಸುತ್ತಾಳೆ. ನಾನೇ ಅವಳ ಜೀವನ ಸರ್ವಸ್ವ ವೆಂದು ತ್ರಿಕರಣಪೂರ್ವಕವಾಗಿ ನಂಬಿದ್ದಾಳೆ. ನಮ್ಮ ಸಂಬಂಧ ಅವಳಿಗೆ ಗೊತ್ತಾದರೆ ಎಷ್ಟು ನೊಂದುಕೊಳ್ಳುವಳು. ಈ ಚಿಂತೆಗಳಿಂದ ಹೇಗೆ ಪಾರಾಗಬೇಕೋ ಕಾಣೆ.

ನಮ್ಮ ಜೀವನನೌಕೆ ಒಂದು ಮಹಾಸಾಗರದ ಮೇಲೆ ಹೊರಟಿದೆ ಎನ್ನುವದಂತೂ ಖಂಡಿತ. ಸಾಗರ ಶಾಂತವಾಗುತ್ತದೆಯೋ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಅಲ್ಲೋಲಕಲ್ಲೋಲವಾಗುವುದೋ ಮುಂದೆ ನೋಡ ಬೇಕು. ಸಾಗರವನ್ನು ಶಾಂತವಾಗಿಟ್ಟಿರಲು ಇಬ್ಬರೂ ಯತ್ನಿಸೋಣ.

ನಿನ್ನ ತಂದೆ, ತಾಯಿ, ತಮ್ಮ ಎಲ್ಲರೂ ನನ್ನ ವಿಷಯದಲ್ಲಿ ತುಂಬಾ ವಿಶ್ವಾಸಿಗಳಾಗಿದ್ದಾರೆ. ಅವರನ್ನೆಲ್ಲಾ ಕಂಡು ನನಗೆ ಸಂತೋಷವಾಯಿತು.

ಇನ್ನು ಎರಡು-ಮೂರು ದಿನಗಳಲ್ಲಿ ಇಲ್ಲಿನ ಕೆಲಸ ಮುಗಿಯಬಹುದು. ಹೊಳೇನರಸೀಪುರ ಹೊಕ್ಕು ಬೆಂಗಳೂರಿಗೆ—ನಿನ್ನ ಬಳಿಗೆ—ಹಾರಿಬರುತ್ತೇನೆ.

ನೀನು ಬರೆದಿರುವಂತೆ ಫೋಟೋ ತೆಗೆಸಿ ಜತೆಯಲ್ಲಿ ತರುತ್ತೇನೆ.

ನಾನು ಪುನಃ ಕಾಗದ ಬರೆಯಲು ಅವಕಾಶವಾಗುವುದಿಲ್ಲ. ನೀನು ಇಲ್ಲಿಗೆ ಬರೆದರೂ ಪ್ರಯೋಜನವಿಲ್ಲ. ನಿನ್ನ ಕಾಗದ ಬರುವವೇಳೆಗೆ ನಾನು ಹೊಳೇನರಸೀಪುರದಲ್ಲಿರುತ್ತೇನೆ.

ಇನ್ನು ನಾಲ್ಕೈದು ದಿನ ಇಬ್ಬರೂ ಮನಸ್ಸು ಬಿಗಿಹಿಡಿದುಕೊಳ್ಳಬೇಕು, ಕಷ್ಟವಲ್ಲವೇ ?

ಇಂತು ಯಾವಾಗಲೂ ನಿನ್ನ ಪ್ರಿಯರಮಣ,

ನಾಗೇಂದ್ರ,'

ನಾಗೇಂದ್ರನ ಕಾಗದವನ್ನೋದಿದ ರಂಗನಾಯಕಿಗೆ ತೃಪ್ತಿ, ಅತೃಪ್ತಿಗೆಳೆರಡೂ ಒಮ್ಮೆಲೇ ಆದವು.

'ನಾನಿರುವಾಗ ಇಲ್ಲದ ಯೋಚನೆ ಹಚ್ಚಿಕೊಂಡೇಕೆ ಅವಸ್ಥೆ ಪಡುತ್ತಾರೆ. ಯಾವುದು ಸ್ಥಿರ-ಯಾರು ಶಾಶ್ವತ. ಇಂದು ನನಗೆ ಸ್ವಾತಂತ್ರ್ಯವಿಲ್ಲ-ನಾಳೆ ಸಿಕ್ಕಬಹುದು.'

ತನ್ನ ಸ್ವಾತಂತ್ರ್ಯದ ಬಗ್ಗೆ ನಾಗೇಂದ್ರ ಬರೆದಿದ್ದುದನ್ನು ಪುನಃ ಪುನಃ ಓದಿಕೊಂಡು ಆಳವಾಗಿ ವಿಚಾರಮಾಡಿದಳು. ಸ್ವಾತಂತ್ರ್ಯ ದೊರಕಿಸಿಕೊಳ್ಳುವ ಒಂದು ಮಾರ್ಗ ಮನಸ್ಸಿಗೆ ಭಾಸವಾಯಿತು. ಅದನ್ನು ತಾನೇ ಬಹಿಷ್ಕರಿಸಿ

'ಈ ಮಾರ್ಗದಲ್ಲಿ ಸ್ವಾತಂತ್ರ್ಯ ದೊರಕಿಸಿಕೊಂಡರೂ ನಾಳೆ ನಾನೂ

ಅವರೂ ಸುಖವಾಗಿರಲು ಸಾಧ್ಯವೇ? ಈ ಸುಲೋಚನ ಒಬ್ಬಳು ಮಧ್ಯೆ ಯಿದ್ದಾಳೆ.'

ಸುಲೋಚನ ವಿಚಾರ ತಲೆಯಲ್ಲಿ ಹೊರಟುಬಿಟ್ಟಿತು.

'ನಾಳೆ ಅವಳು ಒಬ್ಬಳೇ ಬರುವುದಿಲ್ಲ. ಜತೆಯಲ್ಲಿ ಮಗನನ್ನು ಕರೆದು ಕೊಂಡು ಬರುತ್ತಾಳೆ. ತನ್ನ ಮಗನನ್ನು-ನಾಗೇಂದ್ರನ ಮಗನನ್ನು! ಅವರ ಮೇಲೆ ಒಂದಲ್ಲ ಎರಡು ಮೋಹಜಾಲ ಬಿದ್ದಂತಾಗುತ್ತದೆ. ಮಗನ ಮೇಲಣ ಮಮತೆ ನಾಳೆ ನಾಗೇಂದ್ರನನ್ನು ನನ್ನಿಂದ ದೂರಮಾಡುವುದೇ?'

ತನ್ನ ಪರಿಸ್ಥಿತಿ ನೆನೆದು ರಂಗನಾಯಕಿ ಕಣ್ಣೀರಿಟ್ಟಳು.

'ಅಯ್ಯೋ! ನನ್ನದಲ್ಲದ ವಸ್ತುವನ್ನು ನನ್ನದು ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಅದು ನನಗೆ ದಕ್ಕೀತೇ? ಯಾವ ವಸ್ತುವು ಈಗ ನನ್ನದಾಗಿಯೋ ಅದು ನನಗೆ ಬೇಡವಾಗಿದೆ.'

ವಿಚಾರಪರಂಪರೆ ರಂಗನಾಯಕಿಯ ಮನಸ್ಸಿಗೆ ವಜ್ರಸಮಾನ ಕಠೋರತೆಯನ್ನು ತಂದುಕೊಟ್ಟಿತು.

'ಯಾವ ವಸ್ತುವನ್ನು ನಾನು ಆಶಿಸಿದ್ದೇನೋ ಅದು ನನ್ನದಾಗಲೇ ಬೇಕು. ಅದು ಬೇರೆ ಯಾರಿಗೂ ಸೇರಲು ಸಾಧ್ಯವಿಲ್ಲ. ನನ್ನ ವಸ್ತುವನ್ನು ಆಶಿಸುವವರನ್ನು ನಾಶಮಾಡಿಬಿಡಬೇಕು.'

ಎಂದುಕೊಂಡಳು.

ನಾಗೇಂದ್ರನಿಗೆ ಅವಳು ಪುನಃ ಕಾಗದ ಬರೆಯಲು ಸಾಧ್ಯವಿರಲಿಲ್ಲ. ಅದೂ ಅವಳ ಮನಸ್ಸನ್ನು ನೋಯಿಸಿತ್ತು.

## ೪೧

ನಾಗೇಂದ್ರ ಊರಿಗೆ ಹೊರಡುವ ಮುನ್ನ ಸುಬ್ಬರಾಯರು ಸೊಗಸಾದ ಔತಣ ಏರ್ಪಡಿಸಿ ತಮ್ಮ ಬಂಧುಮಿತ್ರರನ್ನೆಲ್ಲಾ ಕರೆದಿದ್ದರು. ಸಂಜೆಯವರೆಗೆ ಊಟ ತಿಂಡಿ, ಅತಿಥಿಸತ್ಕಾರವೇ ಆಗಿಹೋಯಿತು. ಬೆಳಿಗ್ಗೆಯ ಗಾಡಿಯಲ್ಲಿ ನಾಗೇಂದ್ರ ಹೊರಡುವುದೆಂದು ನಿಶ್ಚಯವಾಗಿತ್ತು.

ಸುಲೋಚನ ಅತ್ತು ಅತ್ತು ಕಣ್ಣು ಕೆಂಪಗೆ ಮಾಡಿಕೊಂಡಿದ್ದಳು. 'ಹಸೀಮೈ-ಈಗ ಅಲಸಿಕೆಮಾಡಿಕೊಳ್ಳಬಾರದು' ಎಂದು ಸೀತಮ್ಮನವರು ಎಚ್ಚರಕೊಟ್ಟಿದ್ದುದೂ ಅವಳ ಲಕ್ಷ್ಯಕ್ಕೆ ಬಂದಿರಲಿಲ್ಲ.

ನಾಗೇಂದ್ರ ರಾತ್ರಿ ಸುಲೋಚನೆಯ ಕಣ್ಣುಗಳನ್ನೇ ದಿಟ್ಟಿಸಿ ನೋಡಿ

"ಕಣ್ಣುಗಳಿರುವುದು ಅಳುವುದಕ್ಕಲ್ಲ ಸುಲೋಚನ"

ಎಂದ. ಸುಲೋಚನ ಅವನಿಗೆ ಉತ್ತರಕೊಡುವ ಸಾಹಸಮಾಡಲಿಲ್ಲ. ಗಂಡನ ಸಮೀಪದಲ್ಲಿ ಕುಳಿತುಕೊಂಡು ಅವನನ್ನು ಅಪಾರ ಕರುಣೆಯಿಂದ ನೇವರಿಸುತ್ತಾ

"ನನಗೇಕೋ ಭಯವಾಗುತ್ತದೆ."

"ಭಯಕ್ಕೇನೂ ಕಾರಣವಿಲ್ಲ. ಚೊಚ್ಚಿಲು ಸ್ವಲ್ಪ ಕಷ್ಟವಾಗುತ್ತದೆ. ನಿನ್ನ ಆರೋಗ್ಯ ಚೆನ್ನಾಗಿರುವುದರಿಂದ ಹೆಚ್ಚು ಕಷ್ಟವಾಗಲಾರದು. ಮಾವನವರು ನಿನ್ನ ಯೋಗಕ್ಷೇಮ ಸರಿಯಾಗಿ ನೋಡಿಕೊಂಡಿದ್ದಾರೆ."

"ನನಗಾಗಿ ಭಯವಲ್ಲ—ನಿಮಗಾಗಿ."

"ಹುಚ್ಚಿ ! ನನಗೇನು ಬಂದಿರುವುದು ಧಾಡಿ."

"ನನ್ನ ಮೈ ಕಳೆಯುವವರೆಗೆ ಇಲ್ಲಿರಲು ಸಾಧ್ಯವಿಲ್ಲವೇ ?"

"ಬೆಂಗಳೂರಿನ ಕೆಲಸಕಾರ್ಯಗಳ ವಿಷಯ ನಿನಗೆ ತಿಳಿಯದೇನು ? ಅಣ್ಣ ಒಬ್ಬರೇ ಎಷ್ಟೂಂತ ಮಾಡುವುದಕ್ಕೆ ಸಾಧ್ಯ ? ಈಗ ಈ ನವಭಾರತ್ ಮಿಲ್ಲಿನ ಏಜನ್ಸಿಯನ್ನೂ ಗಂಟು ಹಾಕಿಕೊಂಡಿದ್ದೇವೆ. ಅವರಿಗೆ ಒಂದು ಲಕ್ಷರೂಪಾಯಿ ಮುಂಗಡ ಕೊಟ್ಟದ್ದೇವೆ. ನಮ್ಮ ಹಣ ಹಿಂದಿರುಗುವುದರ ಕಡೆಗೆ ಲಕ್ಷ್ಯಯಿಡಬೇಕೋ ಬೇಡವೋ ?"

"ಹೋಗಿಬನ್ನಿ. ಆದರೆ ತಂದೆ ಕಾಗದ ಬರೆದಕೂಡಲೆ ಹೊರಟು ಬರಬೇಕು."

"ಹಾಗೇ ಆಗಲಿ"

ಎಂದು ಒಪ್ಪಿಕೊಂಡ.

ಮೈಸೂರಿನಿಂದ ಅರಸೀಕೆರೆಗೆ ಹೋಗುವ ರೈಲು ಬೆಳಿಗ್ಗೆ ಹತ್ತುಗಂಟೆಗೆ ಹೊಳೇನರಸೀಪುರಕ್ಕೆ ಬರುತ್ತಿತ್ತು. ರೈಲಿಗೆ ಹೊರಡುವ ವೇಳೆಗೆ ಸೀತಮ್ಮ ಅಡಿಗೆಮಾಡಿ ಅಳಿಯನಿಗೆ ಬಡಿಸಿದರು. ದಾರಿಗೆ ತಿಂಡಿಬುಟ್ಟಿಯನ್ನು ಅಣಿ ಮಾಡಿಕೊಟ್ಟರು.

ಸ್ಟೇಷನ್ವರೆಗೆ ಹೋಗಿ ಗಂಡನನ್ನು ಕಳುಹಿಸಿಬರಬೇಕೆಂದು

ಸುಲೋಚನ ಹಟಹಿಡಿದಳು. ಸೀತಮ್ಮನವರು ಮಗಳನ್ನು ಗದರಿಸಿದರು. ಸುಲೋಚನ ಗಂಡನನ್ನು ಮನೆಯಲ್ಲಿಯೇ ಬೀಳ್ಕೊಡಬೇಕಾಯಿತು.

ಕಂಬನಿ ಕೋಡಿಕೋಡಿಯಾಗಿ ಹರಿಯುತ್ತಿದ್ದ ಅವಳ ಮುಖ ನೋಡಿ 'ಪ್ರಯಾಣ ನಿಲ್ಲಿಸಿಬಿಡಲೇ' ಎಂದು ನಾಗೇಂದ್ರ ಯೋಚಿಸಿದ. ಆದರೆ ನಿಲ್ಲಿಸಲು ಬರುವಂತಿರಲಿಲ್ಲ. ಸುಬ್ಬರಾಯರು ಬೀಗರಿಗೆ ಬೆಳಿಗ್ಗೆಯೇ ತಾರುಮಾಡಿ ಸಂಜೆಗೆ ನಾಗೇಂದ್ರ ಊರಿಗೆ ಬರುವ ವಿಷಯ ತಿಳಿಸಿದ್ದರು.

ನಾಗೇಂದ್ರನನ್ನು ಮನೆಗೆ ಕರೆದೊಯ್ಯಲು ಸ್ಟೇಷನ್ನಿಗೆ ಕಾರು ಬಂದಿತ್ತು.

"ಅಣ್ಣಾ ಚೆನ್ನಾಗಿದ್ದಾರೇನೋ ?"

ಎಂದು ಡ್ರೈವರನ್ನು ಕೇಳಿದ.

"ಇದ್ದಾರೆ ಸ್ವಾಮಿ."

"ಈಗ ಎಲ್ಲಿದ್ದಾರೆ. ಮನೆಯಲ್ಲಿಯೋ ಅಂಗಡಿಯಲ್ಲಿಯೋ ?"

"ತಾವು ಬರುತ್ತೀರೆಂದು ಮನೆಗೆ ಬಂದು ಸ್ಟೇಷನ್ನಿಗೆ ಕಾರು ಕಳಿಸಿಕೊಟ್ಟರು"

ಎಂದು ಹೇಳಿದ. ನಾಗೇಂದ್ರನ ಉತ್ಸಾಹ ಕುಸಿದುಬಿತ್ತು.

ಮಗನ ಆಗಮನವನ್ನು ಮಹಾಬಲರಾಯ ಅತ್ಯಾತುರದಿಂದ ಕಾಯುತ್ತಾ ವೆರಾಂಡದಲ್ಲಿಯೇ ಶಥಪಥ ಸುತ್ತುತ್ತಿದ್ದ. ಕಾರು ಬಂದು ಮನೆಯ ಮುಂದೆ ನಿಂತಿತು. ಮಹಾಬಲರಾಯ ಮಗನನ್ನೆದುರುಗೊಂಡು ಒಳಗೆ ಕರೆದುಕೊಂಡುಬಂದ.

"ರೈಲು ಲೇಟಾಯಿತೇ ?"

"ಇಲ್ಲ ಟೈಮಿಗೆ ಸರಿಯಾಗಿ ಬಂದಿದೆಯಲ್ಲಾ."

"ಊಟಮಾಡಿಕೊಂಡು ಹೊರಟೆಯಾ ?"

"ಹೂ !"

"ಸುಲೋಚನ ಆರೋಗ್ಯವಾಗಿದ್ದಾಳೆಯೇ ?"

"ಇದ್ದಾಳೆ. ನಾನು ಬೇಗ ಬರಬೇಕೆಂದಿದ್ದೆ. ಆದರೆ........"

"ಚಿಂತೆಯಿಲ್ಲಪ್ಪ. ಇನ್ನೂ ಎರಡು ದಿವಸ ಹೊಳೇನರಸೀಪುರದಲ್ಲಿ ಇದ್ದು ಬಂದಿದ್ದರೆ ಯಾರು ಬೇಡವೆನ್ನುತ್ತಿದ್ದರು."

"ಇಲ್ಲಿ ನೀನೊಬ್ಬನೇ........"

"ಆದರೇನು ?"

ರಂಗನಾಯಕಿ ಕಾಫಿ ಮಾಡಿ ತಾನೇ ತೆಗೆದುಕೊಂಡಬಂದಳು. ಮಹಾಬಲರಾಯ ಕಾಫಿ ನೋಡಿ.

"ಈಗೇಕೆ ಕಾಫಿ ಕೊಡುತ್ತೀಯೇ ? ಹಸಿದುಬಂದಿದ್ದಾನೆ. ಈಗ ಕಾಫಿ ಕುಡಿದರೆ ಹಸಿವು ಮುಚ್ಚಿಹೋಗುತ್ತದೆ."

"ಅವರಿಗೆ ಆಯಾಸವಾಗಿದೆ. ಕಾಫಿ ಬೇಕು. ನಿಮಗೊಂದು ತೊಟ್ಟು ಕೊಡಲೇನು ?"

"ಈಗ ಕಾಫಿ ಕುಡಿದು ರಾತ್ರೀಗೆ ಜಾಗರಣೆಮಾಡು ಎನ್ನುತ್ತೀಯೇನು ?"

ನಾಗೇಂದ್ರನೊಬ್ಬನೇ ಕಾಫಿ ತೆಗೆದುಕೊಂಡ.

"ಸುಲೋಚನ ಆರೋಗ್ಯವಾಗಿದ್ದಾಳೆಯೇ ?"

ಎಂದು ರಂಗನಾಯಕಿ ಕೇಳಿದಳು.

"ಆರೋಗ್ಯವಾಗಿದ್ದಳಮ್ಮ."

"ದಿನ ತುಂಬಿರಬೇಕು."

"ಒಂದೆರಡು ವಾರಗಳಲ್ಲಿ ಹೆರಿಗೆಯಾಗುತ್ತದೆಂದು ನರ್ಸ್ ಹೇಳಿದಳಂತೆ. ಬೊಂಬಾಯಿಯಲ್ಲಿ ಎಲ್ಲರೂ ಆರೋಗ್ಯವಾಗಿದ್ದಾರೆ. ನನ್ನನ್ನು ಬಹಳ ಚೆನ್ನಾಗಿ ನೋಡಿಕೊಂಡರು. ನೀವು ಯಾವಾಗ ಬೊಂಬಾಯಿಗೆ ಬರುತ್ತೀರೆಂದು ಕೇಳಿದರು."

"ಇವರು ಯಾವಾಗ ಕಳುಹಿಸಿಕೊಟ್ಟರೆ ಆವಾಗ"

"ಈಸಾರೆ ನಾನು ಹೋಗುವಾಗ ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ, ಸುಮ್ಮನಿರು."

ಎಂದು ಮಹಾಬಲರಾಯ ಹೇಳಿದ

ಅವನ ಆಶ್ವಾಸನ ಕೇಳಿ ರಂಗನಾಯಕಿಗೆ ಸಂತೋಷವಾಗಲಿಲ್ಲ.

"ಅಡಿಗೆಯಾಗಿದೆ. ಊಟಕ್ಕೆದ್ದುಬಿಡಿ. ಬೆಳಿಗ್ಗೆ ರೈಲಿನ ಅವಸರ ಹೇಗೆ ಊಟಮಾಡಿದ್ದಾರೋ ಏನೋ ?"

ಎಂದು ಹೇಳಿ ರಂಗನಾಯಕಿ ಒಳಗೆ ಹೋದಳು.

ಮಹಾಬಲರಾಯ ಮಗನ ರಾಯಭಾರ ಸಫಲವಾದುದಕ್ಕೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ

"ನಂಜುಂಡಯ್ಯ ಕಾಗದ ಬರೆದಿದ್ದಾರೆ. ನಿನ್ನ ವ್ಯವಹಾರ ನೈಪುಣ್ಯ ಅವರು ಬಹಳ ಮೆಚ್ಚಿಕೊಂಡಿದ್ದಾರೆ"

"ಅವರ ವಿಶ್ವಾಸ."

"ಏಳಪ್ಪ-ಬಟ್ಟೆ ಬದಲಾಯಿಸು. ಊಟಮಾಡಿ ಬೇಗ ಮಲಗಿಕೊಳ್ಳುವೆಯಂತೆ."

ನಾಗೇಂದ್ರ ಎದ್ದು ತನ್ನ ರೂಮಿಗೆ ಹೋಗುವ ಮುನ್ನ ತಮ್ಮಂದಿರನ್ನೊಮ್ಮೆ ಮಾತನಾಡಿಸಿದ.

ಊಟ ಮುಗಿದಮೇಲೆ ಮಹಾಬಲರಾಯ ಮಗನೊಂದಿಗೆ ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತ. ಅವನು ಪ್ರವಾಸ ಹೋಗಿದ್ದಾಗ ಮಿಲ್ಲಿನಲ್ಲಿ, ಅಂಗಡಿಯಲ್ಲಿ ಆದ ವ್ಯವಹಾರವನ್ನೆಲ್ಲಾ ಅವನಿಗೆ ವರದಿ ಒಪ್ಪಿಸಿದ.

ನಾಗೇಂದ್ರ ಆಕಳಿಸಿದುದನ್ನು ಕಂಡು ಮಹಾಬಲರಾಯ ಎದ್ದ. ನಾಗೇಂದ್ರ, ತನ್ನ ರೂಮಿಗೆ ಬಂದು ಕೈಯ್ಯಲ್ಲಿ ಒಂದು ಪುಸ್ತಕ ಹಿಡಿದು ಪವಡಿಸಿದ.

ಮನೆಯ ದೀಪವೆಲ್ಲಾ ಆರಿದವು. ತಂದೆಯ ರೂಮಿನ ದ್ವೀಪವೂ ಆರಿತು. ನಾಗೇಂದ್ರ ತನ್ನ ರೂಮಿನ ದೀಪ ಆರಿಸಿ ಶಥಪಥ ತಿರುಗುತ್ತಿದ್ದ.

ತೊಟ್ಟಿಯ ಗಡಿಯಾರದಲ್ಲಿ ಹನ್ನೊಂದು ಹೊಡೆಯಿತು. ನಾಗೇಂದ್ರನ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಒಂದು ಗಳಿಗೆ ಕುರ್ಚಿಯ ಮೇಲೆ ಕೂಡುವನು. ಮರುಗಳಿಗೆ ಎದ್ದು ಹಾಸಿಗೆಯಮೇಲೆ ಪವಡಿಸುವನು.

ಹನ್ನೆರಡು ಗಂಟೆ ಹೊಡೆಯಿತು. ನಾಗೇಂದ್ರ ಎದ್ದು ಕುಳಿತ. ಕೂಡುವುದು ಸಾಧ್ಯವಾಗಲಿಲ್ಲ.

ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ, ತಮ್ಮಂದಿರು ಮಲಗಿದ್ದ ರೂಮಿನ ಕಡೆ ಹೋದ. ಮಕ್ಕಳು ಸುಖವಾಗಿ ಮಲಗಿ ನಿದ್ರಿಸುತ್ತಿದ್ದರು.

ಹಾಗೆಯೇ ಮೆಲ್ಲನೆ ತಂದೆಯ ರೂಮಿನ ಬಳಿ ಬಂದು ಬಾಗಿಲ ಮರೆಯಲ್ಲಿ ನಿಂತು ಆಲೈಸಿದ. ತಂದೆ ಗೊರಕೆ ಹೊಡೆಯುತ್ತಿದ್ದುದು ಕೇಳಿಸಿತು. ಶಬ್ದವಾಗದಂತೆ ಮೆಲ್ಲನೆ ತನ್ನ ರೂಮಿಗೆ ಬಂದು ಬಾಗಿಲ ಬಳಿಯಲ್ಲಿ ನಿಂತ.

ನಾಗೇಂದ್ರ ರೂಮಿಗೆ ಹಿಂದಿರುಗಿದ ಹತ್ತು ನಿಮಿಷಗಳಲ್ಲಿ ರಂಗನಾಯಕಿ ಬಂದಳು. ಅವಳನ್ನು ಬಾಚಿ, ಅಪ್ಪಿ, ಮೆಲ್ಲನೆ ಬಾಗಿಲುಸರಿಸಿ ಚಿಲಕ ಹಾಕಿದ.

"ನೀನು ಬರುವುದೇ ಇಲ್ಲವೇನೋ ಎಂದಿದ್ದೆ."

"ಬರದೇ ಉಂಟೇ ? ಅವರಿಗೆ ನಿದ್ದೆ ಹತ್ತುವುದು ತಡ."

"ಅಂತೂ ಬಂದೆಯಲ್ಲಾ....

"ಹೊಳೇನರಸೀಪುರ ಬಿಟ್ಟಿತೇ ನಿಮ್ಮನ್ನು."

"ಮಾತಿನಲ್ಲಿ ಹೊತ್ತುಗಳೆಯುವುಕ್ಕೆ ವ್ಯವಧಾನವಿಲ್ಲ ನಾಯಕಿ. ನಾಳೆ ಮಧ್ಯಾಹ್ನ ಮಾತನಾಡುವ."

"ನಾಳೆ ಭಾನುವಾರ. ಹುಡುಗರೆಲ್ಲಾ ಮನೆಯಲ್ಲಿಯೇ ಇರುತ್ತಾರೆ. ಫೋಟೋ ತಂದಿರಾ ?"

"ತಂದಿದ್ದೇನೆ."

"ಮೇಜಿನ ಮೇಲೆ ಇಟ್ಟಿರಿ. ನಾಳೆ ನಾನು ಯಾವಾಗಲಾದರೂ ತೆಗೆದು ಕೊಳ್ಳುತ್ತೇನೆ."

"ಹಾಗೇ ಆಗಲಿ. ಆರೋಗ್ಯವಾಗಿದ್ದೀಯಾ ?"

"ಆರೋಗ್ಯಕ್ಕೇನೂ ಕೊರತೆಯಿಲ್ಲ—ಮನಸ್ಸಿಗೆ ನೆಮ್ಮದಿಯಿಲ್ಲ."

"ಏಕೆ ?"

"ಎರಡನೆಯ ಕಾಗದ ಕೂಡ ನಿಮ್ಮಿಂದ ಬರಲಿಲ್ಲ."

"ಕಾಗದದ ಬದಲು ನಾನೇ ಬಂದಿರುವೆನಲ್ಲಾ."

"ಹೆಣ್ಣಿನ ಮನಸ್ಸಿಗೆ ಆಗುವ ತಾಪ ನಿಮಗೆ ಗೊತ್ತಾಗುವುದಿಲ್ಲ."

"ಈ ಗಂಡಿಗೂ ಅಷ್ಟೇ ತಾಪವಾಗಿದೆ ನಾಯಕಿ"

ಎಂದು ಹೇಳಿದ. ಇಬ್ಬರೂ ಮಾತು ನಿಲ್ಲಿಸಿದರು.

ಮೂರುಗಂಟೆ ಹೊಡೆದದ್ದು ಕೇಳಿ ರಂಗನಾಯಕಿ ಮಂಚಬಿಟ್ಟು ಕೆಳ ಗಿಳಿದಳು. ನಾಗೇಂದ್ರ ಎದ್ದು ಮೆಲ್ಲನೆ ಬಾಗಿಲು ತೆಗೆದು ಅವಳನ್ನು ಕಳಿಸಿಕೊಟ್ಟ.

ಮಾರನೆಯಬೆಳಿಗ್ಗೆ ಹತ್ತುಗಂಟೆಯ ವೇಳೆಗೆ ಮನೆಯಲ್ಲಿ ಯಾರೂ ಇರಲಿಲ್ಲ. ಮಹಾಬಲರಾಯ ಅಂಗಡಿಗೆ ಹೋಗಿದ್ದ; ಮಕ್ಕಳು

'ಮಾರ್ನಿಂಗ್‌ಷೋ' ನೋಡಲು ಹೋಗಿದ್ದರು. ರಂಗನಾಯಕಿ ನಾಗೇಂದ್ರನ ರೂಮಿಗೆ ಬಂದು ಅವನ ಫೋಟೋ ಪುಡಿಪುಡಿಯಾಗುವಷ್ಟು ಅದನ್ನು ಅಪ್ಪಿ ಮುದ್ದಾಡಿದಳು. ಅದನ್ನೇ ದಿಟ್ಟಿಸಿನೋಡಿ,

'ನನ್ನ ರಮಣ ಮನ್ಮಥ ಇದ್ದಹಾಗಿದ್ದಾರೆ'

ಎಂದು ಅಭಿಮಾನಪಟ್ಟುಕೊಂಡಳು.

ಮಹಾಬಲರಾಯ ಮನೆಗೆ ಬರುವ ವೇಳೆಯಾಗಲು ಫೋಟೋ ತೆಗೆದು ತನ್ನ ಟ್ರಂಕಿನಲ್ಲಿ ಭದ್ರವಾಗಿ ಮುಚ್ಚಿಟ್ಟು ಬೀಗಹಾಕಿದಳು.

## ೪೨

ಎರಡು ವಾರ ಕಳೆಯುವಲ್ಲಿ ಹೊಳೇನರಸೀಪುರದಿಂದ ಸಂತೋಷ ವಾರ್ತೆ ಬಂದಿತು. ಸುಬ್ಬರಾಯರು ಬೀಗರಿಗೆ ತಾರುಮಾಡಿ,

'ಸುಲೋಚನ ಸುಖವಾಗಿ ಪ್ರಸವಿಸಿದಳು. ಗಂಡುಮಗು, ಮಗು ಬಾಣಂತಿ ಆರೋಗ್ಯವಾಗಿದ್ದಾರೆ.' ಎಂದು ತಿಳಿಸಿದ್ದರು.

ಮಹಾಬಲರಾಯ ತಾರು ಹಿಡಿದುಕೊಂಡು ಮಗನ ರೂಮಿಗೆ ಬಂದು ಅದನ್ನು ಅವನ ಕೈಗಿತ್ತು,

"ಯಾವಾಗ ಹೊರಡುತ್ತೀಯಪ್ಪಾ."

"ನಾಳೆಯ ಬೆಳಿಗ್ಗೆ"

ಎಂದು ನಾಗೇಂದ್ರ ಉತ್ತರಿಸಿದ.

ಮಹಾಬಲರಾಯನ ಸಂತೋಷಕ್ಕೆ ಪಾರವೇ ಇಲ್ಲ. ಹೆಂಡತಿಯನ್ನು ಕೂಗಿ

"ನಿನ್ನ ಸೊಸೆ ಗಂಡುಮಗುವನ್ನು ಹೆತ್ತಳಂತೆ ಕಣೇ"

ಎಂದ. ರಂಗನಾಯಕಿ ಕೂಡಲೇ ಅಡಿಗೆಯ ಮನೆಗೆ ಹೋಗಿ ಸಕ್ಕರೆ ತಂದು ತಂದೆ, ಮಗ, ಇತರ ಮಕ್ಕಳಿಗೆ ಹಂಚಿದಳು.

ಸಕ್ಕರೆ ಡಬ್ಬವನ್ನು ಅಡಿಗೆಯಮನೆಯಲ್ಲಿಟ್ಟು, ಕಾಡಮ್ಮನವರಿಗೂ ಸಮಾಚಾರ ಮುಟ್ಟಿಸಿ, ರಂಗನಾಯಕಿ ಸ್ನಾನದ ನೆಪ ಮಾಡಿಕೊಂಡು ಬಚ್ಚಲುಮನೆಗೆ ಹೋಗಿ ಅಲ್ಲಿ ಕುಳಿತು ಕಣ್ತುಂಬ ಅತ್ತಳು.

ಸ್ನಾನಮಾಡುತ್ತಿದ್ದಂತೆ ಥಟ್ಟನೆ ರಂಗನಾಯಿಕಿಗೆ ಒಂದು ಯೋಚನೆ

ಹೊಳೆಯಿತು. ಅದನ್ನೇ ಆಳವಾಗಿ ಯೋಚಿಸುತ್ತಾ ಸ್ನಾನಮುಗಿಸಿ ತಲೆಗೆ ಟವಲು ಕಟ್ಟಿಕೊಂಡು ತನ್ನ ರೂಮಿಗೆ ಹೋದಳು.

ಅಂದು ಯಥಾಪ್ರಕಾರ ಮಧ್ಯರಾತ್ರಿ ಕಳೆದೊಡನೆಯೇ ರಂಗನಾಯಕಿ ನಾಗೇಂದ್ರನ ರೂಮಿಗೆ ಬಂದಳು. ಕತ್ತಲಲ್ಲಿ ಅವಳ ಮುಖವನ್ನು ನಾಗೇಂದ್ರ ನೋಡಲಾಗದಿದ್ದರೂ, ಅವಳು ಭಾವೋದ್ರೇಕಗೊಂಡಿದ್ದಾಳೆಂಬುದನ್ನು ಗ್ರಹಿಸಿದ.

ರಂಗನಾಯಕಿ ಧ್ವನಿ ಸ್ವಲ್ಪ ಬಿರುಸಾಗಿತ್ತು. ನಾಗೇಂದ್ರನನ್ನಪ್ಪಿ ಕೊಂಡು

"ನನಗಿಂತ ನಿಮಗೆ ಸುಲೋಚನ ಹೆಚ್ಚೇ ?"

ಎಂದು ಕೇಳಿದಳು. ಅವಳ ಪ್ರಶ್ನೆ ನಾಗೇಂದ್ರನಿಗೆ ಅರ್ಥವಾಗ ಲಿಲ್ಲ. ಅವನು ಮೃದುವಾಗಿ

"ಏಕೆ ಹಾಗೆ ಕೇಳುವೆ ನಾಯಕಿ"

"ಪುತ್ರ ಸೌಭಾಗ್ಯ ನನಗೆ ಬೇಡವೇ"

ಎಂದಳು. ನಾಗೇಂದ್ರನ ಮೈಕಂಪಿಸಿತು. ಮಂಚ ಬಿಟ್ಟು ಏಳುವುದು ಸಾಧ್ಯವಿರಲಿಲ್ಲ. ರಂಗನಾಯಕಿಯ ಬಾಹುಗಳು ಅವನನ್ನು ಬಲವಾಗಿ ಬಿಗಿ ದಪ್ಪಿ ಬಂಧನದಲ್ಲಿ ಕೆಡಹಿದ್ದವು.

ಮಾರನೆಯ ಬೆಳಿಗ್ಗೆ ನಾಗೇಂದ್ರ ಹೊಳೇನರಸೀಪುರಕ್ಕೆ ಪ್ರಯಾಣ ಮಾಡಿದ.

ನಾಮಕರಣ ಮುಗಿಯುವವರೆಗೆ ನಾಗೇಂದ್ರ ಊರಿಗೆ ಹೊರಡುವು ದಕ್ಕೆ ಸುಬ್ಬರಾಯರು ಅವಕಾಶಕೊಡಲಿಲ್ಲ. ಅವನ ಸಬೂಬುಗಳಿಗೆಲ್ಲಾ ಅವರು ಸಮುತ್ತರಕೊಟ್ಟು ಅವನನ್ನು ಹೊಳೇನರಸೀಪುರದಲ್ಲಿಯೇ ಉಳಿಸಿ ಕೊಂಡರು.

ಸುಲೋಚನ ನೀರು ಹಾಕಿಕೊಂಡು ಒಳಗೆ ಬಂದಳು. ಗಂಡ ತನ್ನ ತಂದೆಯ ಮಾತಿಗೆ ಮನ್ನಣೆಕೊಟ್ಟು ನಿಂತುದಕ್ಕೆ ಅವಳಿಗೆ ಪರಮ ಸಂತೋಷ ವಾಗಿತ್ತು.

ಒಂದು ದಿನ ತನ್ನ ಮಗುವನ್ನು ಕೈಯಲ್ಲೆತ್ತಿಕೊಂಡು

"ನಿಮ್ಮ ಮಗನನ್ನು ಎತ್ತಿಕೊಳ್ಳುವುದಿಲ್ಲವೇ ?"

ಎಂದು ಕೇಳಿದಳು.

ಹತ್ತು ಹನ್ನೊಂದು ದಿವಸದ ಮಗುವನ್ನೆತ್ತಿಕೊಳ್ಳಲು ನಾಗೇಂದ್ರನಿಗೆ ಭಯ.

"ನನಗೆ ಮಕ್ಕಳನ್ನೆತ್ತಿಕೊಳ್ಳುವುದಕ್ಕೆ ಬರುವುದಿಲ್ಲ. ಪಾಪ! ಅದಕ್ಕೆ ಹಿಂಸೆಯಾದರೆ...."

"ಇನ್ನು ಮೇಲೆ ಸ್ವಲ್ಪ ಅಭ್ಯಾಸಮಾಡಿಕೊಳ್ಳಿ"

ಎಂದು ಸುಲೋಚನ ಮಗುವನ್ನು ನಾಗೇಂದ್ರನ ತೊಡೆಯ ಮೇಲೆ ಮಲಗಿಸಿದಳು.

ನಾಗೇಂದ್ರ ಅಭಿಮಾನಪೂರಿತನಾಗಿ ತನ್ನ ಮಗನನ್ನು ನೋಡಿದ.

ಸುಲೋಚನ ಇಬ್ಬರನ್ನೂ ನೋಡಿ.

"ನಿಮ್ಮ ಹಾಗೇ ಇದ್ದಾನೇಂದ್ರೆ ನಮ್ಮ ಸಿಂಹಾದ್ರಿ."

"ಛಿ! ಛಿ! ಗಂಡುಮಕ್ಕಳು ಯಾವಾಗಲೂ ತಾಯಿಯನ್ನೇ ಹೋಲುವುದು."

"ಇರಬಹುದು. ಆದರೆ ಈ ಗಂಡುಮಗ ತಂದೆಯನ್ನು ಹೋಲುತ್ತಿದ್ದಾನೆ."

"ನೀನು ಬಲು ಮೊಂಡು ಕಣೇ ಸುಲೋಚನ."

"ತಂದೆ ಮುದ್ದಿನಿಂದ ಬೆಳಸಿದರು. ಗಂಡ........"

"ಮುದ್ದಿನಿಂದ ಬೆಳಸುತ್ತಿದ್ದಾನೆ."

ಸುಲೋಚನ ನಸುನಾಚಿದಳು.

"ಈಸಲ ಊರಿಗೆ ಬಾ ಮುದ್ದು ಕಾಣುವೆಯಂತೆ. ಬೆಳಿಗ್ಗೆಯಿಂದ ಸಂಜೆಯವರೆಗೂ ಕೆಲಸ ಅಂಟಿಸುತ್ತೇನೆ."

"ಮಗು ಕೈಬಿಡುವುದಿಲ್ಲ ಎಂದು ಸಿಂಹಾದ್ರಿಯನ್ನು ಎತ್ತಿಕೊಂಡು ಕುಳಿತುಬಿಡುತ್ತೇನೆ."

"ನೀನು ಇಂಥ ಮೈಗಳ್ಳಿ ಎಂದು ನನಗೆ ಗೊತ್ತಿರಲಿಲ್ಲ."

"ದೊರೆ ಕೈಹಿಡಿದಮೇಲೆ ಮೈಗಳ್ಳಿ ಏಕಾಗಬಾರದು ?"

"ಕರೆದುಕೋ ನಿನ್ನ ಮಗನನ್ನು .......ತೀರ್ಥ ಕೊಟ್ಟುಬಿಟ್ಟ."

ಸುಲೋಚನ ಕಿಲಕಿಲನೆ ನಗುತ್ತಾ ಮಗನನ್ನೆತ್ತಿಕೊಂಡಳು.

ಸುಲೋಚನೆಯ ಪವಿತ್ರ ಮಧುರಮೈತ್ರಿ ನಾಗೇಂದ್ರನ ಹೃದಯವನ್ನು ಭಾರಗೊಳಿಸಿತು.

ಸಂಜೆ ಮಾವನವರು 'ಕ್ಲಬ್ಬಿಗೆ ಬನ್ನಿ' ರೆಂದು ಕರೆದರೆ ತಪ್ಪಿಸಿಕೊಂಡು ನಾಗೇಂದ್ರ ಏಕಾಂಗಿಯಾಗಿ ಊರ ಹೊರಗೆ ವಾಕಿಂಗ್ ಹೊರಟ.

ಅವನ ಎದುರಿಗೆ ದನಗಳು ಹುಲ್ಲುಗಾವಲಿನಿಂದ ಮನೆಗೆ ಹಿಂದಿರುಗುತ್ತಿದ್ದವು. ಬೆಳಿಗ್ಗೆಯಿಂದ ತಾಯಿಮಣ್ಣಿನ ಸೇವೆ ಮಾಡಿದ ರೈತರು ವಿಶ್ರಾಂತಿಗಾಗಿ ಮನೆಗೆ ಹಿಂದಿರುಗುತ್ತಿದ್ದರು. ನಿರಭ್ರವಾದ ಆಕಾಶ ನೀರವ ಶಾಂತಿಯನ್ನು ಪಸರಿಸಿತ್ತು. ಆಗಾಗ್ಗೆ ತೀಡುತ್ತಿದ್ದ ತಂಗಾಳಿಯ ಮೃದುಸ್ಪರ್ಶಕ್ಕೆ, ತೆಂಗಿನ ಗರಿಗಳು ಲಾಸ್ಯವಾಡುತ್ತಿದ್ದವು.

ನಾಗೇಂದ್ರನ ಮನಸ್ಸಿನ ಉನ್ಮೂಳ ಅರಿತೋ ಏನೋ ಪ್ರಕೃತಿತಾಯಿ ಶಾಂತಿ, ಸೌಂದರ್ಯ, ಶುಭ್ರತೆಯನ್ನು ಸೂಸುತ್ತಿದ್ದಳು.

ನಡೆದುಹೋಗುತ್ತಿದ್ದಂತೆ ನಾಗೇಂದ್ರನ ಮನಸ್ಸಿನಲ್ಲಿ ಭಾವನೆಗಳು ತರಂಗತರಂಗವಾಗಿ ಏಳುತ್ತಿದ್ದವು.

ಒಮ್ಮೆ ಸುಲೋಚನೆಯ ಶಾಂತವಾದ, ಸ್ನಿಗ್ಧವಾದ ಸೌಂದರ್ಯ ಶೃಂಗಾರ ಹೊಳೆಯುವುದು; ಮರುಕ್ಷಣವೇ ರಂಗನಾಯಕಿಯ ರಾಜಸ, ಕ್ರಾಂತಿಮಯ ಶೃಂಗಾರ ಹೊಳೆಯುವುದು.

ಸುಲೋಚನೆಯ ಸ್ನೇಹ ತಣ್ಣನೆಯ ನೀರಿನಲ್ಲಿ ಕೈಯಿಟ್ಟಂತೆ ಮನಸ್ಸಿಗೆ ಆಪ್ಯಾಯಮಾನವಾಗಿತ್ತು. ರಂಗನಾಯಕಿಯ ಸ್ನೇಹ ಬಿಸಿಕೆಂಡವನ್ನು ಕೈಯಲ್ಲಿ ಹಿಡಿದಂತೆ ಸುಡುತ್ತಿತ್ತು....ಆದರೆ ಆ ಸುಡುವಿಕೆಯಲ್ಲಿಯೂ ಒಂದು ರುದ್ರಭಯಂಕರ ಸೌಂದರ್ಯವಿತ್ತು. ಬೆಂಕಿಯನ್ನು ಕೈಯಲ್ಲಿ ಹಿಡಿಯಲು ಯಾರು ಸಮರ್ಥರು ಎನ್ನುವ ಕ್ಷಾತ್ರವಿತ್ತು.

ಹೇಗಾದರೂ ಮಾಡಿ ರಂಗನಾಯಕಿಯ ಮೋಹದ ಸರಪಣಿಯನ್ನು ಕಿತ್ತೊಗೆಯಬೇಕೆಂದು ಯೋಚಿಸುವನು. ರಂಗನಾಯಕಿ....ಅವಳ ನೆನಪು ಬಂದೊಡನೆಯೇ ನಾಗೇಂದ್ರನ ಮೈಯಲ್ಲಿ ರೋಮಾಂಚವಾಗುತ್ತಿತ್ತು. ರಂಗನಾಯಕಿಯ ನೆನಪನ್ನು ಮನಸ್ಸಿನಿಂದ ದೂರಮಾಡಲೆತ್ನಿಸಿದಷ್ಟೂ ಅದು ಒಕ್ಕರಿಸಿ ಸ್ವಾಮ್ಯವಹಿಸುತ್ತಿತ್ತು. ಅವಳ ನೆನಪು ಚಿತ್ರವನ್ನಾಕ್ರಮಿಸಿದಾಗ ಸುಲೋಚನೆಯ ಚಿತ್ರ ಮಂಕಾಗಿ ಮಸಕಾಗುತ್ತಿತ್ತು.

ನಾಗೇಂದ್ರ ತನ್ನ ಮಗನನ್ನು ಸ್ಮರಿಸಿಕೊಂಡ. ಹೃದಯದಲ್ಲಿ ಅಭಿಮಾನ ಉಕ್ಕೇರಿತು. ಕೂಡಲೆ ತಾನು ರಂಗನಾಯಕಿಯ ಜತೆ ಕಳೆದ ಕೊನೆಯ ರಾತ್ರಿಯನ್ನು ಜ್ಞಾಪಿಸಿಕೊಂಡ.

ಎಂತಹ ರಾತ್ರಿಯದು! ರಂಗನಾಯಕಿ ತನ್ನನ್ನು ಬಾಹುಬಂಧನದಲ್ಲಿ ಬಿಗಿಯುತ್ತಾ 'ಪುತ್ರ ಸೌಭಾಗ್ಯ ನನಗೆ ಬೇಡವೇ?' ಎಂದು ಕೇಳಿದ್ದಳು. ಅದೇ ರಾತ್ರಿ ಪುತ್ರದಾನವಾಯಿತೇ?

ವಿಧಿಯ ವಿಕಟಲೀಲೆಯನ್ನು ನೋಡಿ ನಾಗೇಂದ್ರ ಉನ್ಮತ್ತನಂತೆ ನಕ್ಕ. 'ನಾಳೆ, ರಂಗನಾಯಕಿ ಹೊಟ್ಟೆಯಲ್ಲಿ ಹುಟ್ಟುವ ಮಗ, ನನ್ನ ತಮ್ಮನೋ ಮಗನೋ' ಎಂದು ಪ್ರಶ್ನಿಸಿಕೊಂಡ.

ಪ್ರಕೃತಿತಾಯಿ ಎಷ್ಟು ಪ್ರಯತ್ನಿಸಿದರೂ ನಾಗೇಂದ್ರನ ಮನಸ್ಸಿಗೆ ಶಾಂತಿ, ಸಮಾಧಾನ ನೀಡಲು ಸಾಧ್ಯವಾಗಲಿಲ್ಲ.

ಸಂಜೆಗತ್ತಲು ಕವಿಯುತ್ತ ಬಂತು. ಕಪ್ಪೆಗಳು ವಟಗುಟ್ಟುತ್ತಿದ್ದವು. ಕ್ರಿಮಿಕೀಟಗಳ ಕಿಚಿಪಿಚಿ ಶಬ್ದ. ಆಗಾಗ್ಗೆ ಗೂಗೆಯ ಚೀತ್ಕಾರ.

ನಾಗೇಂದ್ರ ಮನೆಯ ಕಡೆ ತಿರುಗಿದ. ಅವನ ಮುಖ ನಿಸ್ತೇಜವಾಗಿತ್ತು.

ಮಾರನೆಯ ದಿನ ನಾಗೇಂದ್ರನ ವಿಳಾಸಕ್ಕೆ ಬಂದ ಕಾಗದವನ್ನು ಸುಬ್ಬರಾಯರು ಅಂಚೆಯಾಳಿನಿಂದ ಸ್ವೀಕರಿಸಿ ಅವನ ಕೈಗಿತ್ತರು. ಕಾಗದ ಒಡೆದು ನೋಡಿಕೊಂಡ. ಮುಖ ವಿವರ್ಣವಾಯಿತು. ಅಲ್ಲಿಯೇ ಇದ್ದ ಸುಬ್ಬರಾಯರು.

"ಏನು ಸಮಾಚಾರ. ಊರಿನಲ್ಲಿ ಎಲ್ಲರೂ ಆರೋಗ್ಯವಷ್ಟೆ?"

ಎಂದು ಕೇಳಿದರು. ನಾಗೇಂದ್ರ ತನ್ನ ಉದ್ವೇಗಕ್ಕೆ ಕಡಿವಾಣ ಹಾಕಿ

"ಎಲ್ಲರೂ ಆರೋಗ್ಯವಾಗಿದ್ದಾರೆ. ಅಂಜನಪ್ಪನವರು ಕೂಡಲೆ ಹೊರಟು ಬರುವಂತೆ ಬರೆದಿದ್ದಾರೆ. ಮಿಲ್ ಕೂಲಿಗಳಲ್ಲಿ ಏನೋ ಗಲಾಟೆಯಾಗಿದೆಯಂತೆ!"

ಎಂದು ಉತ್ತರಿಸಿ ಪಾರಾದ.

ಕಾಗದವನ್ನು ಪುನಃ ಸಾವಕಾಶವಾಗಿ ಓದುವವರೆಗೆ ನಾಗೇಂದ್ರನಿಗೆ ಸಮಾಧಾನವಿಲ್ಲ. ತನ್ನ ರೂಮು ಸೇರಿ ಕಾಗದವನ್ನು ಲಕೋಟೆಯಿಂದ ಹೊರತೆಗೆದು ಓದಿಕೊಂಡ.

'ಪ್ರಿಯ ರಮಣ,

ನನ್ನ ಮೇಲೆ ಏಕೆ ಇಷ್ಟು ನಿರ್ದಯ, ಔದಾಸೀನ್ಯ. ನಿಮ್ಮನ್ನು ಬಿಟ್ಟು ನಾನು ಅರಗಳಿಗೆ ಬದುಕಿರಬಲ್ಲೆನೇ? ನೀವು ಹೋಗಿ ಹನ್ನೆರಡು ದಿವಸಗಳಾದುವು. ಒಂದೆರಡು ದಿವಸಗಳಲ್ಲಿ ಹಿಂದಿರುಗುತ್ತೇವೆಂದು ಹೇಳಿದಿರಿ. ನನ್ನನ್ನು ಬಿಟ್ಟು ಇಷ್ಟುದಿನ ಇರಲು ನಿಮ್ಮ ಮನಸ್ಸಾದರೂ ಹೇಗೆ ಒಪ್ಪುತ್ತದೆ.

ಈ ಸಾರೆ ನೀವು ಊರಿಗೆ ಹಿಂದಿರುಗಿದ ಮೇಲೆ ನಾನು ಬಹಳ ಮಾತನಾಡಬೇಕಾದದ್ದಿದೆ. ದಿನವೆಲ್ಲಾ ಕಾದುಕಾದು, ಮಧ್ಯಾನ್ಹವೋ ರಾತ್ರಿಯೋ ಸ್ವಲ್ಪಹೊತ್ತು ನಿಮ್ಮೊಂದಿಗಿರುವುದು ನನಗೆ ಸಾಧ್ಯವಿಲ್ಲ. ನಾವು ಜತೆಯಲ್ಲಿ ಕೆಲವು ಗಂಟೆಗಳನ್ನಾದರೂ ಕಳೆಯಬೇಡವೇ? ರಾತ್ರಿ ನಾವು ಜತೆಯಲ್ಲಿದ್ದರೂ ಮನಸ್ಸಿಗೆ ತೃಪ್ತಿಯಿಲ್ಲ. ಮುಖನೋಡುವುದು ಕೂಡ ಸಾಧ್ಯವಿಲ್ಲ. ಮಾತನಾಡುವ ಹಾಗಿಲ್ಲ. ಇಬ್ಬರನ್ನೂ ಭಯ ಆವರಿಸುತ್ತದೆ. ಹೀಗೆ ಎಷ್ಟು ದಿನ ಕಳೆಯಲು ಸಾಧ್ಯ?

ಇನ್ನು ನಾಲ್ಕೈದು ತಿಂಗಳಿಗೆ ಸುಲೋಚನಾ ಇಲ್ಲಿಗೆ ಬರುತ್ತಾಳೆ. ಅವಳು ಬಂದ ಮೇಲೆ ನಾವು ಒಬ್ಬರನ್ನೊಬ್ಬರು ಕಾಣುವುದು ದುಸ್ಸಾಧ್ಯವಾಗುತ್ತದೆ. ನನ್ನ ಗತಿಯೇನು? ಒಂದೇ ಮನೆಯಲ್ಲಿದ್ದುಕೊಂಡು ನಿಮ್ಮನ್ನು ನೋಡದೆ ಹೇಗಿರಲಿ?

ನೀವು ಗಂಡಸರು. ಎಲ್ಲವನ್ನೂ ಮರೆಯಬಲ್ಲಿರಿ. ನಾನು ಪಾಪಿ ಹೆಣ್ಣು ಜನ್ಮ ಹೊತ್ತಿದ್ದೇನೆ. ನನ್ನ ಸರ್ವಸ್ವವನ್ನೂ ನಿಮ್ಮ ಪಾದಾರವಿಂದಗಳಿಗೆ ಅರ್ಪಿಸಿದ್ದೇನೆ. ನೀವಲ್ಲದೆ ಇನ್ನು ಯಾರು ನನ್ನನ್ನು ರಕ್ಷಿಸಬೇಕು,

ಹೃದಯೇಶ್ವರ, ನಾಚಿಕೆಬಿಟ್ಟು ಇಷ್ಟು ಸ್ಪಷ್ಟವಾಗಿ ಬರೆದೆನೆಂದು ಕೋಪಮಾಡಿಕೊಳ್ಳುವಿರಾ? ಬೇಡಿ, ನಿಮ್ಮ ಪಾದಗಳ ಮೇಲೆ ಬಿದ್ದು ಬೇಡಿಕೊಳ್ಳುತ್ತೇನೆ. ನನ್ನ ಮೇಲೆ ಕೋಪ ಮಾಡಿಕೊಂಡು ನನ್ನ ಕೈಬಿಡಬೇಡಿ.

ಊರುಬಿಟ್ಟು ಹೋದಮೇಲೆ ನೀವು ಕಾಗದವನ್ನಾದರೂ ಬರೆದು ನನ್ನನ್ನು ಸಂತೈಸುವರೆಂದಿದ್ದೆ. ನಿಮಗೆ ಈ ದೀನಳ ಮೇಲೆ ಅಷ್ಟೂ ದಯೆ ಬಾರದೆ ಹೋಯಿತು. ಬೇಗಬನ್ನಿ-ನಿಮ್ಮನ್ನಪ್ಪಿಕೊಳ್ಳಲು ನನ್ನ ಹೃದಯ ಕಾತರಿಸುತ್ತಿದೆ.

ಇಂತು ನಿಮ್ಮ ಚರಣದಾಸಿ-ನಾಯಕಿ'

ಕಾಗದವನ್ನೋದುತ್ತ ಓದುತ್ತ ನಾಗೇಂದ್ರ ಮೈಯೆಲ್ಲಿ ಉರಿಯೆದ್ದಿತು.

'ಅಯ್ಯೋ ಬೆಂಕಿಯು ಕೂಡ ಸರಸಕ್ಕೆ ಹೊರಟಿನಲ್ಲಾ. ಈ ಕುತ್ತಿನಿಂದ ನಾನು ಪಾರಾಗುವ ಬಗೆ ಹೇಗೆ? ಯಾರಲ್ಲಿ ಈ ದುಃಖ ತೋಡಿಕೊಳ್ಳಲಿ.

'ನಡೆದುದೆಲ್ಲವನ್ನೂ ಸ್ಪಷ್ಟವಾಗಿ ಸುಲೋಚನೆಗೆ ವಿವರಿಸಿ ಅವಳ ಕ್ಷಮೆ ಬೇಡಲೇ? ಅವಳು ಕ್ಷಮಿಸಬಲ್ಲಳು-ಅಮೃತಮಯವಾದ ಅವಳ ಹೃದಯ ನನ್ನ ಶತಾಪರಾಧಗಳನ್ನು ಮನ್ನಿಸಬಲ್ಲುದು. ಆದರೆ ಅವಳ ಹೃದಯಕ್ಕಾಗುವ ನೋವನ್ನು ನಾನು ಪರಿಹರಿಸಬಲ್ಲೆನೇ? ನಾನು ಮಾಡಿರುವ ಅತ್ಯಾಚಾರಕ್ಕೆ ಯಾವ ಸಮರ್ಥನೆ ಕೊಡಲಿ?

'ತಂದೆಗೆ ಹೇಗೆ ಈ ಹಾಳುಮುಖ ತೋರಿಸಲಿ. ನನಗೆ ಅಮೃತವನ್ನೆರೆದ ತಂದೆಗೆ ನಾನೇ ವಿಷಕುಡಿಸುತ್ತಿರುವೆನಲ್ಲಾ

'ಈ ಭಂಡಬಾಳು ಸಾಗಿಸುವುದಕ್ಕಿಂತ ಪ್ರಾಣನೀಗಿಕೊಳ್ಳುವುದು ಲೇಸು—ಆದರೆ ಸುಲೋಚನ, ಸಿಂಹಾದ್ರಿ ನನ್ನ ಪಾಪದ ಹೊರೆಯನ್ನು ಹೊರಬೇಕೇ?'

ತನ್ನ ದುಃಖವನ್ನು ಅಡಗಿಸಿಕೊಂಡು ನಾಗೇಂದ್ರ ಸುಲೋಚನೆಯ ರೂಮಿಗೆ ಹೋದ.

"ಊರಿನಿಂದ ಕಾಗದ ಬಂದಿತಂತೆ. ಮಿಲ್ಲಿನಲ್ಲಿ ಏನು ಗಲಾಟೆ?"

"ಒಬ್ಬ ಅಯೋಗ್ಯನನ್ನು ಕೆಲಸದಿಂದ ತೆಗೆದುಹಾಕಿದೆವು. ಲೇಬರ್ ಯೂನಿಯನ್ನಿನವರು ಅವನ ಪಕ್ಷಕಟ್ಟಿ ಸ್ಟ್ರೈಕ್ ಮಾಡುವ ಬೆದರಿಕೆ ಹಾಕಿದ್ದಾರೆ."

"ನೀವು ಊರಿಗೆ ಹೊರಡಲೇ ಬೇಕಾಯಿತು."

ನಾಗೇಂದ್ರ ಉತ್ತರಕೊಡದೆ ಕತ್ತು ತಗ್ಗಿಸಿದ.

"ಹೋಗಿ ಬನ್ನಿ. ಬೇಗನೆ ಬಿಡುವು ಮಾಡಿಕೊಂಡು ಬರುವಿರಷ್ಟೆ. ಇನ್ನು ಐದು ತಿಂಗಳು ನಿಮ್ಮನ್ನು ನೋಡದೆ ನಾನಿರಲಾರೆ."

ನಾಗೇಂದ್ರ ಹೆಂಡತಿಯನ್ನಪ್ಪಿ ಅವಳ ಭುಜದಮೇಲೆ ತಲೆಯಿಟ್ಟು ಎಳೆಯ ಮಕ್ಕಳಂತೆ ಕಂಬನಿಗರೆದ.

೪೩

ನಾಗೇಂದ್ರ ಹೊಳೇನರಸೀಪುರಕ್ಕೆ ಹೋಗಿದ್ದಾಗ ಮಹಾಬಲರಾಯ ಅಂಗಡಿ, ಮಿಲ್ಲಿನ ಕೆಲಸ ನೋಡಿಕೊಂಡು ಮಧ್ಯೆ ಒಂದು ದಿನ ಪುರಸತ್ತು ಮಾಡಿಕೊಂಡು ಚೇಳೂರಿಗೆ ಹೋಗಿಬಂದ. ಪಿತ್ರಾರ್ಜಿತ ಹೊಲ ಗದ್ದೆಯನ್ನು ನೋಡಿಕೊಂಡು ಶಾನುಭೋಗ ವೆಂಕಟರಾಮಪ್ಪನವರನ್ನು ಕರೆಸಿ

"ಇನ್ನು ಒಂದೆರಡು ವರ್ಷದಲ್ಲಿ ನಾನು ಹಳ್ಳಿಗೇ ಬಂದುಬಿಡುತ್ತೇನೆ ಶಾನುಭೋಗರೇ. ಪೇಟೆವಾಸ ನನಗೂ ಸಾಕಾಗಿದೆ. ಮಕ್ಕಳೂ ದೊಡ್ಡವರಾಗಿದ್ದಾರೆ. ಅಲ್ಲಿನ ಕೆಲಸಕಾರ್ಯಗಳನ್ನು ಅವರು ನೋಡಿಕೊಳ್ಳುತ್ತಾರೆ."

"ಅವಶ್ಯಕವಾಗಿ ದಯಮಾಡಿಸಬೇಕು ಸ್ವಾಮಿ. ತಮ್ಮ ಸೇವೆಗೆ ನಾನು ಸಿದ್ಧನಾಗಿದ್ದೇನೆ."

"ನನಗೆ ನಾಲ್ಕುಜನ ಗಂಡುಮಕ್ಕಳಿದ್ದಾರೆ ವೆಂಕಟರಾಮಪ್ಪನವರೇ."

"ಭಗವಂತನ ಆಶೀರ್ವಾದ."

"ನೋಡಿ—ಈಗಿರುವ ಜಮೀನು ಒಬ್ಬನಿಗೆ ಸಾಕು, ನಾಲ್ವರಿಗೆ ಸಾಲುವುದಿಲ್ಲ. ಉಳಿದ ಮೂವರಿಗೂ ಇಷ್ಟೇ ಜಮೀನು ಮಾಡಿಕೊಡಬೇಕು. ಮನೆಗಾಗುವಷ್ಟು ಭತ್ತ, ರಾಗಿ, ಎಲ್ಲರಿಗೂ ಬರುವಂತಾಗಬೇಕು. ಕಾಲ ಬಹಳ ಸೂಕ್ಷ್ಮವಾಗುತ್ತಿದೆ. ನಾಳೆ ಮಕ್ಕಳು ಅಕ್ಕಿಗಾಗಿ ಪಡಿಪಾಟಲು ಪಡಬಾರದು."

"ನನ್ನಿಂದೇನಾಗಬೇಕು ಅಪ್ಪಣೆಯಾಗಬೇಕು."

"ಸುತ್ತಮುತ್ತ ಜಮೀನು ಮಾರಾಟಕ್ಕಿದೆಯೇ ವಿಚಾರಮಾಡಿ."

"ಜಮೀನು ಬೇಕಾದಷ್ಟು ಸಿಕ್ಕುತ್ತದೆ ಸ್ವಾಮಿ."

"ನೀರಾವರಿ ಹೇಗಿದೆ"

"ನಮ್ಮೂರಿನಲ್ಲಿ ಅದಕ್ಕೇನೂ ಕೊರತೆಯಿಲ್ಲ. ಆದರೆ ರೈತರು ಸಿಕ್ಕುವುದೇ ಕಷ್ಟ. ಈಗ ರೈತರಿಗೆ ಭೂಸಾಗುವಳಿ ಬೇಕಾಗಿಲ್ಲ. ಅವರಿಗೆ ಕೈತುಂಬ ಹಣಬೇಕು. ಕೆಲವರು ರಸ್ತೆ ಕಾಮಗಾರೀಗೆ ನಿಂತಿದ್ದಾರೆ. ಕೆಲವು ಮನೆಗಳವರು ಹಳ್ಳಿಬಿಟ್ಟು ಪಟ್ಟಣ ಸೇರಿ ಮಿಲ್ ಕೆಲಸಕ್ಕೆ ಸೇರಿದ್ದಾರೆ."

"ನಾಗಮಂಗಲದಿಂದ ಹತ್ತು ಸಂಸಾರ ತಂದರೆ ಆಯಿತು. ಜಮೀನಿನ ಮೇಲೆ ದೃಷ್ಟಿಯಿಡಿ."

"ಒಟ್ಟು ತಮಗೆಷ್ಟು ಬೇಕಾಗಬಹುದು.''

"ಇನ್ನು ಮೂವತ್ತು ಎಕರೆಯಾದರೂ ಬೇಕು.''

"ನಾನು ವಿಚಾರಮಾಡಿ ಅರಿಕೆ ಮಾಡುತ್ತೇನೆ."

"ನಾಲ್ಕು ಕಾಸು ಹೆಚ್ಚಾಗದರೂ ಚಿಂತೆಯಿಲ್ಲ-ಯೋಚನೆ ಮಾಡಬೇಡಿ''

ಎಂದು ಮಹಾಬಲರಾಯ ಹೇಳಿದ.

ನಾಗೇಂದ್ರ ಹಿಂದಿರುಗಿದ ಮೇಲೆ ತನ್ನ ವಿಚಾರವನ್ನು ಅವನಿಗೆ ತಿಳಿಸಿ,

"ನೀನು ಯಾವಾಗಲಾದರೂ ಪುರಸತ್ತುಮಾಡಿಕೊಂಡು ಚೇಳೂರಿಗೆ ಹೋಗಿ ಅಲ್ಲಿ ಎಲ್ಲರ ಪರಿಚಯ ಮಾಡಿಕೊಂಡು, ಹೊಲಗದ್ದೆ ನೋಡಿಕೊಂಡು ಬಾಪ್ಪ. ಎಂದಿದ್ದರೂ ಭೂಮಿತಾಯಿಯೇ ಶಾಶ್ವತ-ಉಳಿದದ್ದೆಲ್ಲಾ ನೀರಿನ ಮೇಲಣ ಗುಳ್ಳೆಗಳು"

"ಹಾಗೇ ಆಗಲಣ್ಣ. ಮುಂದಿನವಾರ ಹೋಗಿಬರುತ್ತೇನೆ.''

ಎಂದು ನಾಗೇಂದ್ರ ಒಪ್ಪಿಕೊಂಡ.

ಊರಿಗೆ ಬಂದ ದಿನ ನಾಗೇಂದ್ರನಿಗೆಸ್ವಲ್ಪವೂ ಪುರಸತ್ತಿಲ್ಲ. ಮಧ್ಯಾಹ್ನ ಬಂದು ಊಟಮಾಡಿದವನೇ ಹೊರಡಲು ಸಿದ್ಧನಾದ. ಅವನು ಷೂಲೇಸ್ ಬಿಗಿಯುತ್ತಿರುವುದನ್ನು ಕಂಡು ರಂಗನಾಯಕಿ ಕಿಡಿಕಿಡಿಯಾದಳು.

"ಹೊರಟುಬಿಟ್ಟರೇನೋ ?''

"ಹೊರಡಲೇ ಬೇಕಾಗಿದೆ ನಾಯಕಿ.''

"ನಿಮಗೇನು ? ನಾನು ಇದ್ದರೂ ಒಂದೇ ಸತ್ತರೂ ಒಂದೇ !''

"ಸುಮ್ಮನೆ ಚುಚ್ಚುವ ಮಾತಾಡಿ ಏನು ಸಾರ್ಥಕ ನಾಯಕಿ. ಮಿಲ್ಲಿಗೆ ಬೆಲ್ಟಿಂಗ್ ಬೇಕಾಗಿದೆ. ಈಗ ನಾನು ಕಂಟ್ರೋನ್ಮೆಂಟಿಗೆ ಹೋಗಿ ಅದರ ಶೋಧಮಾಡಬೇಕಾಗಿದೆ."

ರಂಗನಾಯಕಿಗೆ ತಟ್ಟನೆ ಒಂದು ಯೋಚನೆ ಹೊಳೆಯಿತು.

"ಕಂಟ್ರೋನ್ಮೆಂಟಿನ ಕೆಲಸ ಎಷ್ಟು ಹೊತ್ತಿಗೆ ಮುಗಿಯುತ್ತದೆ."

"ಮೂರು ಗಂಟೆಗೆ ಮುಗಿಯಬಹುದು."

"ನಾನು ನಾಲ್ಕು ಗಂಟೆಗೆ ಲಾಲ್‌ಬಾಗಿನ ಬಳಿ ಬರುತ್ತೇನೆ ನೀವು

ಕಾರು ತೆಗೆದುಕೊಂಡು ಅಲ್ಲಿಗೇ ಬನ್ನಿ. ಎಲ್ಲಿಯಾದರೂ ಒಂದೆರಡು ಗಂಟೆ ಹೋಗಿ ಬರೋಣ.''

ರಂಗನಾಯಕಿಯ ಗೊತ್ತುಪಾಡಿಗೆ ತನ್ನ ಕೆಲಸಕಾರ್ಯ ಹೇಗೆ ಹೊಂದಿಸುವುದೆಂದು ನಾಗೇಂದ್ರ ಯೋಚಿಸಿ

"ನಾಲ್ಕು ಗಂಟೆಗೆ ಬೇಡ—ಐದು ಗಂಟೆಗೆ ಸರಿಯಾಗಿ ಬಾ."

"ನಾಲ್ಕು ಗಂಟೆಗೇಕೆ ಬೇಡ?"

''ನೋಡು—ಮಿಲ್ಲಿಗೆ ಹೋಗಿ ಅನಂತರ ಕಂಟೋನ್ಮೆಂಟಿಗೆ ಹೋಗುವುದೆಂದು ನಿಶ್ಚಯಿಸಿಕೊಂಡಿದ್ದೆ. ಈಗ ನೇರವಾಗಿ ಕಂಟೋನ್ಮೆಂಟಿಗೆ ಹೋಗಿ ಬೆಲ್ಟಿಂಗ್ ಕೆಲಸ ಮುಗಿಸಿಕೊಂಡು ಮಿಲ್ಲಿಗೆ ಹೋಗುತ್ತೇನೆ. ಅಲ್ಲಿ ಐದರವರೆಗಿದ್ದು ಬೆಲ್ಟಿಂಗ್ ಹುಡುಕುವ ನೆಪಮಾಡಿಕೊಂಡು ಹೊರಬೀಳುತ್ತೇನೆ."

''ಆಗಲೇ ಹೋಗಿರಲಿಲ್ಲವೇ ಎಂದು ಅಂಜನಪ್ಪ ಕೇಳಿದರೆ?''

''ಹೋಗಲಿಲ್ಲ—ಈಗ ಹೋಗುತ್ತೇನೆ ಎಂದು ಹೇಳುತ್ತೇನೆ. ನೀನು ಮನೆಯಲ್ಲಿ ಏನು ಹೇಳಿಬರುತ್ತೀ?''

''ಅವರು ಎಂಟು ಗಂಟೆಗೆ ಮುಂಚೆ ಮನೆಗೆ ಬರುವುದಿಲ್ಲ. ಅಂಬುಜಮ್ಮನವರ ಮನೆಗೆ ಹೋಗಿಬರುತ್ತೇನೆಂದು ಕಾಡಮ್ಮನವರಿಗೆ ಹೇಳಿದರಾಯಿತು, ನೀವು ಸರಿಯಾಗಿ ಐದಕ್ಕೆ ಬರುವಿರಷ್ಟೇ—ಲಾಲ್‌ಬಾಗಿನ ಮುಂದೆ ನನ್ನ ಕಾಯಿಸಬೇಡಿ—ಹೋಗಿಬರುವವರೆಲ್ಲಾ ನನ್ನನ್ನೇ ದಿಟ್ಟಿಸಿನೋಡುತ್ತಾರೆ.''

''ನೋಡಬೇಕಾದ್ದೇ ತಾನೇ—ಸರ್ವಜ್ಞ ಹೇಳಿಲ್ಲವೇ - ಹೊನ್ನನ್ನು ಹೆಣ್ಣನ್ನು, ಹಣ್ಣಾದ ಮರಗಳನ್ನು, ಕಣ್ಣಿಲಿ ಕಂಡು ಮನದಲಿ ಬಯಸದಿಹ ಅಣ್ಣಗಳಾರು?''

''ಹೋಗಿಯಂಪ್ರೆ. ಆ ಅರ್ಥದಲ್ಲಿಯಲ್ಲ ನಾನು ಹೇಳಿದ್ದು.''

''ಯಾವ ಅರ್ಥವಾದರೂ ಚಿಂತೆಯಿಲ್ಲ. ನಾಯಕಿ ಗೆಲುವಾದಳಷ್ಟೇ?''

''ಸರಿಯಾಗಿ ನೀವೇ ನೋಡಿ ಹೇಳಿ''

ಎಂದು ತನ್ನ ಮುಖವನ್ನು ನಾಗೇಂದ್ರನ ಮುಖದ ಬಳಿ ಹಿಡಿದಳು. ಅವಳ ಮೃದು ಕಪೋಲಗಳನ್ನು ನಾಗೇಂದ್ರ ಎರಡು ಕೈಗಳಲ್ಲಿಯೂ ಹಿಡಿದು ಮತ್ತೆ ಮತ್ತೆ ಮುದ್ದಿಟ್ಟ.

ನಾಗೇಂದ್ರ ಹೊರಟ ಕ್ಷಣದಿಂದ ರಂಗನಾಯಕಿಗೆ ಅಲಂಕಾರದ

ಯೋಚನೆ ಹತ್ತಿತು. ತನ್ನ ವಾರ್ಡ್ರೋಬ್ ತೆಗೆದು ಆರೇಳು ಸೀರೆಗಳನ್ನು ಹೊರಗೆಳೆದಳು.

'ರಿಬ್ಬನ್ ಬಾರ್ಡರ್ ಧರ್ಮಾವರದ ಸೀರೆ—ಬಣ್ಣ ಚೆನ್ನಾಗಿಲ್ಲ ; ಜರತಾರಿ ಬೆಂಗಳೂರು ಸೀರೆ—ತುಂಬಾ ಡಬ್ಬಾಯಿತು ; ಬೆಂಗಾಲ್ ಸಿಲ್ಕ್ ಸೀರೆ—ತೀರಾ ಸಾಮಾನ್ಯವಾಯಿತು ; ಕಾಸೀ ಪೀತಾಂಬರ—ಉಡಸಲಮ್ಮ ಇದ್ದ ಹಾಗಿರುತ್ತದೆ.'

ಏನು ಉಡಬೇಕೆಂಬುದೇ ರಂಗನಾಯಕಿಗೆ ದೊಡ್ಡ ಸಮಸ್ಯೆಯಾಗಿತ್ತು.

ಆ ದಿನದ ಏರ್ಪಾಟು ಅವಳ ಜೀವನದ ಮುಖ್ಯ ಘಟನೆಯಾಗಿತ್ತು. ಮಹಾಯೋಧ ರಣರಂಗಕ್ಕೆ ಹೊರಟಂತೆ ರಂಗನಾಯಕಿ ತನ್ನ ನಾಯಕನ ಸಂದರ್ಶನಕ್ಕೆ ಹೊರಟಿದ್ದಳು.

ಯೋಚನೆಮಾಡಿ ವಾರ್ಡ್ರೋಬಿನಿಂದ ಕೆಲವು ಜಾರ್ಜೆಟ್ ಸೀರೆಗಳನ್ನು ಹೊರಗೆಳೆದಳು. ಅವುಗಳಲ್ಲಿ ಕೆಲವನ್ನು ಹೆಗಲಮೇಲೆ ಹಾಕಿಕೊಂಡು ನೋಡಿ ತಿರಸ್ಕರಿಸಿ ಕೊನೆಗೆ ಪೀತವರ್ಣದ ಜಾರ್ಜೆಟ್ ಸೀರೆಯನ್ನಾರಿಸಿದಳು,

ಆ ಸೀರೆಗೆ ಸರಿಯಾದ ಕುಪ್ಪಸ ಹೊಂದಿಸುವುದು ಮತ್ತೊಂದು ಸಮಸ್ಯೆಯಾಯಿತು. ಹತ್ತಾರು ಕುಪ್ಪಸಗಳನ್ನೆಳೆದು, ಗೂರಾಡಿ ಕೊನೆಗೆ ಕಿತ್ತಳೆ ಬಣ್ಣದ ಸ್ಯಾಟಿನ್ ಕುಪ್ಪಸವೊಂದನ್ನಾರಿಸಿದಳು.

ತಲೆಬಿಚ್ಚಿ ತನ್ನ ನೀಳವಾದ ಕೂದಲಿಗೆ ಅಟ್ಕಿನ್‌ಸನ್ ತೈಲ ಲೇಪಿಸಿದಳು. ಮತ್ತೆ ಸಮಸ್ಯೆ ತಲೆದೋರಿತು. ಜಡೆ ಹೆಣೆದುಕೊಳ್ಳಲೇ ತುರುಬು ಕಟ್ಟಿಕೊಳ್ಳಲೇ ? ತುರುಬು ಕಟ್ಟಿಕೊಂಡರೆ ಮಾಟವಾಗಿ ಹೂ ಮುಡಿದುಕೊಳ್ಳಲು ಸಾಧ್ಯವಾಗುತ್ತದೆ. ನಾಗೇಂದ್ರನ ಅಭಿರುಚಿಯನ್ನು ಜ್ಞಾಪಿಸಿಕೊಂಡು 'ಅವರಿಗೆ ನನ್ನ ನೀಳವಾದ ಜಡೆಯಮೇಲೆ ಪ್ರೀತಿ'

ಎಂದು ಜಡೆ ಹೆಣೆದುಕೊಂಡಳು.

ಕೇಶಾಲಂಕರಣ ಮುಗಿಯಲು ಮುಖತೊಳೆದುಕೊಂಡು ಬಂದು ತೆಳುವಾಗಿ 'ಕಾಶ್ಮೀರಬೊಕೆ' ಪೌಡರ್ ಲೇಪಿಸಿಕೊಂಡು, ತುಟಿಗೆ ರೂಜ್ ಹಚ್ಚಿಕೊಂಡಳು. ಹಣೆಯ ಮಧ್ಯೆ ನಕ್ಷತ್ರಾಕಾರದಲ್ಲಿ ಬೊಟ್ಟಿಟ್ಟುಕೊಂಡಳು. ತಲೆಗೆ ಹೂ ಮುಡಿದುಕೊಂಡು, ಸಿಲ್ಕ್ ಅಂಡರ್‌ವೇರ್ ಧರಿಸಿ ಸೀರೆಯುಡು

ವುದಕ್ಕಾರಂಭಿಸಿದಳು. ಅಂಚುಗಳನ್ನು ಸರಿಯಾಗಿ ಕೂಡಿಸಿ, ಎಡಬಲಗಳಲ್ಲಿ ವ್ಯತ್ಯಾಸಬರದಂತೆ ಸೀರೆ ಧರಿಸಬೇಕಾದರೆ ಸಾಕಷ್ಟು ವೇಳೆ ಹಿಡಿಯಿತು. ನಿಲುಗನ್ನಡಿಯ ಮುಂದೆ ನಿಂತು ತನ್ನನ್ನೇ ನೋಡಿಕೊಂಡಳು. ಏಕೋ-ಸೀರೆ ಧರಿಸಿದ್ದು ಮನಸ್ಸಿಗೆ ತೃಪ್ತಿಯನ್ನು ಕೊಡಲಿಲ್ಲ. ಒಮ್ಮೆ ಉಟ್ಟುದರಿಂದ ಸೀರೆ ಸ್ವಲ್ಪ ನಲುಗಿ ಹೋಗಿತ್ತು. ಅದನ್ನು ತೆಗೆದು ಬಿಸುಟು ಎಣ್ಣೆಗೆಂಪು ಬಣ್ಣದ ಜಾರ್ಜೆಟ್ ಸೀರೆಯನ್ನು ಮೈಗೆ ಹೊಂದುಕೊಳ್ಳುವಂತೆ ಧರಿಸಿ ಮತ್ತೊಮ್ಮೆ ಕನ್ನಡಿಯಲ್ಲಿ ನೋಡಿಕೊಂಡಳು. ಪರವಾಗಿಲ್ಲ ಎಂದುಕೊಂಡು ಕೈಗೆ ಸಿಲ್ಕ್‌ಬಾಡಿ ಎತ್ತಿಕೊಂಡಳು. ತಾನು ಧರಿಸಿದ್ದ ಬಾಡಿ ಬಿಚ್ಚಿದೊಡನೆಯೇ ಸಹಜವಾಗಿಯೊಮ್ಮೆ ಕನ್ನಡಿಯಲ್ಲಿ ತನ್ನ ಮೈ ನೋಡಿಕೊಂಡು ಪೀನ ಪಯೋಧರಗಳನ್ನೊಮ್ಮೆ ಮೃದುವಾಗಿ ನೇವರಿಸಿದಳು. ಆಕಸ್ಮಿಕವಾಗಿ ಬಾಗಿಲುಕಡೆ ಅವಳ ಕುತ್ತಿಗೆ ತಿರುಗಿತು. 'ಇಲ್ಲ-ಯಾರೂ ಇಲ್ಲ' ಎಂದು ನಿಟ್ಟುಸಿರುಬಿಟ್ಟಳು. ಮುಡಿದಿದ್ದ ಹೂವಿಗೆ ಕೈ ಸೋಕದಂತೆ ಮೆಲ್ಲನೆ ಕುಪ್ಪಸಧರಿಸಿ, ಡ್ರಾಯರ್‌ನಲ್ಲಿದ್ದ 'ಈವನಿಂಗ್ ಇನ್ ಪ್ಯಾರಿ' ಸೆಂಟ್ ಬಾಟಲ್ ತೆಗೆದುಕೊಂಡು ಕುಪ್ಪುಸಕ್ಕೆ, ಸೀರೆಯ ಸೆರಗಿಗೆ ಸೆಂಟ್ ಸವರಿದಳು. ಮತ್ತೊಂದು ಡ್ರಾಯರ್‌ನಲ್ಲಿದ್ದ ಸಿಲ್ಕ್ ಕರವಸ್ತ್ರಗಳಲ್ಲಿ ಎರಡನ್ನಾರಿಸಿ ತೆಗೆದುಕೊಂಡು ಅವುಗಳಿಗೂ ಸೆಂಟ್ ಸವರಿದಳು.

ಅಲಂಕಾರ ಮುಗಿದಂತಾಗಲು ಕೈಗೆ ಪರ್ಸ್ ತೆಗೆದುಕೊಂಡು ಅದರಲ್ಲಿದ್ದ ಗಡಿಯಾರವನ್ನು ಕಟ್ಟಿಕೊಂಡಳು. ಗಂಟೆ ನೋಡಿದಾಗ ನಾಲ್ಕುವರೆಯಾಗಿತ್ತು. 'ಹೊತ್ತಾಗಿ ಹೋಯಿತು' ಎಂದು ಕಾಲಿಗೆ ಚಪ್ಪಲಿ ಹಾಕಿಕೊಂಡು ಹೊರಗೆ ಬಂದು

"ಕಾಡಮ್ಮನವರೇ"

ಎಂದು ಕೂಗಿದಳು. ಕಾಡಮ್ಮನವರು ಹೊರಗೆ ಬರಲು

"ಮಕ್ಕಳು ಸ್ಕೂಲಿನಿಂದ ಬರುತ್ತಲೇ ತಿಂಡಿ ಕಾಫಿಕೊಡಿ"

"ಆಗಲಿ."

"ನಾನು ಅಂಬುಜಮ್ಮನವರ ಮನೆಗೆ ಹೋಗಿ ಬರುತ್ತೇನೆ. ರಾತ್ರೀಗೆ ತರಕಾರಿ ಇದೆ ತಾನೆ?"

"ಸ್ವಲ್ಪ ಇದೆ."

ಕಾಡಮ್ಮನವರ ಕೈಗೆ ಒಂದು ರೂಪಾಯಿ ಹಾಕಿ

"ತೆಗೆದುಕೊಳ್ಳಿ—ಏನು ಬೇಕೋ ತರಿಸಿಕೊಳ್ಳಿ."

"ಅಡಿಗೆ ಏನು ಮಾಡಲಿ ?"

"ಏನು ತೋರತ್ತೋ ಮಾಡಿ."

ಎಂದು ಹೇಳಿ ಮನೆಬಿಟ್ಟು ಹೊರಟಳು.

ರಂಗನಾಯಕಿ ಲಾಲ್‌ಬಾಗ್ ಸಮೀಪಿಸುತ್ತಿರುವಂತೆ ಎದುರು ಕಡೆಯಿಂದ ನಾಗೇಂದ್ರನ ಕಾರು ಬರುವುದು ಕಂಡುಬಂತು. 'ಸದ್ಯ ಬಂದರಲ್ಲಾ' ಎಂದು ರಂಗನಾಯಕಿ ತೃಪ್ತಿಪಟ್ಟುಕೊಂಡಳು.

ನಾಗೇಂದ್ರ ಅವಳ ಸಮೀಪಕ್ಕೆ ಕಾರು ತಂದು ನಿಲ್ಲಿಸಿ ಹಿಂದಿನ ಸೀಟಿನ ಬಾಗಿಲು ತೆಗೆದ. ರಂಗನಾಯಕಿ ಒಳಗೆ ಕುಳಿತು ಬಾಗಿಲು ಹಾಕಿಕೊಳ್ಳಲು 'ಆಕ್ಸಿಲೇಟರ್' ಮೇಲೆ ಕಾಲೊತ್ತಿದ. ಎರಡು ನಿಮಿಷಗಳೊಳಗಾಗಿ ಕಾರು ಊರುದಾಟಿ ಕಾನಕಾನಹಳ್ಳಿ ರೋಡ್ ಉಕ್ಕಡದ ಬಳಿ ಬಂದಿತು. ಉಕ್ಕಡದಿಂದಾಚೆ ಸ್ವಲ್ಪದೂರ ಹೋಗಿ ಕಾರು ನಿಲ್ಲಿಸಿದ. ರಂಗನಾಯಕಿ ತನ್ನ ಸೀಟು ಬಿಟ್ಟುಬಂದು ನಾಗೇಂದ್ರನ ಪಕ್ಕದಲ್ಲಿ ಕುಳಿತಳು.

ಕಾರು ಮುಂದಕ್ಕೆ ಹೊರಟಿತು. ರಂಗನಾಯಕಿ ತನ್ನ ಬಲ ತೋಳಿನಿಂದ ನಾಗೇಂದ್ರನನ್ನಪ್ಪಿದಳು.

"ಕಂಟೋನ್ಮೆಂಟ್ ಕೆಲಸ ಮುಗಿಯಿತೇ ?"

"ಎಲ್ಲಿ ಮುಗಿಯುತ್ತೆ, ನಾಳೆ ಹೋಗಬೇಕು."

"ನೀವು ಬರುವಿರೋ ಇಲ್ಲವೋ ಎಂದು ಅಧೀರಳಾಗಿದ್ದೆ."

"ನೀನು ಲಾಲ್‌ಬಾಗ್ ಬಳಿ ನನಗೆ ಕಾಯುವಂತೆ ಮಾಡುವೆನೆ ?

"ಈಗೆಲ್ಲಿಗೆ ಹೋಗುವುದು."

"ನೀನೇ ಹೇಳು."

"ನಿಮ್ಮ ಬೆಂಗಳೂರು ನಾನೇನು ಬಲ್ಲೆ."

"ಹೌದು ಹೌದು ಮರೆತಿದ್ದೆ. ನೀವು ಮುಂಬಯಿ ಷಹರಿನವರು."

ಓಡುತ್ತಿದ್ದ ಕಾರಿನವೇಗ ಇದ್ದಕ್ಕಿದ್ದಂತೆ ಕಡಿಮೆಯಾಯಿತು. ರಂಗನಾಯಕಿ ತುಸ ಗಾಬರಿಯಾಗಿ,

"ಸ್ಪೀಡ್ ಏಕೆ ಕಡಿಮೆಯಾಯಿತು ?" ಎಂದು ಕೇಳಿದಳು.

"ನಿನಗೆ ಕಾಫಿಕೂಡ ಕೊಡಿಸಲಿಲ್ಲ. ಕಾಫಿಬಾರಿಗೆ ಹೋಗಿಬಿಟ್ಟು ಹೋಗೋಣ."

"ಕಾಫಿಯೂ ಬೇಡ ಏನೂ ಬೇಡ ನಡೆಯಿರಿ."

ನಾಗೇಂದ್ರ ಕಾರಿನ ವೇಗ ಹೆಚ್ಚಿಸಿ ಮತ್ತೆ ಓಡಿಸಿದ.

ಎಂಟುಮೈಲಿ ದಾಟಿದಮೇಲೆ ರಸ್ತೆಯ ಮಗ್ಗುಲಲ್ಲಿದ್ದ ಒಂದು ತೋಟದಲ್ಲಿ ಕೆಲವು ತೆಂಗಿನಮರಗಳು ಕಾಣಿಸಿದವು. ನಾಗೇಂದ್ರ ಕಾರು ನಿಲ್ಲಿಸಿ ಹಾರ್ನ್ ಮಾಡಿದ. ನಾಲ್ಕೈದುಸಲ ಹಾರ್ನ್ ಹೊಡೆದಮೇಲೆ ತೋಟದಿಂದ ಒಬ್ಬ ಆಳು ಹೊರಬಿದ್ದು

"ಯಾರು ಬೇಕಾಗಿತ್ರಾ ಬುದ್ಧಿ" ಎಂದ.

"ನೀನೇ ಬೇಕಾಗಿತ್ತಪ್ಪ."

"ಏನ್ರಾ ಬುದ್ಧಿ."

"ಎರಡು ಎಳನೀರು ಕೊಡುತ್ತೀಯೇನಯ್ಯಾ."

"ದಣ್ಯೋರ ಅಪ್ಣೆ ಆಗ್ದೆ ಎಂಗೆ ಕೊಡ್ಲಿ ಬುದ್ಧಿ."

"ಎಲ್ಲಿದ್ದಾರೆ ನಿನ್ನ ದಣ್ಯೋರು ?"

"ಬೆಂಗಳೂರಿನಲ್ಲಿ."

"ಈಗ ನಾವು ಅಲ್ಲಿಗೆ ಹೋಗಿ ಅವರ ಅಪ್ಪಣೆ ಪಡೆದು ಬರಬೇಕೇನು ?"

ಎಂದು ಹೇಳಿ ಕಿಸೆಯಿಂದ ಎರಡು ರೂಪಾಯಿ ನೋಟೊಂದನ್ನು ತೆಗೆದು ಆಳಿನ ಕೈಗಿತ್ತ.

ಆಳು ಕೈಮುಗಿದು

"ಒಂದು ನಿಮಿಸದಾಗ ಕೆತ್ತಿಕೊಂಡು ಬತ್ತೀನಿ ಬುದ್ಧಿ"

ಎಂದು ಹೇಳಿ ತೋಟದ ಒಳಗೆ ಹೋದ.

"ಇದು ಯಾಕೆ ಬೇಕಾಗಿತ್ತು ? ಎಂದು ರಂಗನಾಯಕಿ ಕೇಳಿದಳು."

"ಕಾಫಿಯೂ ಇಲ್ಲ—ಎಳನೀರಾದರೂ ನೀನು ಕುಡಿಯಬೇಡವೇ ?"

"ನಿಮ್ಮ ಆಳು ಎಳನೀರು ತರುವುದು ನೆಚ್ಚಿಕೆಯೇನು ?"

"ಏಕೆ ?"

"ನೋಟು ಜೇಬಿಗೆ ಹಾಕಿಕೊಂಡು ಇನ್ನೊಂದು ಮಾರ್ಗದಲ್ಲಿ ಅವನು ಮನೆಗೆ ಹೋದರೆ!"

"ಇನ್ನೂ ರೈತರು ಅಷ್ಟು ಕುಲಗೆಟ್ಟಿಲ್ಲ ನಾಯಕಿ. ಹಾ! ರೈತರು ಎನ್ನುತ್ತಲೇ ಜ್ಞಾಪಕಕ್ಕೆ ಬಂತು. ಮುಂದಿನವಾರ ನಾನು ಜೇಳೂರಿಗೆ ಹೋಗಿ ಬರಬೇಕಾಗಿದೆ."

"ಜಮೀನು ನೋಡಿಕೊಂಡು ಬರುವುದಕ್ಕೆ."

"ನಿನಗಾಗಲೇ ಹೊತ್ತಾಗಿಬಿಟ್ಟಿದೆ. ಅಣ್ಣ ಇನ್ನು ಒಂದೆರಡು ವರ್ಷ ದಲ್ಲಿ ಹಳ್ಳಿಗೆ ಹೋಗಿಬಿಡುತ್ತಾರಂತೆ—ಸಂಸಾರಸಮೇತ."

"ಸಮೇತ ಸುಳ್ಳು—ಅವರೊಬ್ಬರೇ ಹೋಗಬಹುದು."

"ನೀನು?"

"ನಾನು! ನನ್ನ ಸ್ಥಳ ಎಲ್ಲಿ ಹೇಳಿ?"

ಆಳು ನಾಲ್ಕು ಎಳನೀರು ಬುರುಡೆಗಳನ್ನು ಹೊತ್ತು ತಂದ. ಒಂದನ್ನು ಕೆತ್ತಿ ನಾಗೇಂದ್ರನ ಕೈಗೆ ಕೊಡುತ್ತಲೂ ಅವನು ಅದನ್ನು ರಂಗನಾಯಕಿಗೆ ನೀಡಿದ.

"ನನಗೆ ಬೇಡಿ. ಸೀರೆ ಮೇಲೆಲ್ಲಾ ಬಿದ್ದು ಕರೆಯಾಗುತ್ತದೆ."

"ಕುಡೀರವ್ವಾ—ಬೊ ಸಂದಾಕದೆ, ಗಂಗಾಪಾಣಿ"

ಎಂದು ಆಳು ಉಪಚಾರ ಹೇಳಿದ. ನಾಗೇಂದ್ರನ ಒಂದು ಕೈಯಲ್ಲಿ ಕಿಸೆಯಲ್ಲಿದ್ದ ಕರವಸ್ತ್ರಗಳನ್ನು ತೆಗೆದು

"ಇದನ್ನು ಎದೆಯ ಮೇಲೆ ಹಾಕಿಕೋ."

ಅವನು ಹೇಳಿದಂತೆ ಎದೆಯಮೇಲೆ ಕರವಸ್ತ್ರ ಧರಿಸಿ ರಂಗನಾಯಕಿ ಎಳನೀರು ಕುಡಿದಳು. ನಾಗೇಂದ್ರನೂ ಒಂದು ಕುಡಿದ. ಆಳು ಇನ್ನೊಂದು ಕೆತ್ತಿ ನಾಗೇಂದ್ರನ ಕೈಗಿತ್ತ. ನಾಗೇಂದ್ರ ರಂಗನಾಯಕಿಯ ಕಡೆ ತಿರುಗಲು

"ನನಗೆ ಸಾಕು. ನೀವು ಕುಡಿಯಿರಿ"

ಎಂದಳು.

"ಇಬ್ಬರೂ ಅರ್ಧ ಅರ್ಧ ಕುಡಿಯೋಣ."

"ನೀವು ಕುಡಿದುಕೊಡಿ."

"ನೀನು ಕುಡಿದುಕೊಡು."

ರಂಗನಾಯಕಿ ಬಲವಂತವಾಗಿ ನಾಗೇಂದ್ರನಿಗೆ ಮೊದಲು ಕುಡಿಸಿ ಉಳಿದರ್ಧವನ್ನು ತಾನು ಕುಡಿದಳು.

ಆಳು ಇನ್ನೊಂದು ಎಳನೀರು ಕೆತ್ತಲು ಹೊರಟಾಗ "ಸಾಕಯ್ಯಾ" ಎಂದು ನಾಗೇಂದ್ರ ಹೇಳಿದ.

"ಕಾಯಿ ತಿನ್ನಲ್ವರಾ ಬುದ್ಧಿ. ಬೆಣ್ಣೆ ಇದ್ದಂಗೈತೆ."

"ಬೇಡಯ್ಯಾ ಸಾಕು."

"ಎಲ್ಲಿಗೆ ಒಂಟದ್ರಿ ಬುದ್ಧಿ—ಮುಚ್ಚಂಜೆಯಾಗ್ತಾ ಬಂತು ?"

"ಸುಮ್ಮನೆ ಹೊರಟಿದ್ದೆವು. ದಾರಿಯಲ್ಲಿ ಕಳ್ಳರ ಭಯವಿದೆಯೇನು ?"

"ಕಳ್ರೆಲ್ಲಾ ರೇಷನ್ ಅಂಗಡಿ ಸೇರಿಬುಟ್ಟವ್ರೆ ಬುದ್ಧಿ—ಇಲ್ಲಿ ಯಾರವ್ರೆ ?"

ರೈತನ ಮಾತಿಗೆ ನಾಗೇಂದ್ರ ಗಹಗಹಿಸಿ ನಕ್ಕು ಕಾರು ಸ್ಟಾರ್ಟ್ ಮಾಡಿದ.

"ಓಗಿ ಬತ್ತೀರಾ ಬುದ್ಧಿ"

"ಒಳ್ಳೆಯದಪ್ಪಾ. ನಿನ್ನ ಹೆಸರೇನಯ್ಯಾ ?"

"ಗಂಗಾ ಬುದ್ಧಿ."

"ಯಾವಾಗಲಾದರೂ ಹೀಗೇ ಬಂದರೆ ಎಳನೀರು ಕೊಡಪ್ಪಾ."

"ಆಗಲಿ ನನ್ನೊಡೆಯಾ."

ಅಲ್ಲಿಂದ ಕಾರು ಹೊರಡುವ ವೇಳೆಗೆ ಸಂಜೆಯಾಗಿತ್ತು. ಸೂರ್ಯ ಗೃಹಾಭಿಮುಖನಾಗಿ ಧಾವಿಸಿ ಓಡುತ್ತಿದ್ದ.

ನಾಗೇಂದ್ರ ಕಾರು ಓಡಿಸಲಿಲ್ಲ. ಸಾವಕಾಶವಾಗಿ ಬಿಟ್ಟುಕೊಂಡು ಹೊರಟ. ನಾಲ್ಕು ಮೈಲಿ ಕಳೆಯುವುದರಲ್ಲಿ ಸೂರ್ಯ ಅಸ್ತಮಿಸಿದ್ದ. ಸಂಜೆಗತ್ತಲು ಕವಿಯುವುದಕ್ಕಾರಂಭವಾಗಿತ್ತು.

ನಾಗೇಂದ್ರ ರಸ್ತೆಯ ಪಕ್ಕದಲ್ಲಿ ಒಂದು ಹುಣಿಸೇಮರದ ಕೆಳಗೆ ಕಾರು ನಿಲ್ಲಿಸಿ, ರಂಗನಾಯಕಿಯನ್ನು ಕರೆದುಕೊಂಡು ಹಿಂದಿನ ಸೀಟಿನಲ್ಲಿ ಕುಳಿತ.

ರಂಗನಾಯಕಿಗೆ ಸೆರೆ ಬಿಡುಗಡೆಯಾದಂತಾಯಿತು. ನಾಗೇಂದ್ರನೂ ಹೃತ್ಪೂರ್ವಕವಾಗಿ ಓಗೊಟ್ಟ. ಪ್ರಣಯದ ಪ್ರಥಮ ಆವೇಗ ಸ್ವಲ್ಪ ಇಳಿಯಲು ರಂಗನಾಯಕಿ

"ಹೊಳೇನರಸೀಪುರಕ್ಕೆ ನಾನು ಬರೆದ ಕಾಗದಕ್ಕೆ ಉತ್ತರವನ್ನೇಕೆ ಬರೆಯಲಿಲ್ಲ ?"

"ವೇಳೆಯಲ್ಲಿತ್ತು ಹೇಳು ? ನಿನ್ನ ಕಾಗದ ಬಂದ ಮಾರನೆಯ ದಿವಸವೇ ನಾನು ಹೊರಟು ಬಂದೆ ?"

"ನೀವೇ ಬರೆದಿದ್ದರೆ ಆಗುತ್ತಿರಲಿಲ್ಲವೇನೋ ?"

"ಏನು ಬರೆಯುವುದು ನಾಯಕಿ. ಮನಸ್ಸಿನಲ್ಲಿರುವುದನ್ನು ಕಾಗದದ ಮೇಲೆ ಮೂಡಿಸಲಾಗುವುದೇ ?"

"ಒಳ್ಳೆಯ ಜಾಣತನದ ಉತ್ತರಕೊಟ್ಟು ನುಣುಚಿಕೊಳ್ಳುತ್ತಿರುವಿರಿ ?"

"ನಿನ್ನ ಜಾಣತನದ ಮುಂದೆ ನನ್ನ ಜಾಣತನವೇ ? ರಂಗನ ಮುಂದೆ ಸಿಂಗನೇ ?"

"ನನಗೆ ತುಂಬ ಯೋಚನೆಯಾಗಿದೆ ?"

"ಕಾರಣ ಹೇಳು."

"ನೀವು ಅದನ್ನು ಲಘುವಾಗಿ ಕಾಣಕೂಡದು."

"ನಿನಗೆ ಸಂಬಂಧಪಟ್ಟ ಯಾವ ವಿಷಯವನ್ನೂ ನಾನು ಲಘುವಾಗಿ ಕಾಣುವುದಿಲ್ಲ."

"ಇದು ನಿಮಗೆ ಸಂಬಂಧಪಟ್ಟ ವಿಷಯ. ಸುಲೋಚನಾ ನಾಲ್ಕೈದು ತಿಂಗಳಿಗೆ ಇಲ್ಲಿಗೆ ಬರುತ್ತಾಳೆ. ಅವಳು ಬಂದ ಮೇಲೆ ನನ್ನಗತಿ ?"

"ಅವಳು ಬರುವುದರಿಂದ ನಿನಗೇನು ತೊಂದರೆಯಾಗುತ್ತದೆ ?"

"ನನ್ನ ಕಷ್ಟ-ಸುಖ ಅರ್ಥಮಾಡಿಕೊಳ್ಳಬಾರದೆಂದು ನಿರ್ಧರಿಸಿಕೊಂಡೇ ಮಾತನಾಡುತ್ತಿರುವಿರಿ."

"ನೀನು ಹೇಳುವುದು ಅರ್ಥವಾಯಿತು ನಾಯಕಿ. ಅವಳು ಬಂದ ಮೇಲೆ ನಾವು ಒಬ್ಬರನೊಬ್ಬರು ಕಾಣುವುದು ಕಷ್ಟಸಾಧ್ಯವಾಗುತ್ತದೆ."

"ಅದಕ್ಕೇನು ಮಾಡುವಿರಿ ?"

"ಏನು ಮಾಡಬೇಕೋ ತಿಳಿಯದಾಗಿದೆ. ನೀನೇನು ಯೋಚನೆ ಮಾಡಿರುವೆ ಹೇಳು."

"ನಾನು ಹೇಳಿದರೆ ನನ್ನ ಮಾತು ಕೇಳುವಿರಾ ?"

"ಯಾವುದಾದರೊಂದು ದಾರಿ ಹುಡುಕಲೇ ಬೇಕಾಗಿದೆ."

"ಬೇರೆ ಒಂದು ಸಣ್ಣ ಮನೆಮಾಡಿ"

"ಹಾ ! ಬೇರೆ ಮನೆ !!"

"ಗಾಬರಿಯಾಗಬೇಡಿ. ಬೇರೆ ಒಂದು ರೂಮು ಸಿಕ್ಕಿದರೂ ಚಿಂತೆಯಿಲ್ಲ. ಅಲ್ಲಿಯಾದರೂ ನಾವು ಒಂದೆರಡು ಗಂಟೆ ಜತೆಯಲ್ಲಿರಬಹುದು."

"ರೂಮು ಮಾಡಬಹುದು. ಆದರೆ ಜನಗಳ ಕಣ್ಣಿನಿಂದ ಅದನ್ನು ಮರೆಮಾಡಲು ಸಾಧ್ಯವೇ? ಗುಲ್ಲಾಗಿ ಸುದ್ದಿ ಅಣ್ಣನ ಕಿವಿಯ ಮೇಲೆ ಬಿದ್ದರೆ........"

ರಂಗನಾಯಕಿಗೆ ದುಃಖ ತಡೆಯಲಾಗಲಿಲ್ಲ. ನಾಗೇಂದ್ರನ ಕುತ್ತಿಗೆಯನ್ನಪ್ಪಿ

"ನಾನು ಈ ಮನೆಯಲ್ಲಿ ಬಾಳಲಾರೆ. ನನ್ನನ್ನು ಎಲ್ಲಿಗಾದರೂ ಕರೆದುಕೊಂಡು ಹೋಗಿ ಬಿಡಿ. ನಿಮ್ಮನ್ನು ಯಾವುದಕ್ಕೂ ನಾನು ಪೀಡಿಸುವುದಿಲ್ಲ. ನಮ್ಮಿಬ್ಬರ ಜೀವನ ಸಾಗಿಸುವುದು ನಿಮಗೆ ಅಸಾಧ್ಯವಾದುದೇನೂ ಅಲ್ಲ."

ತನ್ನ ಸಮತೂಕವನ್ನು ಕಾಪಾಡಿಕೊಂಡು, ಬಲವಾಗಿ ಬಿಗಿದ ತಂತಿಯ ಮೇಲೆ ಎಚ್ಚರಿಕೆಯಿಂದ ನಡೆಯುವ ಆಟಗಾರನಂತೆ ನಾಗೇಂದ್ರ ಮುಂದಡಿಯಿಡಬೇಕಾಯಿತು. ರಂಗನಾಯಕಿಯನ್ನು ಪ್ರಿಯವಾಕ್ಯಗಳಿಂದ ರಮಿಸಿದ. ಅವಳ ಕಣ್ಣೀರು ತೊಡೆದು ಅವಳ ಮೇಲೆ ಮುದ್ದಿನ ಮಳೆಗರೆದು, ವೈದಡವಿ ಬಗೆಬಗೆಯಾಗಿ ಸಂತೈಸಿದ.

"ಮನವಿದ್ದಲ್ಲಿ ಮಾರ್ಗವಿದ್ದೇಯಿರುತ್ತದೆ ನಾಯಕಿ. ಇನ್ನು ಐದು ತಿಂಗಳಿಗೆ ಬರುವ ಸಮಸ್ಯೆಗಾಗಿ ಈಗಿನಿಂದಲೇ ತಲೆ ಕೆಡಿಸಿಕೊಳ್ಳುವುದೇತಕ್ಕೆ ಹೇಳು. ಬೇರೆ ಯಾವ ಮಾರ್ಗವೂ ಇಲ್ಲದಿದ್ದರೆ ರೂಮು ಮಾಡುವುದಂತೂ ಇದ್ದೇ ಇದೆ"

ಎಂದು ಹೇಳಿದ. ರಂಗನಾಯಕಿಗೆ ಸ್ವಲ್ಪ ಸಮಾಧಾನವಾಯಿತು.

ನಾಗೇಂದ್ರ ಕೈಗಡಿಯಾರ ನೋಡಿಕೊಂಡು

"ಗಂಟೆ ಎಂಟಾಯಿತು. ಮನೆಗೆ ಹೋಗೋಣವೇ" ಎಂದ.

"ಹೂ! ಹೋಗಬೇಕಲ್ಲ"

ಎಂದು ಬೇಸರದ ದನಿಯಲ್ಲಿ ರಂಗನಾಯಕಿ ಉತ್ತರಿಸಿದಳು.

ನಾಗೇಂದ್ರ ಮುಂದಿನ ಸೀಟಿಗೆ ಬಂದು ಕಾರ್ ಸ್ಟಾರ್ಟ್‌ಮಾಡಿದ. ರಂಗನಾಯಕಿಯನ್ನು ಕರೆತಂದು ಮನೆಗೆ ಸ್ವಲ್ಪ ದೂರದಲ್ಲಿಳಿಸಿ ತಾನು ಕಾರ್ ನಡೆಸಿಕೊಂಡು ಹೋದ.

ರಂಗನಾಯಕಿ ಮನೆ ತಲುಪುವ ವೇಳೆಗೆ ಮಹಾಬಲರಾಯ ಬಂದಿರ ಲಿಲ್ಲ. 'ಸದ್ಯ ಬದುಕಿದೆ' ಎಂದು ರಂಗನಾಯಕಿ ಶಾಂತಳಾದಳು. ಮಹಾ ಬಲರಾಯ ಒಂಭತ್ತು ಗಂಟೆಗೆ ಮನೆಗೆ ಬಂದ.

"ಮಕ್ಕಳೆಲ್ಲರೂ ಊಟಮಾಡಿದರೇ"

"ಎಲ್ಲರ ಊಟವೂ ಆಯಿತು. ನೀವು ಏಳಿ"

ಎಂದು ರಂಗನಾಯಕಿ ಉಪಚರಿಸಿದಳು.

"ನಾಗೇಂದ್ರನೂ ಬರಲಿ."

ನಾಗೇಂದ್ರ ಮನೆಸೇರುವ ಹೊತ್ತಿಗೆ ಒಂಭತ್ತೂವರೆಯಾಗಿತ್ತು. ಮಗ ಮನೆಗೆ ಬರುತ್ತಲೂ ಅವನೊಂದಿಗೆ ಅಂದಿನ ವ್ಯವಹಾರದ ವಿಷಯ ಮಾತ ನಾಡುತ್ತ ಮಹಾಬಲರಾಯ ಊಟ ಮುಗಿಸಿದ.

ನಾಗೇಂದ್ರ ರೂಮು ಸೇರಿ ಒಂದು ಕಾದಂಬರಿ ಕೈಯಲ್ಲಿ ಹಿಡಿದು ಕುಳಿತ. ಅಂದೇಕೋ ನಿದ್ದೆ ಬರುವ ಸೂಚನೆಯೇ ಕಂಡುಬರಲಿಲ್ಲ. ರಂಗನಾಯಕಿಯ ಸಲಹೆ ಅವನ ಮನಸ್ಸನ್ನು ಕೊರೆಯುತ್ತಿತ್ತು.

ದೀಪ ಆರಿಸಿ ಹಾಸಿಗೆಯ ಮೇಲೆ ಯೋಚನೆಮಾಡುತ್ತಾ ಮಲಗಿದ. ತನ್ನ ಜೀವನ ಹಿಡಿದಿದ್ದ ಹಾದಿ ನೋಡಿ ಅವನಿಗೆ ಆಶ್ಚರ್ಯವಾಯಿತು. ಭಯ ದಿಂದ ಮೈನಡಗಿತು. 'ಈ ಹುಚ್ಚು ಪ್ರೀತಿ ನನ್ನನ್ನು ಮಹಾಪಾಪಿಯನ್ನಾಗಿ ಮಾಡಿದೆ—ಮುಂದೆ ಏನು ಮಾಡುವುದೋ ಎಲ್ಲಿಗೆ ಒಯ್ಯುವುದೋ' ಎಂದು ಚಿಂತಿಸಿದ.

'ನಡೆದಿರುವ ವಿಷಯವೆಲ್ಲವನ್ನೂ ತಂದೆಗೆ ತಿಳಿಸಿ ಅವರ ಪಾದದ ಮೇಲೆ ಬಿದ್ದು ಕ್ಷಮೆಬೇಡಿ, ಸುಲೋಚನನೊಂದಿಗೆ ಎಲ್ಲಿಗಾದರೂ ಹೋಗಿ ಬಿಡಲೇ'

ಎಂದು ಯೋಚಿಸಿದ. ಮರುಕ್ಷಣವೇ

'ಇಂಥ ಘೋರವಾರ್ತೆ ಕೇಳಿ ತಂದೆ ಜೀವಂತರಾಗಿ ಉಳಿಯುವರೇ ? ಅವರನ್ನು ನಾನೇ ಕೈಯಾರೆ ಕೊಂದ ಹಾಗಾಗುವುದಲ್ಲಾ.'

ಆದರೆ ಬಿಡುಗಡೆಯ ಮಾರ್ಗ ಯಾವುದು ?—ಯಾವುದು ? ಯಾವುದು ? ಅವನ ಹೃದಯ ಸೀಳಿಕೊಂಡು ಪ್ರಶ್ನೆ ಮೈವೆತ್ತು ನಿಂತಿತ್ತು. ಪ್ರಶ್ನೆಗೆ ಉತ್ತರವಿಲ್ಲ—ಮನಸ್ಸಿಗೆ ಸಮಾಧಾನವಿಲ್ಲ.

ಎರಡು ಗಂಟೆ ಹೊಡೆಯಿತು. ಅಭ್ಯಾಸಬಲದಿಂದ ನಾಗೇಂದ್ರನ ಕಣ್ಣು ಬಾಗಿಲ ಕಡೆ ಹೊರಳಿತು. ಎದುರಿಗೆ ರಂಗನಾಯಕಿ ನಿಂತಿದ್ದಳು.

"ಇವತ್ತು ನೀನು ಬರುವುದಿಲ್ಲ ಎಂದಿದ್ದೆ."

"ಏಕೆ ಬರಬಾರದಾಗಿತ್ತೇ ?"

"ಸಂಜೆ ಜೊತೆಯಲ್ಲಿದ್ದೆವಲ್ಲಾ ಅದಕ್ಕೋಸ್ಕರ ಹಾಗೆ ಭಾವಿಸಿದೆ."

"ಸಂಜೆಯ ಮಾತು ಸಂಜೆಗೆ—ಈಗಿನ ಮಾತು ಈಗ್ಗೆ"

ರಂಗನಾಯಕಿ ರೂಮು ಬಿಟ್ಟು ಹೋದಮೇಲೆ ನಾಗೇಂದ್ರ ಮುಖ ಮುಚ್ಚಿಕೊಂಡು ಕುಳಿತ. ಕಣ್ಣಿನಿಂದ ಧಾರೆಧಾರೆಯಾಗಿ ನೀರು ಹರಿಯಿತು. ಅವನ ಹೃದಯಾಂತರಾಳದಿಂದ

"ನನ್ನನ್ನು ಕ್ಷಮಿಸುವೆಯಾ ಸುಲೋಚನ. ನಾನು ಪಾಪಿ ನಿಜ. ಆದರೆ ಅಷ್ಟೇ ದುರ್ಬಲನೂ ಆಗಿದ್ದೇನೆ"

ಎಂಬ ಆರ್ತಧ್ವನಿಯೆದ್ದಿತು.

೪೪

ವೆಂಕಟರಾಮು ಪರೀಕ್ಷೆ ಮುಗಿದಕೂಡಲೆ ಮಹಾಬಲರಾಯ ಅವನನ್ನು ಅಂಗಡಿಯ ಕೆಲಸಕ್ಕೆ ಹಾಕಿದ.

"ಹುಡುಗ ಬುದ್ಧಿವಂತ. ಇನ್ನೆರಡು ವರ್ಷ ಓದಿ ಡಿಗ್ರಿಕೋರ್ಸ್ ಮುಗಿಸಿದ್ದರೆ ಚೆನ್ನಾಗಿತ್ತು"

ಎಂದು ಸುಬ್ಬುಕೃಷ್ಣ ಹೇಳಿದ.

"ಇನ್ನೆರಡು ವರ್ಷ ಕಾಲೇಜಿಗೆ ಮಣ್ಣುಹೊರುವುದಕ್ಕೆ ಹಾಳು ಮಾಡುವುದರ ಬದಲು ಅಂಗಡಿಗೆ ವಿನಿಯೋಗಿಸಿದರೆ ಅವನಿಗೆ ವ್ಯಾಪಾರ ವಿದ್ಯೆಯಾದರೂ ಬರುತ್ತದೆ"

ಎಂದು ಮಹಾಬಲ ಸಮಾಧಾನ ಹೇಳಿದ.

ಚೇಳೂರಿನ ಸುತ್ತಮುತ್ತಲಿನ ಕೆಲವು ಜಮೀನುಗಳನ್ನು ಮಹಾಬಲ ಆಗಾಗ್ಗೆ ಕೊಂಡಿದ್ದ. ಅವುಗಳ ವ್ಯವಸ್ಥೆ ಮಾಡುವುದಕ್ಕೆ ಅವನು ಮೇಲಿಂದ ಮೇಲೆ ಹೋಗಿಬರಬೇಕಾಗಿತ್ತು. ವೆಂಕಟರಾಮೂಗೆ ಅಂಗಡಿ ಕೆಲಸ ವಹಿಸಿದ್ದುದು ಜಮೀನು ಕಡೆ ಹೆಚ್ಚು ಲಕ್ಷ್ಯಕೊಡುವುದಕ್ಕೆ ಅನುಕೂಲವಾಯಿತು.

ಮಹಾಬಲರಾಯನ ಹೊಸ ವ್ಯವಸ್ಥೆ ಎಲ್ಲರಿಗಿಂತಲೂ ರಂಗನಾಯಕಿಗೆ ಹೆಚ್ಚು ಸಂತೋಷವನ್ನುಂಟುಮಾಡಿತು. ಮಹಾಬಲ ಹಳ್ಳಿಯ ಕಡೆ ಹೋದರೆ ಹಿಂದಿರುಗಲು ಮೂರು ನಾಲ್ಕು ದಿವಸಗಳಾಗುತ್ತಿದ್ದವು. ಆ ದಿವಸಗಳಲ್ಲಿ ಅವಳು ನಾಗೇಂದ್ರನ ಜತೆ ಸ್ವತಂತ್ರವಾಗಿರಲು ಸಾಧ್ಯವಾಗುತ್ತಿತ್ತು.

ರಂಗನಾಯಕಿಯ ಸಂತೋಷ ಅಬಾಧಿತವಾಗಿರಲಿಲ್ಲ. ದಿವಸಗಳು ಕಳೆದಂತೆ ಸುಲೋಚನೆ ಬರುವ ದಿವಸಗಳು ಸಮೀಪಿಸುತ್ತಿವೆಯಲ್ಲಾ ಎಂದು ಅವಳು ಯೋಚಿಸುವಳು. ಸುಲೋಚನೆ ಬರದಂತೆ ಮಾಡಲು ಮಾರ್ಗಗಳನ್ನು ಆಲೋಚಿಸಿದಳು. 'ಅವಳ ಬರುವಿಕೆಯನ್ನು ಒಂದೆರಡು ತಿಂಗಳು ಮುಂದಕ್ಕೆ ಹಾಕಿಸಬಹುದು. ಆ ಎರಡು ತಿಂಗಳೂ ಕಳೆದ ಮೇಲೆ ಅವಳು ಬಂದೇ ಬರುವಳಲ್ಲಾ.'

ಎಷ್ಟೋ ಬಾರಿ 'ಸುಲೋಚನೆಗೆ ಏನಾದರೂ ಬಂದು ಅವಳು ಸತ್ತುಹೋಗಬಾರದೇ' ಎಂದು ಯೋಚಿಸುವಳು. 'ಕೊನೆಗೂ ಎಲ್ಲಿ ನೀರಿನಲ್ಲಿ ಹೋಮ ಮಾಡಿದಂತಾಗುವುದೇನೋ' ಎನ್ನುವ ಭಯ ಅವಳನ್ನು ಸದಾ ಕಾಡತೊಡಗಿತು.

ರಂಗನಾಯಕಿಯ ಮನಸ್ಸಿನಲ್ಲಿ ಭಯ, ಸಂಶಯ ಹೆಚ್ಚಿದಷ್ಟೂ ಅವಳ ವಿಷಯಾಸಕ್ತಿ ಕೆರಳುತ್ತ ಬಂತು. ಅವಳ ವಿಷಯದಾಹದ ಮಹಾಗ್ನಿಕುಂಡದಲ್ಲಿ ಬಿದ್ದಿದ್ದ ನಾಗೇಂದ್ರ ಗರಿಸೀದ ಪತಂಗದಂತೆ ಪರಿತಪಿಸುತ್ತಿದ್ದ.

ಸುಲೋಚನೆ ಪತಿಗೃಹ ಸೇರುವುದಕ್ಕೆ ಒಂದೇ ತಿಂಗಳು ಉಳಿಯಿತು. ಮುಂಬಯಿ ಬ್ರ್ಯಾಂಚಿನಲ್ಲಿ ಆದಾಯ ತೆರಿಗೆಯ ವಿಷಯದಲ್ಲಿ ದೊಡ್ಡ ಗಲಭೆಯೆದ್ದಿತು. ಆದಾಯ ತೆರಿಗೆಯ ಅಧಿಕಾರಿಗಳು ನಂಜುಂಡಯ್ಯನವರ ಲೆಕ್ಕದ ಬಗ್ಗೆ ಸಂಶಯಗ್ರಸ್ತರಾದರು. ಅವರು ದಿಕ್ಕುಗಾಣದೆ ಪರಿಸ್ಥಿತಿಯನ್ನು ವಿವರಿಸಿ ಕೂಡಲೆ ಹೊರಟು ಬರುವಂತೆ ಮಹಾಬಲರಾಯನಿಗೆ ಕಾಗದ ಬರೆದರು.

ಮಹಾಬಲರಾಯ ಊರು ಬಿಡುವುದು ಸಾಧ್ಯವಿರಲಿಲ್ಲ. ಹೊಸ ಜಮೀನುಗಳಲ್ಲಿ ಕೆಲಸ ಆರಂಭಿಸಿದ್ದರು. ಕಟ್ಟಡದ ಕೆಲಸ ಒಂದು ಕಡೆ, ಭಾವಿಯ ಕೆಲಸ ಒಂದು ಕಡೆ ಸಾಗಿತ್ತು. ಅವುಗಳನ್ನು ಅರ್ಧದಲ್ಲಿ ಬಿಟ್ಟು

ಹೋದರೆ ಹಾಕಿದ್ದ ಹಣ ಪೋಲಾಗುವುದೆಂದು ಹೆದರಿ, ನಾಗೇಂದ್ರನೇ ಮುಂಬಯಿಗೆ ಹೋಗಿಬರುವುದೆಂದು ನಿಶ್ಚಯಿಸಿದ.

ನಾಗೇಂದ್ರ ಹೊರಡಬೇಕಾದ ವಿಷಯ ರಂಗನಾಯಕಿಗೆ ತಿಳಿದು ಬಂದಾಗ ಅವಳು ಗಂಡನ ಮೇಲೆ ಕಿಡಿಕಿಡಿಯಾದಳು. ತನ್ನ ಕೋಪವನ್ನು ವ್ಯಕ್ತಮಾಡಲಾಗದ ನಿರ್ಬಂಧಕ್ಕೆ ಅವಳು ಮತ್ತಷ್ಟು ತಪ್ತಳಾದಳು.

"ಏನಾದರೂ ಚಿಂತೆಯಿಲ್ಲ. ನೀವು ಈಗ ಹೋಗಬೇಡಿ. ಅವರನ್ನೇ ಕಳುಹಿಸಿಕೊಡಿ."

ಎಂದು ಮಧ್ಯಾಹ್ನ ನಾಗೇಂದ್ರನನ್ನು ಒತ್ತಾಯಮಾಡಿದಳು.

"ಹೇಗೆ ಸಾಧ್ಯ ನಾಯಕಿ. ಅವನಿಗೂ ಕೈತುಂಬ ಕೆಲಸ. ತಿಳಿದೂ ತಿಳಿದೂ ನೀನೇ ಹೋಗು ಎಂದು ಅಣ್ಣನಿಗೆ ಹೇಗೆ ಹೇಳಲಿ ?"

"ಈಗ ನೀವು ಹೋದರೆ ಹಿಂದಿರುಗುವುದಕ್ಕೆ ಒಂದೆರಡು ವಾರಗಳಾಗುತ್ತವೆ. ಬಂದಕೂಡಲೆ ಹೊಳೇನರಸೀಪುರಕ್ಕೆ ಹೋಗಿ ಸುಲೋಚನನನ್ನು ಕರೆದುಕೊಂಡು ಬರಬೇಕು."

"ನಾನು ಮುಂಬಯಿಯಿಂದ ಬಂದಕೂಡಲೆ ರೂಮಿನ ವ್ಯವಸೆ ಮಾಡುತ್ತೇನೆ. ನೀನು ಯೋಚಿಸಬೇಡ."

"ಮುಂಬಯಿಯಿಂದ ಪ್ರತಿನಿತ್ಯ ಕಾಗದ ಬರೆಯುವಿರಷ್ಟೇ ?"

"ಬರೆಯುತ್ತೇನೆ."

"ಕೈಮೇಲೆ ಹಾಕಿ ಮಾತುಕೊಡಿ."

"ಸತ್ಯವಾಗಿ ಬರೆಯುತ್ತೇನೆ."

"ನಿಮ್ಮ ಕಾಗದಗಳನ್ನು ನೋಡಿಕೊಂಡು ನಾನು ಕಾಲತಳ್ಳುತ್ತೇನೆ."

"ಅಂಬುಜಮ್ಮನವರ ಮನೆಗೆ ಹೋಗಿ ಬಾ."

"ಹೋಗುತ್ತೇನೆ. ಆದರೆ ಅಲ್ಲಿ ನನಗೆ ಬೇಕಾದ ವಸ್ತುವಿದೆಯೇ ?"

"ನಿನ್ನ ಮನಸ್ಸಿನಿಂದ ನನ್ನನ್ನು ದೂರಮಾಡಲೆತ್ನಿಸಬೇಕು ನಾಯಕಿ. ನಮ್ಮ ಕಳ್ಳತನ ಎಷ್ಟು ದಿನ ಮುಚ್ಚಿಡಲು ಸಾಧ್ಯ ?"

"ಬಯಲಿಗೆ ಬಿದ್ದರೆ ಬೀಳಲಿ. ನನ್ನ ಮನಸ್ಸಿನಿಂದ ನಿಮ್ಮನ್ನು ದೂರ ಮಾಡಲು ಸಾಧ್ಯವಿಲ್ಲ. ನಿಮಗಾಗಿ ನಾನು ಯಾವ ತ್ಯಾಗವನ್ನು ಬೇಕಾದರೂ ಮಾಡಲು ಸಿದ್ಧಳಾಗಿದ್ದೇನೆ."

"ತಲೆ ಗಟ್ಟಿಯಾಗಿದೆಯೆಂದು ಕಲ್ಲಿಗೆ ಹಾಯುವುದು ವಿವೇಕವಲ್ಲ."

"ಹೊಳೆಗೆ ಇಳಿದದ್ದು ಆಯಿತು. ಈಗ ನೀರು ತಣ್ಣಗಿದೆಯೋ ಬಿಸಿಯಾಗಿದೆಯೋ ಎಂದು ಪರೀಕ್ಷೆಮಾಡಲೇ ?"

"ನಾನೀಗ ದೇವರಚಿಂತೆ ಬಹಳ ಮಾಡುತ್ತಿದ್ದೇನೆ ನಾಯಕಿ."

"ಏಕೆ ?"

"ಅವನಾದರೂ ನಮ್ಮನ್ನು ರಕ್ಷಿಸಲೆಂದು."

"ನನ್ನ ದೇವರು ನನ್ನನ್ನು ರಕ್ಷಿಸುತ್ತಾನೆ."

"ನಿನ್ನ ದೇವರು ಯಾವದು ?"

"ನೀವೇ !"

"ನಾನು !! ಹಗಲು ಕಂಡ ಭಾವಿಯಲ್ಲಿ ಇರುಳು ಬಿದ್ದವರನ್ನು ಯಾವ ದೇವರು ರಕ್ಷಿಸಲು ಸಾಧ್ಯ."

ಅವನ ಮಾತಿನಲ್ಲಿ ತೀಕ್ಷ್ಣವಾದ ನೋವು ಅಡಕವಾಗಿದ್ದುದನ್ನು ರಂಗನಾಯಕಿ ಕಂಡುಕೊಂಡಳು. ಈ ಹೊತ್ತಿನಲ್ಲಿ ತಾನು ಎಚ್ಚರವಾಗಿರುವುದು ಒಳ್ಳೆಯದೆಂದು ಭಾವಿಸಿ

"ನಾಳೆ ಹೊರಡುವಿರಾ ?"

"ಬೆಳಿಗ್ಗೆ ಪ್ಲೇನಿನಲ್ಲಿ ಹೋಗುವ ಎಂದಿದ್ದೇನೆ."

"ಆದಷ್ಟು ಬೇಗ ಬಂದು ಬಿಡಿ."

"ಕೆಲಸ ಮುಗಿದಕೂಡಲೆ ಬಂದು ಬಿಡುತ್ತೇನೆ."

"ನೇರವಾಗಿ ಬರುವಿರಾ...."

"ಈಗ ಹೊಳೇನರಸೀಪುರಕ್ಕೆ ಹೋಗುವುದಿಲ್ಲ."

ಅವನ ಕಾರ್ಯಕ್ರಮ ರಂಗನಾಯಕಿಗೆ ಒಂದು ಬಗೆಯ ವಿಚಿತ್ರ ತೃಪ್ತಿಯನ್ನಿತ್ತಿತು.

ರಂಗನಾಯಕಿಗೆ ಕೊಟ್ಟಿದ್ದ ವಚನವನ್ನು ಉಲ್ಲಂಘಿಸುವುದಕ್ಕೆ ನಾಗೇಂದ್ರನಿಗೆ ಧೈರ್ಯವಾಗಲಿಲ್ಲ. ಮುಂಬಯಿ ತಲುಪಿದ ಕೂಡಲೇ ಅವಳಿಗೆ ಪತ್ರ ಬರೆದ. ರಂಗನಾಯಕಿಯನ್ನು ಬಿಟ್ಟು ಬಂದು ಕೆಲಸಕಾರ್ಯಗಳಲ್ಲಿ ತಲ್ಲೀನನಾದುದು ನಾಗೇಂದ್ರನಿಗೆ ಸ್ವಲ್ಪ ಮನಃಶಾಂತಿಯನ್ನು

ತಂದಿತು. ಸುಲೋಚನನಿಗೆ ಪತ್ರಬರೆದು ಸೂಕ್ಷ್ಮವಾಗಿ ತನ್ನ ಹೃದಯದ ಹೋರಾಟವನ್ನು ನಿವೇದಿಸಿದ.

ರಂಗನಾಯಕಿ ತಪ್ಪದೆ ಪ್ರತಿನಿತ್ಯವೂ ನಾಗೇಂದ್ರನಿಗೆ ಪತ್ರ ಬರೆಯುತ್ತಿದ್ದಳು. ಅಂಚೆಯಾಳು ಬರುವವೇಳೆ ಕಾದು ತಾನೇ ಅವನ ಪತ್ರವನ್ನು ಸ್ವೀಕರಿಸುತ್ತಿದ್ದಳು. ಮಹಾಬಲ ಮನೆಯಲ್ಲಿಲ್ಲದಿದ್ದಾಗ ನಾಗೇಂದ್ರನ ಭಾವ ಚಿತ್ರ, ಪತ್ರಗಳನ್ನು ನೋಡಿ—ನೋಡಿ ತೃಪ್ತಿಪಡೆಯುತ್ತಿದ್ದಳು.

ಒಂದು ದಿನ ಮಹಾಬಲರಾಯನ ಎದುರಿಗೇ ಅಂಚೆಯಾಳಿನ ಕೈಯಿಂದ ಪತ್ರ ರಂಗನಾಯಕಿ ಸ್ವೀಕರಿಸಿದಳು.

"ಯಾರದು ಕಾಗದ" ಎಂದು ಕೇಳಿದ.

"ನನ್ನ ತಂದೆ ಬರೆದಿದ್ದಾರೆ" ಎಂದು ಹೇಳಿದಳು.

ತಂದೆಯ ಕಾಗದವೆಂದು ರಂಗನಾಯಕಿ ಹೇಳಿದಾಗ ಅವಳ ಮುಖ ವಿವರ್ಣವಾದುದನ್ನು ಮಹಾಬಲ ಗಮನಿಸಿದ.

"ಸ್ನಾನ ಮುಗಿಸಿಕೊಂಡು ಬರುತ್ತೇನೆ ತಟ್ಟೆ ಹಾಕಿಸು."

ಎಂದು ಸ್ನಾನಗೃಹಕ್ಕೆ ಹೋಗಿ ರಂಗನಾಯಕಿಗೆ ಕೇಳಿಸುವಂತೆ ಬಾಗಿಲು ಹಾಕಿಕೊಂಡು ಒಂದೆರಡು ನಿಮಿಷಗಳ ತರುವಾಯ ಸದ್ದುಮಾಡದೆ ಹೊರಗೆ ಬಂದು ನೋಡಿದ. ರಂಗನಾಯಕಿ ತದೇಕಚಿತ್ತಳಾಗಿ ಕಾಗದ ಓದಿಕೊಂಡು ಅದಕ್ಕೆ ಮುದ್ದಿಟ್ಟು ಹಾಸಿಗೆಯ ಕೆಳಗೆ ಕಾಗದವನ್ನಿಟ್ಟುದನ್ನು ನೋಡಿ ಮತ್ತೆ ಸ್ನಾನಗೃಹಕ್ಕೆ ತೆರಳಿ ಸದ್ದಾಗದಂತೆ ಬಾಗಿಲುಹಾಕಿ ಕೊಂಡ.

ಮಹಾಬಲನ ಮನಸ್ಸಿನಲ್ಲಿ ಪುಂಖಾನುಪುಂಖವಾಗಿ ಪ್ರಶ್ನೆಗಳೆದ್ದವು.

'ತಂದೆಯ ಕಾಗದ ಎಂದು ಹೇಳಿದಾಗ ಅವಳ ಮುಖ ವಿವರ್ಣವಾಯಿತೇಕೆ ?'

'ಕಾಗದವನ್ನೋದಿಕೊಂಡು ಅದಕ್ಕೆ ಮುದ್ದಿಟ್ಟಳೇಕೆ ?'

'ಕಾಗದ ನಿಜವಾಗಿ ಅವಳ ತಂದೆಯದೇ ಇರಬಹುದೇ ?'

ತಕ್ಷಣವೇ ಮಹಾಬಲನ ಮನಸ್ಸಿನಲ್ಲಿ ಒಂದು ಯೋಚನೆ ಹೊಳೆಯಿತು. ಯೋಚನೆಯನ್ನು ಬೆಳೆಯಬಿಡದೆ ಛೆ! ಛೆ! ಎಲ್ಲಿಯಾದರೂ ಉಂಟೇ ? ಎಂದು ಮನಸ್ಸಿನಿಂದ ತಳ್ಳಿಹಾಕಲು ಪ್ರಯತ್ನಿಸಿದ.

ಊಟ ಮುಗಿದಮೇಲೆ ರಂಗನಾಯಕಿ ಮಡಿಸಿಕೊಡುತ್ತಿದ್ದ ವೀಳೆಯ ದೆಲೆ ಸವಿಯುತ್ತಾ

"ನಾಗೇಂದ್ರ ಹಿಂದಿರುಗಿದ ಕೂಡಲೆ ಹೊಳೇನರಸೀಪುರಕ್ಕೆ ಹೋಗಿ ಹೆಂಡತಿ ಮಗುವನ್ನು ಕರೆದುಕೊಂಡು ಬರಬೇಕಾಗುತ್ತದೆ."

"ಐದು ತಿಂಗಳಿಗೇ ಅವಳ ತೌರುಮನೆಯವರು ಕಳಿಸಿಕೊಡುತ್ತಾರೆಯೇ? ಚೊಚ್ಚಿಲು ಬಾಣಂತನ."

"ನೀನಿರುವಾಗ ಭಯವೇನು?"

"ಅವರು ಬೊಂಬಾಯಿನಿಂದ ಹಿಂದಿರುಗಿಬರುವುದು ಯಾವಾಗ?"

"ಇನ್ನು ಒಂದು ವಾರವಾಗಬಹುದು. ಈಚೆಗೆ ಅಂಬುಜಮ್ಮನವರ ಮನೆಗೆ ಹೋಗಿದ್ದೆಯಾ?"

"ನಿನ್ನೆ ಹೋಗಿದ್ದೆ—ಮೊನ್ನೆ ಹೋಗಿದ್ದೆ—ಏಕೆ?"

"ಮಗು ಬಾಣಂತಿ ಮನೆಗೆ ಬಂದಾಗ ಏನು ಏನೋ ಶಾಸ್ತ್ರವಿಧಿಗಳಾಗಬೇಕು. ಆರತಿ ಅಕ್ಷತೆಯಾಗಬೇಕೆಂದು ಕಾಣುತ್ತದೆ. ಏನೇನು ಮಾಡಬೇಕೆಂದು ನೀನು ತಿಳಿದುಕೊಂಡು ಬಂದಿದ್ದರೆ ಚೆನ್ನಾಗಿತ್ತು."

"ಇವತ್ತು ಹೋಗಿ ಕೇಳಿಕೊಂಡು ಬರುತ್ತೇನೆ."

"ಒಡವೆ ಏನಾದರೂ ಮಾಡಿಸಬೇಕೇನು?"

"ಮಾಡಿಸದೆ—ಅಪರೂಪಕ್ಕೆ ಮೊಮ್ಮಗ ಹುಟ್ಟಿದ್ದಾನೆ. ಚಿನ್ನದ ಉಡಿದಾರ, ಬಳೆ, ಉಂಗುರ ಮಾಡಿಸಬೇಕು."

"ನೀನು ಅಂಬುಜಮ್ಮನವರನ್ನು ಕೇಳಿಕೊಂಡು ಬಂದರೆ ಪೇಟೆ ಕಡೆ ಹೋಗಿಬರಬಹುದು. ಹಾಗೇ ನಿನಗೂ ಏನುಬೇಕೋ ತೆಗೆದುಕೊಳ್ಳುವೆಯಂತೆ."

"ಈಗಲೇ ಹೋಗಿಬರಲೇನು?"

"ಹೋಗಿ ಬಾ. ಕಾರು ಮನೆಯಲ್ಲಿಯೇ ಇದೆಯಲ್ಲಾ."

ರಂಗನಾಯಕಿ ಕಾಲುಗಂಟೆಯಲ್ಲಿ ಸಿದ್ಧಳಾದಳು. ಮಹಾಬಲ ಡ್ರೈವರನ್ನು ಕೂಗಿ ರಂಗನಾಯಕಿಯನ್ನು ಕಾರಿನಲ್ಲಿ ಕಳುಹಿಸಿಕೊಟ್ಟ.

ಅವನ ಚಿತ್ತ ಕೂಡಲೆ ಹಾಸಿಗೆಯ ಕಡೆ ಹೋಯಿತು. ಹಾಸಿಗೆಯ ಕೆಳಗೆ ಕೈಯಾಡಿಸಿದ. ರಂಗನಾಯಕಿಗೆ ಅಂದು ಬಂದಿದ್ದ ಪತ್ರ ಸಿಕ್ಕಿತು.

ಅಕ್ಷರ ಕಂಡೊಡನೆಯೇ ಮಹಾಬಲನ ಮುಖದಿಂದ ಬೆವರಿಳಿಯಿತು. ಕಾಗದವನ್ನು ಸಾವಕಾಶವಾಗಿ ಓದಿಕೊಂಡ:

'ಪ್ರೇಯಸೀ,

ಇಲ್ಲಿ ಸ್ವಲ್ಪವೂ ಪುರಸತ್ತಿಲ್ಲ. ಆದಾಯ-ತೆರಿಗೆ ಲೆಕ್ಕ ರಾಮಾಯಣ ವಾಗಿದೆ. ಇದ್ದುದರಲ್ಲಿಯೇ ಪುರಸತ್ತುಮಾಡಿಕೊಂಡು ನಾಲ್ಕು ಪಂಕ್ತಿ ಬರೆ ಯುತ್ತಿದ್ದೇನೆ. ಪತ್ರ ದೊಡ್ಡದಾಗಿ ಬರೆಯಲಿಲ್ಲ ಎಂದು ಆಕ್ಷೇಪಿಸಿರುವೆ. ಎಷ್ಟು ದೊಡ್ಡದಾಗಿ ಬರೆದರೂ ಹೇಳಬೇಕಾದುದು ಮುಗಿಯುತ್ತದೆಯೇ?

ಮಧ್ಯಾಹ್ನ ರಾತ್ರಿ ಕಳೆಯುವುದು ನಿನಗೆ ಹೇಗೆ ಕಷ್ಟವೋ ನನಗೂ ಹಾಗೇ ಆಗಿದೆ. ನಿನ್ನನ್ನು ಬಿಟ್ಟು ಬಂದು ಐದು ದಿವಸಗಳಾದವು. ನಿನ್ನನ್ನು ಬಿಗಿದಪ್ಪಿ ಹಿಡಿಯಲು ನನ್ನ ಬಾಹುಗಳು ತವಕಪಡುತ್ತಿವೆ. ಆದಷ್ಟು ಬೇಗ ಇಲ್ಲಿನ ಕೆಲಸ ಮುಗಿಸಿಕೊಂಡು ಬರುತ್ತೇನೆ. ಬಂದ ಕೂಡಲೆ ರೂಮಿನ ವ್ಯವಸ್ಥೆ ಮಾಡುತ್ತೇನೆ.

ನಿನ್ನ ಪ್ರಿಯತಮ 'ನಾಗೇಂದ್ರ.'

ಮಹಾಬಲನ ಕಣ್ಣುಗಳು ಮುಚ್ಚಿದವು. ಕಣ್ಣುಗಳಿಂದ ಜಾರಿದ ಹನಿಗಳು ರೆಪ್ಪೆಯಮೇಲೆ ಬಂದು ನಿಂತವು. ಹೃದಯದಲ್ಲಿ ಒತ್ತಡವಾರಂಭ ವಾಯಿತು. ಸ್ವಲ್ಪ ಹೊತ್ತು ಹಾಗೇ ಹಾಸಿಗೆಯ ಮೇಲೆ ಕಾಲುಚಾಚಿ ಮಲಗಿದ.

ಯಾವದೋ ಶಕ್ತಿ ಅವನ ದುರ್ಬಲದೇಹಕ್ಕೆ ಚೇತನ ತುಂಬಿತು. ಝುಗ್ಗನೆದ್ದು ಕುಳಿತ. ಹಾಸಿಗೆ ಕೆಳಗೆ ಮತ್ತೆ ಕೈಯಾಡಿಸಿ ಬೀಗದ ಕೈಗೊಂಚಲನ್ನು ದೊರಕಿಸಿದ. ಆಲ್ಮೇರಾ ತೆಗೆದು ರಂಗನಾಯಕಿಯ ಒಡವೆ, ವಸ್ತ್ರಗಳಿದ್ದ ಡ್ರಾಯರುಗಳನ್ನು ಹುಡುಕಿದ. ಒಂದು ಡ್ರಾಯರ್ ತುಂಬ ಸಣ್ಣ ಸಣ್ಣ ಪೆಟ್ಟಿಗೆಗಳು—ಡಬ್ಬಾಗಳು. ಅವುಗಳಲ್ಲಿ ತನ್ನ ರಿಬ್ಬನ್‌ಗಳು, ಪಿನ್‌ಗಳು, ಸಣ್ಣ ಒಡವೆಗಳು, ಚಿಲ್ಲರೆ ಸಾಮಾನುಗಳನ್ನು ತುಂಬಿಟ್ಟು ಕೊಂಡಿದ್ದಳು. ಒಂದೆರಡು ಡಬ್ಬಿಗಳಲ್ಲಿ ಸಿಲ್ಕ್ ಕರವಸ್ತ್ರಗಳಿದ್ದವು. ಇನ್ನೊಂದು ಡಬ್ಬ ತೆಗೆದು ನೋಡಿದ—ಕಾಗದಗಳ ಒಂದು ಕಂತೆ. ಮಹಾಬಲ ಸಾವಕಾಶವಾಗಿ ಕುಳಿತು ಎಲ್ಲ ಕಾಗದಗಳನ್ನು ಓದಿಕೊಂಡ.

ಕಾಗದಗಳನ್ನು ಮತ್ತೆ ಡಬ್ಬದಲ್ಲಿಯೇ ಹಾಕಿ, ಆಲ್ಮೇರಾ ಬೀಗ

ಹಾಕಿ, ಬೀಗದ ಕೈಗೊಂಚಲು ಇದ್ದಲ್ಲಿಯೇ ಇಟ್ಟು ಅಂದಿನ ಕಾಗದವನ್ನೂ ಅದರ ಸ್ಥಾನ ಸೇರಿಸಿ ಮಹಾಬಲ ಮಲಗಿಕೊಂಡ.

ರಂಗನಾಯಕಿ ನಾಲ್ಕು ಗಂಟೆಯ ವೇಳೆಗೆ ಅಂಬುಜಮ್ಮನವರ ಮನೆಯಿಂದ ಹಿಂದಿರುಗಿದಳು. ಗಂಡ ಮಲಗಿರುವುದನ್ನು ಕಂಡು

"ನಿದ್ದೆ ಬಂದಿದೆಯೇ ?" ಎಂದು ಮೃದುವಾಗಿ ಕೇಳಿದಳು.

ಮಹಾಬಲ ಮೆಲ್ಲನೆ ಕಣ್ಣುಬಿಟ್ಟು

"ಸ್ವಲ್ಪ ಬಂದಿತ್ತು. ಇದೇ ಎಚ್ಚರವಾಯಿತು."

"ಎಲ್ಲಾ ವಿಚಾರಿಸಿದೆ. ಆರತಿ ಅಕ್ಷತೆ ಆಗಬೇಕಂತೆ. ಮೊಮ್ಮಗನಿಗೆ ಖಂಡಿತವಾಗಿ ಉಡಿದಾರ, ಉಂಗುರ, ಬಳೆ ಮಾಡಿಸಬೇಕು ಎಂದು ಅಂಬುಜಮ್ಮನವರು ಹೇಳಿದರು. ಪೇಟೆಗೆ ಹೋಗಿ ಬರೋಣವೇನು ?"

"ಆಗಬಹುದು. ನಾನು ಮುಖ ತೊಳೆದುಕೊಂಡು ಬರುತ್ತೇನೆ."

ಎಂದು ಎದ್ದುಹೋದ.

ತನ್ನ ಸಂಯಮಶಕ್ತಿ ಕಂಡು ಮಹಾಬಲನಿಗೇ ಆಶ್ಚರ್ಯವಾಯಿತು.

ಪೇಟೆಯ ಕೆಲಸ ಮುಗಿಸಿಕೊಂಡು ಗಂಡ ಹೆಂಡತಿ ಮನೆ ತಲಪುವ ಹೊತ್ತಿಗೆ ಏಳುಗಂಟೆ ಹೊಡೆಯಿತು. ಪೇಟೆಯಿಂದ ಕೊಂಡು ತಂದಿದ್ದ ವಸ್ತುಗಳನ್ನು ಒಳಕ್ಕೆ ಇರಿಸಿ

"ನಾನು ಸ್ವಲ್ಪ ಅಂಗಡಿಕಡೆ ಹೋಗಿಬರುತ್ತೇನೆ"

ಎಂದು ಹೆಂಡತಿಗೆ ಹೇಳಿ ಹೋದ.

ಅಂಗಡಿಯಲ್ಲಿ ಮಹಾಬಲ ಬಹಳ ಹೊತ್ತು ಕುಳಿತುಕೊಳ್ಳಲಿಲ್ಲ. ಅಂದಿನ ಕ್ಯಾಷ್‌ಬುಕ್ ನೋಡಿ ಕಾರಿನಲ್ಲೇ ಹೊರಟುಬಿಟ್ಟ. ಡ್ರೈವರ್ ಮನೆಯಕಡೆ ಕಾರು ತಿರುಗಿಸಿದಾಗ ಮಹಾಬಲ

"ಕಬ್ಬನ್ ಪಾರ್ಕಿಗೆ ಹೊಡಿ ಡ್ರೈವರ್" ಎಂದ.

ಪಾರ್ಕಿನಲ್ಲಿ ಒಂದು ಕಲ್ಲುಬೆಂಚಿನಮೇಲೆ ಕುಳಿತು ಮಹಾಬಲರಾಯ ಶಾಂತವಾಗಿ ಯೋಚನೆ ಮಾಡಿದ. ರಂಗನಾಯಕಿ ಬಂದ ದಿವಸದಿಂದ ಅಂದಿನವರೆಗೆ ಆದ ಘಟನೆಗಳನ್ನು ಜ್ಞಾಪಿಸಿಕೊಂಡ. ಅವಳು ರಾತ್ರಿ ನಾಲ್ಕೈದು ಗಂಟೆಗೆ ರೂಮಿಗೆ ಬರುತ್ತಿದ್ದ ದಿವಸಗಳೂ ನೆನಪಾದವು.

"ಈಗ ಆಗಿರುವ ಅನ್ಯಾಯವನ್ನು ಸರಿಪಡಿಸಲು ಸಾಧ್ಯವಿಲ್ಲ."

"ಮುಂದೇನು ಮಾಡುವುದು ?"

"ಏನೂ ಕಂಡಿಲ್ಲವೆಂದುಕೊಂಡು ಕಣ್ಣುಮುಚ್ಚಿಕೊಂಡಿರುವುದೇ ?"

"ಅವರಿಬ್ಬರೂ ಹೇಗೆ ಬೇಕಾದರೂ ಇದ್ದುಕೊಳ್ಳಲಿ ಎಂದು ನಾನೇ ಮನೆಬಿಟ್ಟು ಹೊರಟುಹೋಗಲೇ ?"

"ಈ ಪಾಪಕಥೆ ಹೊರಬಿದ್ದರೆ ಮನೆತನವೇ ಹಾಳಾಗಿಹೋಗುತ್ತದೆ. ನಿರಪರಾಧಿಗಳಾದ ವೆಂಕಟರಾಮು, ಸ್ವಾಮಿ, ಸುಂದರೂ ಇವರ ಜೀವನವೂ ಹಾಳಾಗಿಹೋಗುತ್ತದೆ. ಪಾಪ! ಸುಲೋಚನೆಯ ಪಾಡೇನು ?"

ಮುಂದೇನು ಮಾಡಬೇಕೆಂಬ ಯೋಚನೆಯ ಜತೆಗೆ ತನಗಾದ ಅನ್ಯಾಯ, ಅಪಮಾನ, ದ್ರೋಹದ ದಳ್ಳುರಿ ಮಹಾಬಲನನ್ನು ಸುಡತೊಡಗಿದವು.

ಪಾರ್ಕಿನಲ್ಲಿಯೂ ಹೆಚ್ಚುಕಾಲ ಕೂಡಲು ಮಹಾಬಲನಿಗೆ ಮನಸ್ಸಾಗಲಿಲ್ಲ. ಎದ್ದು ಸ್ವಲ್ಪಹೊತ್ತು ಅಲ್ಲಿಯೇ ಶಥಪಥ ತಿರುಗಿದ. 'ಹೊತ್ತಾಯಿತು' ಎಂದು ಡ್ರೈವರ್ ಜ್ಞಾಪಿಸಲು ಮಹಾಬಲ ಬಂದು ಕಾರಿನಲ್ಲಿ ಕುಳಿತ.

ಮನೆಯೊಳಗೆ ಮಹಾಬಲ ಬಂದಕೂಡಲೇ ಎದುರಿಗೆ ಬಂದ ಹೆಂಡತಿಯನ್ನು ನೋಡಿದ. ಅವಳು ಅಂದಿನಂತೆ ತಲೆ ಬಾಚಿಕೊಂಡು ತುಂಬ ಹೂ ಮುಡಿದುಕೊಂಡಿದ್ದಳು. ರಂಗನಾಯಕಿಯ ನೈಸರ್ಗಿಕ ಚೆಲುವಿಗೆ ಮಲ್ಲಿಗೆಯ ಮೊಗ್ಗುಗಳು ಕುಂದಣವಿಟ್ಟದ್ದವು.

ಕಣ್ಣುಕೋರೈಸುವ ರಂಗನಾಯಕಿಯ ಸೌಂದರ್ಯ ಅಂದು ಮಹಾಬಲನಿಗೆ ಪ್ರೇತವನದ ಪುಷ್ಪದ ನೆನಪು ತಂದಿತು.

೪೫

ಮಾರನೆಯ ದಿನ ಗಂಡನ ನೀರವತೆ ಕಂಡು ರಂಗನಾಯಕಿಗೆ ಯೋಚನೆಯಾಯಿತು.

"ಏಕೆ ಹೀಗಿದ್ದೀರಿ ?"

ಎಂದು ನಾಲ್ಕಾರುಸಲ ಕೇಳಿದಳು.

"ಹೇಗಿದ್ದೀನಿ. ಸರಿಯಾಗಿಯೇ ಇದ್ದೇನಲ್ಲಾ"

ಎಂದು ಮಹಾಬಲ ಮಾತು ಹಾರಿಸಿದ.

ಅಂದೇ ಸಂಜೆ ಮಿಲ್ಲಿನ ಕಛೇರಿಯಲ್ಲಿ ತನ್ನನ್ನು ಬಂದು ಕಾಣಬೇಕೆಂದು ಮಹಾಬಲರಾಯ ಉಮಾಪತಿಗೆ ಹೇಳಿಕಳುಹಿಸಿದ.

ಅಂಜನಪ್ಪ, ಉಮಾಪತಿಯರನ್ನು ಕೂಡಿಸಿಕೊಂಡು

"ಮಿಲ್ಲಿನ ಅಭ್ಯುದಯದ ವಿಷಯದಲ್ಲಿ ನನ್ನ ಕರ್ತವ್ಯ ನಾನು ಪೂರೈಸಿದ್ದೇನೆಂದು ಕಾಣುತ್ತದೆ" ಎಂದ.

"ಅದರಲ್ಲಿ ಸಂದೇಹವೇನು ಸ್ವಾಮಿ. ಒಳ್ಳೆಯ ಸಮಯದಲ್ಲಿ ನೀವು ಮಿಲ್ಲಿಗೆ ನೆರವಾದುದರಿಂದ ಅದು ಜೀವಂತವಾಗಿ ಉಳಿಯಿತು. ಅದರ ಖ್ಯಾತಿಯನ್ನು ದೇಶದಲ್ಲೆಲ್ಲಾ ಹರಡಿದಿರಿ."

"ಮಿಲ್ಲಿನ ಶ್ರೇಯಸ್ಸಿಗಾಗಿ ನಮ್ಮ ಹಣ ಕಾರಣವಲ್ಲ ಅಂಜನಪ್ಪನವರೇ, ನಿಮ್ಮ ನಿಷ್ಠೆ ಕಾರಣ."

"ಈಗ ನನ್ನೇಕೆ ಇಲ್ಲಿ ಬರಮಾಡಿದೆ ಮಹಾಬಲ"

ಎಂದು ಉಮಾಪತಿ ಕೇಳಿದ.

"ನನಗೆ ಪೇಟೆ ವಾಸ, ವ್ಯಾಪಾರ, ಧನಸಂಪಾದನೆ ಎಲ್ಲಾ ಬೇಸರವನ್ನುಂಟುಮಾಡಿದೆ. ನನಗೂ ವಯಸ್ಸಾಗುತ್ತಾ ಬಂತು. ಉಳಿದಿರುವ ಆಯುಷ್ಯವನ್ನು ಹಳ್ಳಿಯಲ್ಲಿ ಕಳೆಯಬೇಕೆಂದು ಮಾಡಿದ್ದೇನೆ."

"ಇದೇನಯ್ಯ ಇದ್ದಕಿದ್ದಂತೆ ಇಷ್ಟು ವೈರಾಗ್ಯ ?"

"ವೈರಾಗ್ಯ ಏಕೆ ಹುಟ್ಟಿತೆಂಬುದನ್ನು ಹೇಳಲಾರೆ. ಆದರೆ ವೈರಾಗ್ಯ ಹುಟ್ಟಿರುವುದಂತೂ ನಿಜ."

"ನಾವೇನು ಮಾಡಬೇಕಾಗಿದೆ ಹೇಳು."

"ನನ್ನ ಪಾಲಿನ ಹಣ ಕೇಳಬೇಕೆಂದು ನಿಮ್ಮನ್ನು ಬರಮಾಡಿಕೊಂಡೆ"

"ನಿನಗೆ ಹಣಬೇಕಾದರೆ ನಾನು ಕೊಡುತ್ತೇನೆ ಮಹಾಬಲ. ಆದರೆ ಮಿಲ್ಲಿನ ಪಾಲುಗಾರಿಕೆ ನೀನು ಕಡಿದುಕೊಳ್ಳುವುದು ನನಗೆ ಸಮ್ಮತವಿಲ್ಲ."

"ಉಮಾಪತಿ, ದಯವಿಟ್ಟು ನನ್ನ ಅಭಿಪ್ರಾಯ ವಿರೋಧಿಸಬೇಡ. ಈ ಸಂಸ್ಥೆಯ ಬೆಳವಳಿಗೆಗೆ ಮನಃಪೂರ್ವಕವಾಗಿ ದುಡಿದ ನಾನು ಇದರಿಂದ ಹೊರಗೆ ಹೋಗಬೇಕಾದರೆ ಪ್ರಬಲ ಕಾರಣಗಳಿರಬೇಕಲ್ಲವೇ ?"

"ನನ್ನಿಂದ ಏನಾದರೂ ಅಪಚಾರವಾಗಿದೆಯೇ ಸ್ವಾಮಿ"

ಎಂದು ಅಂಜನಪ್ಪ ಕಳಕಳಿಯಿಂದ ಕೇಳಿದ.

"ಅಂಜನಪ್ಪನವರೇ, ನೀವೂ ಉಮಾಪತಿ ನನ್ನ ಅಣ್ಣ ತಮ್ಮಂದಿರಿಗಿಂತಲೂ ಹೆಚ್ಚಾಗಿ ನಡೆದುಕೊಂಡಿದ್ದೀರಿ. ನಿಮ್ಮ ಮೇಲೆ ನನ್ನ ಆಕ್ಷೇಪಣೆ ಏನೂ ಇಲ್ಲ."

"ನಿನಗೆ ಇರುವುದಕ್ಕೆ ಇಷ್ಟವಿಲ್ಲದಿದ್ದರೆ ಷೇರುಗಳನ್ನು ನಾಗೇಂದ್ರನ ಹೆಸರಿಗೆ ಮಾಡು. ಹೇಗೂ ಇಲ್ಲಿನ ಕೆಲಸಕಾರ್ಯ ಅವನೇ ನೋಡಿಕೊಂಡು ಹೋಗುತ್ತಿದ್ದಾನೆ."

ಉಮಾಪತಿಯ ಸಲಹೆ ಲೋಕಾಚಾರಕ್ಕೆ ಸಮ್ಮತವಾಗಿತ್ತು. ಆದರೆ ಮಹಾಬಲನಿಗೆ ಅದೇ ಬೇಡವಾಗಿದ್ದುದು.

"ಅವನಿಗೆ ನಾನು ಬೇರೆ ಕೆಲಸ ಹುಡುಕಿದ್ದೇನೆ."

"ನಿನ್ನ ಅಭಿಪ್ರಾಯ ಬದಲಾಯಿಸಲು ಸಾಧ್ಯವಿಲ್ಲವೇ ?"

"ಸಾಧ್ಯವಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ."

"ನಿನ್ನ ಪಾಲಿನ ಹಣ ನಿನಗೆ ಬೇಕು. ಎಷ್ಟುಬೇಕು ಹೇಳು—ಕೊಟ್ಟುಬಿಡುತ್ತೇನೆ."

"ನೀನೂ ಅಂಜನಪ್ಪನವರೂ ನಿರ್ಧರಿಸಿ ಏನೂ ಕೊಟ್ಟರೂ ನಾನು ಸ್ವೀಕರಿಸಲು ಸಿದ್ಧನಾಗಿದ್ದೇನೆ."

"ಈಗ ಮಿಲ್ ಆರುಲಕ್ಷ ಬೆಲೆ ಬಾಳುತ್ತದೆ. ಎರಡು ಲಕ್ಷ ನೀನು ಧಾರಾಳವಾಗಿ ತೆಗೆದುಕೊಳ್ಳಬಹುದು."

ಮಹಾಬಲ ಕ್ಷಣಕಾಲ ಆಲೋಚಿಸಿ

"ನಾನು ಒಂದೂವರೆ ಲಕ್ಷ ತೆಗೆದುಕೊಳ್ಳುತ್ತೇನೆ ಉಮಾಪತಿ. ಉಳಿದ ಐವತ್ತು ಸಾವಿರ ಅಂಜನಪ್ಪನವರಿಗೆ ಕೊಟ್ಟುಬಿಡು."

"ಸ್ವಾಮಿ...."

ಎಂದು ಅಂಜನಪ್ಪ ಬೆಕ್ಕಸಬೆರಗಾಗಿ ನೋಡಿದ.

"ನಾನು ಹಾಕಿದ ಹಣ ಮೂರಷ್ಟು ಬರಬೇಕಾದರೆ ನೀವೇ ಕಾರಣ ಅಂಜನಪ್ಪನವರೇ. ನನ್ನ ಲಾಭದ ಒಂದಂಶ ನಿಮಗೆ ಸೇರಬೇಕಾದುದು ನ್ಯಾಯವಾಗಿದೆ."

"ನಾಗೇಂದ್ರ...."

"ಅವನನ್ನು ಕೆಲಸದಿಂದ ನಿವೃತ್ತಿಮಾಡಿ. ಮುಂಬಯಿ ಬ್ರ್ಯಾಂಚಿನಲ್ಲಿ

ನಂಜುಂಡಯ್ಯನವರಿದ್ದಾರೆ. ಅವರನ್ನು ಇಟ್ಟುಕೊಳ್ಳುವುದು ಬಿಡುವುದು ನಿಮಗೆ ಸೇರಿದ ವಿಷಯ ?"

ಅಂಜನಪ್ಪ, ಉಮಾಪತಿ ಒಬ್ಬರ ಮುಖವನ್ನೊಬ್ಬರು ನೋಡಿ ಕೊಂಡರು.

"ಕಾಗದಪತ್ರ ಮಾಡುವಂತೆ ಸುಬ್ಬುಕೃಷ್ಣನಿಗೆ ಹೇಳುತ್ತೇನೆ. ನಾಳೆ ಈ ವ್ಯವಹಾರ ಮುಗಿಸಿಬಿಡೋಣ."

"ಇಷ್ಟೇಕೆ ಅವಸರ ಮಹಾಬಲ"

ಎಂದು ಉಮಾಪತಿ ಕೇಳಿದ.

ಮಹಾಬಲ ಅವನಿಗೆ ಉತ್ತರಕೊಡದೆ ನೇರವಾಗಿ ಸುಬ್ಬುಕೃಷ್ಣನ ಮನೆಗೆ ಬಂದ.

ಬಹಳ ದಿನಗಳ ತರುವಾಯ ಬಂದ ಗೆಳೆಯನನ್ನು ನೋಡಿ ಸುಬ್ಬು ಕೃಷ್ಣ ಸಂತೋಷ, ಆಶ್ಚರ್ಯ ವ್ಯಕ್ತಮಾಡಿದ.

ಮಹಾಬಲ ಕುಳಿತುಕೊಂಡು ಮಿಲ್ಲಿನ ವಿಷಯ ತಾನು ಮಾಡಿದ ನಿರ್ಧಾರ ಸುಬ್ಬುಕೃಷ್ಣನಿಗೆ ತಿಳಿಸಿ

"ನನ್ನ ಜಮೀನುಗಳನ್ನೆಲ್ಲಾ ವೆಂಕಟರಾಮು, ಸುಂದರೂ' ಸ್ವಾಮಿ ಹೆಸರಿಗೆ ಮಾಡಬೇಕು. ಅಂಗಡಿ ವೆಂಕಟರಾಮೂಗೆ. ಮನೆ ಸುಂದರೂ, ಸ್ವಾಮಿ ಹೆಸರಿಗೆ ಮಾಡಬೇಕು. ವೆಂಕಟರಾಮು, ಸುಂದರೂ ಸ್ವಾಮಿ ಹೆಸರಿಗೆ ನಗದು ಐವತ್ತು ಐವತ್ತು ಸಾವಿರ ರೂಪಾಯಿಗಳು."

"ನಾಗೇಂದ್ರನಿಗೆ !"

"ಅವನಿಗೆ ಐವತ್ತು ಸಾವಿರ ಕೊಡುತ್ತೇನೆ."

"ಇದೆಲ್ಲಾ ಏನು ವಿಪರೀತ ಮಹಾಬಲ. ಎಲ್ಲಿಯೋ ದೇಶಾಂತರ ಹೋಗುವವನ ಹಾಗೆ ಮಾತನಾಡುತ್ತಿರುವೆಯಲ್ಲಾ."

"ನನ್ನ ಆಸ್ತಿಗೆಲ್ಲಾ ನೀನೇ ಟ್ರಸ್ಟೀ. ಅವರವರ ಆಸ್ತಿಯ ಭಾಗ ಅವರ ಕೈಸೇರುವಂತೆ ನೋಡಿಕೊಳ್ಳುವುದು ನಿನ್ನ ಕರ್ತವ್ಯ. ಇದಕ್ಕೆ ನಿನಗೆ ಹತ್ತುಸಾವಿರ ತೆಗೆದಿಟ್ಟಿದ್ದೇನೆ."

"ಈ ನಿರ್ಧಾರದ ಕಾರಣ ನೀನು ಹೇಳದಿದ್ದರೆ ನಾನು ಮುಂದು ವರಿಯಲು ಸಾಧ್ಯವಿಲ್ಲ ಮಹಾಬಲ."

"ಕಾರಣ ಕೇಳಬೇಡ ಸುಬ್ಬು. ನಾನು ಬಹಳ ವಿಚಾರಮಾಡಿ ಈ ನಿರ್ಧಾರಕ್ಕೆ ಬಂದಿದ್ದೇನೆ."

"ಸದ್ಯ ನಿನ್ನ ಮನಸ್ಸು ನಿನ್ನ ಹತೋಟಿಯಲ್ಲಿಲ್ಲ. ನಿನ್ನ ವಿಚಾರ ನೋಡಿ ಜನ ನಗುತ್ತಾರೆ."

"ಅದರ ಕಾರಣ ಕೇಳಿದರೆ ಮತ್ತಷ್ಟು ನಗುತ್ತಾರೆ ಸುಬ್ಬುಕೃಷ್ಣ."

"ಕಾರಣ ಕೇಳುವ ಅಧಿಕಾರ ನನಗೂ ಇಲ್ಲವೇ ?"

ಮಹಾಬಲನಿಗೆ ತುಂಬ ಯೋಚನೆಗಿಟ್ಟುಕೊಂಡಿತು.

"ಸುಬ್ಬುಕೃಷ್ಣ—ನಿನ್ನಲ್ಲಿ ಯಾವದನ್ನೂ ಮರೆಮಾಚುವುದು ನನಗೆ ಸಾಧ್ಯವಿಲ್ಲ. ನನ್ನ ದುಃಖ ನಿನ್ನಲ್ಲಿ ತೋಡಿಕೊಳ್ಳುತ್ತೇನೆ. ಆದರೆ ನೀನು ನನಗೆ ವಚನ ಕೊಡಬೇಕು."

"ಏನು ಹೇಳು."

"ಮನಸ್ಸು ಬದಲಾಯಿಸು ಎಂದು ಹೇಳಕೂಡದು."

"ಬದಲಾಯಿಸಬಾರದೆಂದು ನೀನು ನಿರ್ಧರಿಸಿರುವಾಗ ನಾನು ಒತ್ತಾಯಮಾಡಿ ಏನು ಸಾರ್ಥಕ ?"

"ಈ ವಿಷಯ ತಾಯಿಯ ಕಿವಿಗೆ ಹಾಕಬಾರದು."

"ಆಗಬಹುದು."

ಮಹಾಬಲ ಕೂಲಂಕಷವಾಗಿ ನಾಗೇಂದ್ರನಿಗೂ ರಂಗನಾಯಕಿಗೂ ಇದ್ದ ಸಂಬಂಧವನ್ನು ವಿವರಿಸಿದ. ಸುಬ್ಬುಕೃಷ್ಣ ಸ್ತಂಭೀಭೂತನಾದ.

"ನಾಗೇಂದ್ರ........ಇಂಥ........"

"ತಪ್ಪು ಅವನದಲ್ಲ ಸುಬ್ಬೂ....ನನ್ನದು....ಮುಪ್ಪಿಗೆ ಪ್ರಾಯದ ಮೈತ್ರಿ ಹೇಗಾಗಬೇಕು ಹೇಳು."

"ಮಹಾಬಲ ನಿನಗೆ ಸಮಾಧಾನ ಹೇಳುವ ಸಾಮರ್ಥ್ಯ ನನ್ನಲ್ಲಿಲ್ಲಪ್ಪಾ. ಈ ಸಂಬಂಧ ನಿನಗೆ ಮಾಡಿಸಿದ ಅಪರಾಧ ನನ್ನದು."

ಮಹಾಬಲ ಅಲ್ಲಿ ಹೆಚ್ಚು ಹೊತ್ತು ಕೂಡಲಿಲ್ಲ.

"ಕಾಗದ ಪತ್ರಗಳನ್ನೆಲ್ಲಾ ಸಿದ್ಧಮಾಡಿಕೊಂಡು ಉಮಾಪತಿ ಅಂಜನಪ್ಪನವರನ್ನು ಕಂಡು ಮಿಲ್ಲಿನ ವ್ಯವಹಾರವನ್ನು ನಾಳೆಯೇ ಮುಗಿಸಿಬಿಡು."

"ನೀನು...."

"ನಾನು ಸದ್ಯಕ್ಕೆ ಎಲ್ಲಿಗೂ ಹೋಗುವುದಿಲ್ಲ."

ಮಾರನೆಯ ದಿನವೇ ಮಹಾಬಲ ನಾಗೇಂದ್ರನಿಗೆ ತಾರುಮಾಡಿ ಕೂಡಲೇ ನಂಜುಂಡಯ್ಯನವರನ್ನೂ ಕರೆದುಕೊಂಡು ಬರುವಂತೆ ತಿಳಿಸಿದ.

ನಾಗೇಂದ್ರ ನಂಜುಂಡಯ್ಯನವರೊಂದಿಗೆ ಬೆಂಗಳೂರು ತಲಪುವುದಕ್ಕೆ ಎರಡು ದಿನಗಳು ಹಿಡಿದವು. ಆ ವೇಳೆಗೆ ಮಹಾಬಲ ಕಾಗದ ಪತ್ರಗಳೆಲ್ಲ ವನ್ನೂ ಕಾನೂನುರೀತ್ಯಾ ಸುಬ್ಬುಕೃಷ್ಣನ ಕೈಯಲ್ಲಿ ಮಾಡಿಸಿದ.

ನಾಗೇಂದ್ರ ಊರಿಗೆ ಬಂದ ಬೆಳಿಗ್ಗೆ ಮಹಾಬಲ ಎಂದಿನಂತೆ ಮಗ ನೊಂದಿಗೆ ಮಾತನಾಡಿ, ನಂಜುಂಡಯ್ಯನವರ ಯೋಗಕ್ಷೇಮ ವಿಚಾರಿಸಿ,

"ನಾಗೇಂದ್ರ, ನೀನೂ ನಂಜುಂಡಯ್ಯನವರೂ ಮನೆಯಲ್ಲಿಯೇ ಇರಿ ನಾನು ಸ್ವಲ್ಪ ಹೊರಗೆ ಹೋಗಿ ಬೇಗ ಬರುತ್ತೇನೆ."

"ನೀನು ಬರುವಷ್ಟರಲ್ಲಿ ನಾನು ಮಿಲ್‌ಕಡೆ ಹೋಗಿಬರುತ್ತೇನೆ."

"ಬೇಡ. ಮನೆಯಲ್ಲಿರು. ನಾನು ಬಂದಮೇಲೆ ಊಟ ಮುಗಿಸಿ ಕೊಂಡು ಹೋಗಿ ಬರುವೆಯಂತೆ."

ಎಂದು ಹೇಳಿ ಹೊರಗೆ ಹೋದ.

ತಂದೆಯ ನಡೆವಳಿಕೆ ನಾಗೇಂದ್ರನಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತು. ರಂಗನಾಯಕಿಯನ್ನು ಕಂಡು,

"ಅಣ್ಣ ಏಕೆ ಹೀಗಿದ್ದಾನೆ" ಎಂದು ಕೇಳಿದ.

"ನನಗೂ ಅರ್ಥವಾಗುತ್ತಿಲ್ಲ."

"ಈ ನಾಲ್ಕೈದು ದಿವಸಗಳಿಂದ ಹೇಗಿದ್ದ."

"ಸರಿಯಾಗಿಯೇ ಇದ್ದಾರೆ. ನನ್ನ ಪೇಟೆಗೆ ಕರೆದುಕೊಂಡು ಹೋಗಿ ನಿಮ್ಮ ಮಗುವಿಗೆ ಒಡವೆ ವಸ್ತ್ರಕೊಂಡರು."

"ಅನುಮಾನ ಬಂದಿರಬಹುದೇ ?"

"ಬರುವುದಕ್ಕೆ ಅವಕಾಶವಿಲ್ಲ."

"ನನ್ನ ಕಾಗದಗಳನ್ನೇನು ಮಾಡಿದೆ ?"

"ಜೋಪಾನವಾಗಿ ಮುಚ್ಚಿಟ್ಟಿರುವೆ."

"ಅಂಚೆಯಾಳು ಯಾರ ಕೈಗೆ ಕಾಗದ ಕೊಡುತ್ತಿದ್ದ."

"ನನ್ನ ಕೈಗೇ ಕೊಡುತ್ತಿದ್ದ."

"ನನಗೇಕೋ ಭಯವಾಗುತ್ತಿದೆ."

"ವಿನಾಕಾರಣ ಏಕೆ ಅಧೈರ್ಯಪಟ್ಟುಕೊಳ್ಳುವಿರಿ. ತಂದೆಯನ್ನೂ ಬರಮಾಡಿರುವುದು ನೋಡಿದರೆ ಮಿಲ್ ಸಂಬಂಧ ಏನೋ ಮಾತನಾಡುವುದಕ್ಕಿರಬಹುದು."

ರಂಗನಾಯಕಿಯ ಉತ್ತರ ನಾಗೇಂದ್ರನಿಗೆ ತೃಪ್ತಿಯನ್ನುಂಟುಮಾಡಲಿಲ್ಲ.

ಮಹಾಬಲರಾಯ ಹನ್ನೊಂದು ಗಂಟೆಗೆ ಮನೆಗೆ ಬಂದವನು ನಾಗೇಂದ್ರನನ್ನೂ ನಂಜುಂಡಯ್ಯನವರನ್ನೂ ಜತೆಯಲ್ಲಿ ಕೂಡಿಸಿಕೊಂಡು ಊಟಮುಗಿಸಿದ.

ರಂಗನಾಯಕಿಯ ಊಟಮುಗಿದಮೇಲೆ ನಾಗೇಂದ್ರ, ನಂಜುಂಡಯ್ಯ, ರಂಗನಾಯಕಿಯರನ್ನು ತನ್ನ ರೂಮಿಗೆ ಬರಮಾಡಿಕೊಂಡ.

ನಾಗೇಂದ್ರನ ಎದೆ ಡವಡವ ಗುಟ್ಟುತ್ತಿತ್ತು.

ರಂಗನಾಯಕಿಯ ಮುಖ ನಿಸ್ತೇಜವಾಗಿತ್ತು.

ನಂಜುಂಡಯ್ಯ ಎಲ್ಲರ ಮುಖ ನೋಡುತ್ತ ಕುಳಿತರು.

"ಕುಳಿತುಕೋ ನಾಗೇಂದ್ರ—ನೀನೂ ಕುಳಿತುಕೋ ರಂಗೂ"

ಎಂದು ಮಹಾಬಲ ಅವರಿಬ್ಬರನ್ನೂ ಕೂಡಿಸಿ ತನ್ನ ಡ್ರಾಯರಿಂದ ಉದ್ದನೆಯ ಲಕೋಟೆಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು

"ನಿಮ್ಮನ್ನೆಲ್ಲಾ ಇಲ್ಲಿಗೇಕೆ ಬರಮಾಡಿಕೊಂಡಿರುವೆ ಎಂದು ನಿಮಗೆ ಆಶ್ಚರ್ಯವಾಗಿರಬಹುದು. ಮಕ್ಕಳು ವಯಸ್ಸಿಗೆ ಬಂದಮೇಲೆ ಸಂಸಾರದ ಜವಾಬ್ದಾರಿ ಅವರ ಮೇಲೆ ಹೊರೆಸಿ ಹಿರಿಯರು ತಾವು ವಿಶ್ರಾಂತರಾಗುವುದು ಒಳ್ಳೆಯದು ಅಲ್ಲವೇ ನಂಜುಂಡಯ್ಯನವರೇ ?"

"ಎಲ್ಲಾ ತಿಳಿದವರು ತಮಗೆ ನಾನೇನು ಹೇಳಲಿ ಸ್ವಾಮಿ"

"ಆಸ್ತಿಪಾಸ್ತಿಯ ಬಗ್ಗೆ ನಾನು ಒಂದು ವ್ಯವಸ್ಥೆ ಮಾಡಿದ್ದೇನೆ. ಕೇಳಿ"

ಎಂದು ಸ್ಟ್ಯಾಂಪ್ ಕಾಗದ ತೆಗೆದು ಓದಿದ.

ಸ್ಥಿರಸ್ವತ್ತುಗಳಲ್ಲಿ ತನಗೆ ಯಾವದನ್ನೂ ಕೊಡದೆ ಕೇವಲ ಐವತ್ತು ಸಾವಿರ ನಿಷ್ಕರ್ಷಿಸಿರುವುದನ್ನು ನಾಗೇಂದ್ರ ಗಮನಿಸಿದ.

ಮಹಾಬಲನ ಮಹಾನಿರ್ಧಾರದ ಕಾರಣ ಥಟ್ಟನೆ ರಂಗನಾಯಕಿಯ ಮನಸ್ಸಿಗೆ ಹೊಳೆಯಿತು. 'ಅವರಿಗೆ ಹೇಗೆ ಗೊತ್ತಾಯಿತು' ಎಂಬ ಸಮಸ್ಯೆ ಅವಳನ್ನು ಕಾಡತೊಡಗಿತು.

"ನಾಗೇಂದ್ರ....ನೀನು ಬೆಂಗಳೂರು ಬಿಟ್ಟು ಹೋಗುವದಕ್ಕೆ ಒಪ್ಪುವ ದಾಗಿದ್ದರೆ ಈ ಐವತ್ತು ಸಾವಿರ ನಿನ್ನ ಕೈ ಸೇರುತ್ತದೆ."

"ನಾನು ಬೆಂಗಳೂರಿನಲ್ಲಿ ಇರಕೂಡದೇ ?"

"ಇರಕೂಡದು. ಈ ಮನೆಗೂ ನಿನಗೂ ಇದ್ದ ಋಣಾನುಬಂಧ ಹರಿದುಹೋಯಿತು."

ನಂಜುಂಡಯ್ಯನವರು ಮಾತನಾಡಲೋ ಬೇಡವೋ ಎಂದು ಯೋಚಿಸುತ್ತಿದ್ದರು. ಅವರು ಮಾತನಾಡಲು ಪ್ರಯತ್ನಿಸಿ ಸುಮ್ಮನಾದುದನ್ನು ಮಹಾಬಲ ಗಮನಿಸಿ

"ನೀವು ಏನೋ ಹೇಳಬೇಕೆಂದಿರುವ ಹಾಗೆ ಕಾಣುತ್ತದೆ ನಂಜುಂಡಯ್ಯನವರೇ."

"ತಾವು ಯಾವ ಕಾರಣಕ್ಕೆ ಈ ವ್ಯವಸ್ಥೆ ಮಾಡುತ್ತಿರುವಿರೋ ನನಗೆ ಗೊತ್ತಿಲ್ಲ. ಆದರೆ ಈ ಗೊಂದಲದಲ್ಲಿ ರಂಗನಾಯಕಿಯ ಗತಿಯೇನು ಎಂದು ಯೋಚಿಸುತ್ತಿದ್ದೆ."

"ಯೋಚನೆ ಮಾಡಬೇಡಿ ನಂಜುಂಡಯ್ಯನವರೇ. ನಿಮ್ಮ ಮಗಳಿಗೆ ನಾನು ತಾಳಿ ಕಟ್ಟಿರುವ ವಿಷಯ ಮರೆತಿಲ್ಲ. ಅವಳು ಎಲ್ಲಿದ್ದರೂ ತಿಂಗಳಿಗೆ ನೂರೈವತ್ತು ರೂಪಾಯಿ ಕಳುಹಿಸುವಂತೆ ಸುಬ್ಬುಕೃಷ್ಣನಿಗೆ ಹೇಳುತ್ತೇನೆ. ಅವಳು ಉಪಯೋಗಿಸುತ್ತಿರುವ ನನ್ನ ಗತಿಸಿದ ಹೆಂಡತಿಯರ ಒಡವೆ ವಸ್ತ್ರಗಳ ಮೇಲೆ ಅವಳಿಗೆ ಹಕ್ಕಿಲ್ಲ; ಅವಳಿಗಾಗಿ ನಾನು ತೆಗೆದುಕೊಟ್ಟಿರುವ ಒಡವೆ ವಸ್ತ್ರಗಳನ್ನು ಅವಳು ತೆಗೆದುಕೊಂಡು ಹೋಗಬಹುದು."

"ತೆಗೆದುಕೊಂಡು ಎಲ್ಲಿಗೆ ಹೋಗುವುದು ?."

"ಅವಳನ್ನೇ ಕೇಳಿ."

ನಂಜುಂಡಯ್ಯನವರು ಮುಖ ಕೆಂಪಗೆ ಮಾಡಿಕೊಂಡು

"ಏನಾಯಿತೇ ?"

ಎಂದು ಕೇಳಿದರು. ರಂಗನಾಯಕಿ ಬಿಕ್ಕಿ ಬಿಕ್ಕಿ ಅಳುವುದಕ್ಕಾ

ರಂಭಿಸಿದಳು. ನಂಜುಂಡಯ್ಯನವರು ಅವಳ ಸಮೀಪಕ್ಕೆ ಬಂದು ಅವಳನ್ನು ಹಿಡಿದಲುಗಿಸಿ ಕೇಳಿದರು.

"ನನಗೊಂದೂ ಗೊತ್ತಿಲ್ಲ ಅಣ್ಣಾ"

ಎಂದಳು.

ಮಹಾಬಲ ಸಾವಕಾಶವಾಗಿ ಎದ್ದು ಬೀಗದ ಕೈಗೊಂಚಲು ತೆಗೆದು ಕೊಂಡು ರಂಗನಾಯಕಿಯ ಆಲ್ಮೀರಾ ತೆಗೆದು, ನಾಗೇಂದ್ರನ ಕಾಗದಗಳ ಕಟ್ಟನ್ನು ನಂಜುಂಡಯ್ಯನವರ ಕೈಗಿತ್ತು

"ಇದು ನಿಮ್ಮ ಮಗಳು—ನನ್ನ ಮಗನ ಪತ್ರವ್ಯವಹಾರ. ಅವಳು ತಾಳಿ ಕಟ್ಟಿಸಿಕೊಂಡಿದ್ದು ನನ್ನ ಕೈಯಲ್ಲಿ—ದಾಂಪತ್ಯಮಾಡಿದ್ದು ನನ್ನ ಮಗನ ಜತೆಯಲ್ಲಿ! ಈಗಲಾದರೂ ವಿಶದವಾಯಿತೇ ನಂಜುಂಡಯ್ಯನವರೇ"

ಎಂದು ಹೇಳಿದ.

ನಂಜುಂಡಯ್ಯನವರು ಮಗಳ ಕಡೆ ತಿರುಗಿ ಕಟಕಟನೆ ಹಲ್ಲುಕಡಿದರು.

ನಾಗೇಂದ್ರ, ರಂಗನಾಯಕಿ ಇಬ್ಬರೂ ಮಿಂಚಿನಂತೆದ್ದು ಮಹಾಬಲನ ಪಾದಗಳನ್ನು ಹಿಡಿದು

"ಕ್ಷಮಿಸಿ" ಎಂದರು.

ಮಹಾಬಲರಾಯನ ಕಣ್ಣುಗಳಲ್ಲಿಯೂ ನೀರು ತುಂಬಿ ಬಂತು. ರಂಗನಾಯಕಿಯ ಭುಜದಮೇಲೆ ಕೈಯಿಟ್ಟು

"ನಿನಗೆ ನಾನು ಯಾವುದಕ್ಕೂ ಕಡಿಮೆ ಮಾಡಲಿಲ್ಲ. ಇಬ್ಬರು ಸಾಧ್ವಿಯವರ ಕೈಹಿಡಿದೆ. ಅವರಿಬ್ಬರೂ ನನ್ನ ಮನೆಯ ಪುಣ್ಯದೇವತೆಯರಾದರು. ನನ್ನ ಪೂರ್ವಾರ್ಜಿತ ಕರ್ಮ ನಿನ್ನನ್ನು ಗಂಟುಹಾಕಿತು. ಈ ಮನೆಯನ್ನೂ ನನ್ನನ್ನೂ ನಾಶಮಾಡಿಬಿಟ್ಟೆ. ಹೋಗು—ಇನ್ನು ನನಗೆ ಮುಖ ತೋರಿಸಬೇಡ. ನಿನ್ನ ಕರ್ಮದ ಫಲ ನೀನೇ ಅನುಭವಿಸುವೆ. ನನ್ನಿಂದ ಕ್ಷಮೆ ಕೋರಬೇಡ.—ನಂಜುಂಡಯ್ಯನವರೇ, ನಿಮ್ಮ ಮಗಳನ್ನು ಕರೆದುಕೊಂಡು ನೀವು ಇಂದೇ ಮುಂಬಯಿಗೆ ಪ್ರಯಾಣಮಾಡಬೇಕು.

"ನಾಗೇಂದ್ರ, ನೀನು ನನ್ನ ಮನೆ ಹಾಳುಮಾಡಿದೆ. ಆದರೆ ನಿನ್ನ ಮನೆ ಹಾಳುಮಾಡಲು ನನಗೆ ಇಚ್ಛೆಯಿಲ್ಲ. ನಾನು ತಂದೆ ನೀನು ಮಗ ಎನ್ನುವ ಸಂಬಂಧ ಎಂದೋ ಕಡಿದುಹೋಯಿತು. ತಾಯಿ ಯಾರು, ಹೆಂಡತಿ ಯಾರು

ಎನ್ನುವ ಪರಿಜ್ಞಾನವಿಲ್ಲದ ಪಶುವನ್ನು ಯಾವ ದೇವರೂ ಕಾಪಾಡಲಾರ. ನಿನ್ನ ಪಾಪಿ ಮುಖ ನನಗೆ ತೋರಿಸಬೇಡ—ಸುಲೋಚನೆಯ ಪುಣ್ಯ ನಿನ್ನನ್ನು ಕಾಪಾಡಬೇಕಷ್ಟೆ”

ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಹೋದ.

ನಾಗೇಂದ್ರ ಮನೆಯಲ್ಲಿ ನಿಲ್ಲಲಿಲ್ಲ. ತನ್ನ ಬಟ್ಟೆಬರೆಯನ್ನೂ ತೆಗೆದು ಕೊಳ್ಳದೆ ಮಧ್ಯಾಹ್ನಾನಂತರದ ರೈಲಿನಲ್ಲಿ ಮೈಸೂರಿಗೆ ಪ್ರಯಾಣ ಬೆಳಸಿದ. ಸುಲೋಚನೆಯನ್ನು ಕಾಣಲು ಅವನ ಮನಸ್ಸು ತವಕಪಡುತ್ತಿತ್ತು.

ರಾತ್ರಿ ರೈಲಿಗೆ ಹೊರಡುವ ವೇಳೆಯಾಯಿತು. ಮಹಾಬಲ ಮನೆಗೆ ಬಂದಿರಲಿಲ್ಲ. ಡ್ರೈವರು ನೋಟು ತುಂಬಿದ ಒಂದು ಲಕೋಟೆ ತಂದು ರಂಗನಾಯಕಿಯ ಕೈಗಿತ್ತು

“ರೈಲಿಗೆ ಕರೆದುಕೊಂಡು ಹೋಗಿ ಬಿಡು ಎಂದು ರಾಯರು ಹೇಳಿದ್ದಾರೆ.’’

ಎಂದ. ರಂಗನಾಯಕಿ ತಂದೆಯ ಕಡೆ ತಿರುಗಿ

“ಅವರಿಗೆ ಹೇಳದೆ ಹೇಗೆ ಹೊರಡುವುದು.”

ಎಂದಳು. ನಂಜುಂಡಯ್ಯನವರಿಗೆ ಕೋಪ ಉಕ್ಕಿಬಂತು.

“ಹೇಳಿದ್ದೆಲ್ಲಾ ಮುಗಿಯಿತಲ್ಲ. ಸಾಕು ನಡಿ ನಿನ್ನನ್ನು ನೋಡಿ ನಿಮ್ಮಮ್ಮ ಹೊಟ್ಟೆಗೆ ಹಾಲು ಹುಯಿದುಕೊಳ್ಳುವುದಕ್ಕೆ ಕಾದಿದ್ದಾಳೆ’’

ಎಂದು ಮಗಳನ್ನು ರೈಲಿಗೆ ಹೊರಡಿಸಿದರು.

ರಾತ್ರಿ ವೆಂಕಟರಾಮು ಮನೆ ಶೂನ್ಯವಾಗಿದ್ದುದನ್ನು ಕಂಡು ಕಾಡಮ್ಮನವರನ್ನು ಹೋಗಿ ಕೇಳಿದ

“ನಿಮ್ಮ ಚಿಕ್ಕಮ್ಮ, ನಾಗೇಂದ್ರ ಇವತ್ತು ಊರಿಗೆ ಪ್ರಯಾಣ ಮಾಡಿದರಪ್ಪಾ’’

ಎಂದು ಅವರು ತಿಳಿಸಿದರು. ತಂದೆಯ ರೂಮಿಗೆ ಬಂದು

“ಅಣ್ಣಾ, ಚಿಕ್ಕಮ್ಮ ಇವತ್ತು ಊರಿಗೆ ಹೋದರಂತೆ-ನನಗೆ ಹೇಳಲೇ ಇಲ್ಲ.’’

ಎಂದ. ಮಹಾಬಲ ಮಗನನ್ನು ಹತ್ತಿರ ಕರೆದು, ಅವನನ್ನು ನೇವರಿಸುತ್ತಾ

"ಅವರು ಹೋದರು. ಮತ್ತೆ ಬರುವುದಿಲ್ಲ. ವೆಂಕಟರಾಮು ಇಂದಿನಿಂದ ಮನೆಗೆ ನೀನೇ ಯಜಮಾನ. ನಿನಗೆ ಯಾವ ಸಹಾಯ ಬೇಕಾದರೂ ಸುಬ್ಬುಕೃಷ್ಣನನ್ನು ಕೇಳು."

"ಅಣ್ಣಾ—ಇದೇನು ಹೀಗೆ ಮಾತನಾಡುತ್ತಿರುವೆ, ಏನಾಯಿತು?"

"ಅದನ್ನು ಮಾತ್ರ ಕೇಳಬೇಡ ವೆಂಕಟರಾಮು. ನನ್ನ ಕೊನೆಯ ದಿನ ಸಮೀಪಿಸಿದೆ. ನನಗೊಂದು ಉಪಕಾರ ಮಾಡು."

"ಹೇಳು ಅಣ್ಣಾ."

"ನಾನು....ನಾನು ಕಣ್ಣುಮುಚ್ಚಿಕೊಂಡರೆ ನನ್ನ ಶವ ಮುಟ್ಟುವುದಕ್ಕೆ ನಾಗೇಂದ್ರನಿಗೆ ಅವಕಾಶಕೊಡಬೇಡ. ನನ್ನ ಉತ್ತರಕ್ರಿಯೆ ಮಾಡುವುದಕ್ಕೆ ನೀವು ಮೂವರೇ ಬಾಧ್ಯರು."

"ಅಣ್ಣಾ....ಇದೇನು ಮಾತನಾಡುತ್ತಿರುವೆ?"

ಮಹಾಬಲ ಮಾತನಾಡದೆ ಮಗನನ್ನು ನೇವರಿಸಿದ. ಮಸ್ತಕಾಭಿಷೇಕದಂತೆ ಅವನ ಕಣ್ಣೀರು ವೆಂಕಟರಾಮುವಿನ ತಲೆಯ ಮೇಲೆ ಬಿತ್ತು.

ಕತ್ತೆತ್ತಿ ತಂದೆಯನ್ನು ನೋಡಿ ವೆಂಕಟರಾಮು

"ನನಗೊಂದೂ ಅರ್ಥವಾಗುತ್ತಿಲ್ಲ. ಅಣ್ಣಾ."

"ಅರ್ಥವಾಗುತ್ತದೆ ವೆಂಕಟರಾಮು. ನಿನ್ನ ತಂದೆಯ ಹೃದಯ ಏಕೆ ಪಾಷಾಣವಾಯಿತೆಂಬುದು ಅರ್ಥವಾಗುತ್ತದೆ. ಹೋಗು—ಎಲ್ಲ ಮರೆತು ನಿನ್ನ ಕೆಲಸಕಾರ್ಯ ನೋಡಿಕೋ ಹೋಗು."

ವೆಂಕಟರಾಮು ಎದ್ದು ತಂದೆಯ ದುಃಖಪೂರ್ಣ ಮುಖ ನೋಡಿದ. ಅವನ ಕರುಳು ಕಿತ್ತು ಬರುವಂತಾಯಿತು. ತಂದೆಯ ದುಃಖೋಪಶಮನಕ್ಕೆ ಏನೂ ಮಾಡಲಾಗದ ತನ್ನ ಅಸಹಾಯಕತೆಯನ್ನು ನೆನೆದು ಮಮ್ಮಲ ಮರುಗಿದ.

ತೈಲ ಇಂಗಿಹೋಗಿ ಬತ್ತಿ ಉರಿಯುತ್ತಿದ್ದ ಬಾಳಹಣತೆಯನ್ನು ಮಹಾಬಲ ನೋಡಿದ. 'ಬತ್ತಿ ಬೇಗ ಉರಿದು ಹೋಗಬಾರದೇ' ಎಂಬ ಬಯಕೆಯೊಂದೇ ಅವನ ಹೃದಯದಲ್ಲಿದ್ದುದು.

---

# ಅ. ನ. ಕೃಷ್ಣರಾಯರ ಕೃತಿಗಳು

## ನಮ್ಮ ಪ್ರಕಟಣೆಗಳು

| | | | | |
|---|---|---|---|---|
| ಮುಯ್ಯಿಗೆ ಮುಯ್ಯಿ | ಕಾದಂಬರಿ | ರೂ. ೨ | ೪ | ೦ |
| ತಾಯಿಯ ಕರುಳು | ,, | ೪ | ೧೨ | ೦ |
| ಹೊಸಲುದಾಟದ ಹೆಣ್ಣು | ,, | ೨ | ೧೫ | ೦ |
| ಜೀವನಯಾತ್ರೆ | ,, | ೧ | ೧೨ | ೦ |
| ಸಾಹಿತ್ಯರತ್ನ | ,, | ೪ | ೦ | ೦ |
| ಉದಯರಾಗ | ,, | ೧ | ೧೨ | ೦ |
| ಸಂಧ್ಯಾರಾಗ | ,, | ೨ | ೪ | ೦ |
| ಅರುಳುಮರುಳು | ,, | ೪ | ೮ | ೦ |
| ಶಿಲ್ಪಿ | ಕತಾಸಂಗ್ರಹ | ೧ | ೪ | ೦ |
| ಕಿಡಿ | ,, | ೧ | ೪ | ೦ |
| ಮಿಂಚು | ,, | ೧ | ೮ | ೦ |
| ಸ್ವರ್ಣಮೂರ್ತಿ | ನಾಟಕ | ೦ | ೧೨ | ೦ |
| ಕಿತ್ತೂರ ರಾಣಿ ಚೆನ್ನಮ್ಮ | | ೦ | ೧೨ | ೦ |
| ಹಿರಣ್ಯಕಶಿಪು | ,, | ೦ | ೧೨ | ೦ |
| ಗೋಮುಖವ್ಯಾಘ್ರ | ,, | ೦ | ೮ | ೦ |
| ಮದುವೆಯೋ ಮನೆಹಾಳೋ | ,, | ೧ | ೮ | ೦ |
| ರಜಪೂತಲಕ್ಷ್ಮೀ | ,, | ೧ | ೧೨ | ೦ |
| ಕನ್ನಡಸಾಹಿತ್ಯ ಮತ್ತು ಸಂಸ್ಕೃತಿ | ಸಾಹಿತ್ಯ ಪ್ರಬಂಧ | ೧ | ೮ | ೦ |
| ಕನ್ನಡ ಕುಲರಸಿಕರು | ,, | ೨ | ೮ | ೦ |

## ಅಚ್ಚಿನಲ್ಲಿ

| | | |
|---|---|---|
| ಕಣ್ಣೀರು | .... | ಕಾದಂಬರಿ |
| ಅಗ್ನಿಕನ್ಯೆ | .... | ಕತಾಸಂಗ್ರಹ |
| ಕಣ್ಣು ಮುಚ್ಚಾಲೆ | .... | ,, |
| ಕರ್ನಾಟಕದ ಕಲಾವಿದರು. ಭಾಗ ೨ | .... | ಕಲಾವಿಮರ್ಶೆ |

**ಆನಂದ್ ಬ್ರದರ್ಸ್**

ಬೆಂಗಳೂರು ೨

